ಪ್ರಕಾಶಕರು
ನವ್ಯಸಾಹಿತ್ಯ ಪ್ರಕಾಶನ
ಮೈಸೂರು



ರಕ್ಷಾಪತ್ರ ರಚನೆ
ಎಂ. ಎಸ್. ಚಂದ್ರಶೇಖರ್
ಮೈಸೂರು

ರಕ್ಷಾಪತ್ರ ಮುದ್ರಣ
ಶ್ರೀ ರಾಮಕೃಷ್ಣ ಪ್ರೆಸ್
ಬೆಂಗಳೂರು

ಮುದ್ರಣ
ಶ್ರೀ ಸೀತಾರಾಘವ ಪ್ರೆಸ್
ರಾಮಸ್ವಾಮಿ ಸರ್ಕಲ್
ಮೈಸೂರು

# ಪ್ರಕಾಶಕರ ಮಾತು

---

ಸುಮಾರು ಎರಡು ವರ್ಷಗಳ ಹಿಂದೆಯೇ—ಆಗಿನ್ನೂ ಕನ್ನಡದಲ್ಲಿ ಕೈ ಹೊತ್ತಗೆಗಳು ಪ್ರಾರಂಭವಾಗಿರಲಿಲ್ಲ—ನಾವು ಇಂಗ್ಲಿಷ್, ಹಿಂದಿ, ತಮಿಳು ಭಾಷೆಗಳಲ್ಲಿರುವಂತೆಯೇ ಕನ್ನಡದಲ್ಲಿಯೂ ಸುಲಭ ಬೆಲೆಯಲ್ಲಿ ಕೈಹೊತ್ತಗೆಗಳನ್ನು ಪ್ರಕಟಿಸುವ ಅಭಿಲಾಷೆಯನ್ನು, ಶ್ರೀ ತ.ರಾ.ಸು. ಮತ್ತು ಶ್ರೀ ಅ. ನ. ಕೃ ಅವರಿಗೆ ತಿಳಿಸಿದ್ದೆವು. ಅವರೂ ಇದನ್ನು ಅನುಮೋದಿಸಿ ನಮಗೆ ನೆರವು ನೀಡುವುದಾಗಿ ಭರವಸೆ ಕೊಟ್ಟರು. ಆದರೆ ಕಾರಣಾಂತರಗಳಿಂದ ನಮ್ಮ ಈ ಯೋಜನೆ ಸಫಲವಾಗಬೇಕಾದರೆ ಇಷ್ಟು ಕಾಲ ಹಿಡಿಯಿತು.

ಇತ್ತೀಚೆಗೆ ನಮ್ಮ ಭಾಷೆಯಲ್ಲಿ ಕೈಹೊತ್ತಗೆಗಳು ಹೇರಳವಾಗಿ ಪ್ರಕಟವಾಗಿವೆ; ಬಹಳ ಮಂದಿ ಹೊಸ ಲೇಖಕರು—ಅದರಲ್ಲಿಯೂ ಕಾದಂಬರಿಕಾರರು ಬೆಳಕಿಗೆ ಬಂದಿದ್ದಾರೆ. ಹೊಸ ಹೊಸ ಪುಸ್ತಕಗಳು ಬಂದಂತೆಲ್ಲಾ ಓದುಗರೂ, ತಾವು ಕೊಂಡುಕೊಳ್ಳುವ ಪುಸ್ತಕಗಳನ್ನು ಆರಿಸಿಕೊಳ್ಳಲು ಪ್ರಾರಂಭ ಮಾಡಿದ್ದಾರೆ.

ಆದರೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹೆಸರಾಂತ ಕಾದಂಬರಿಕಾರರಾದ ಶ್ರೀ ತ. ರಾ. ಸು. ಅವರ ಕೃತಿಗಳು 'ಆರಿಸಿಕೊಳ್ಳುವ' ಜಾತಿಗೆ ಸೇರಿರುವುದಿಲ್ಲ. ಹೊಸ ಹೊಸದಾಗಿ ಅವರ ಕಾದಂಬರಿಗಳು ಎಷ್ಟು ಪ್ರಕಟವಾದರೂ ಅವು ಓದುಗರಿಗೆ ಸಾಲದು. ತ.ರಾ.ಸು. ಅವರ ಕೃತಿಗಳೆಂದರೆ ಅಷ್ಟು ಆಸಕ್ತಿ ಓದುಗರಿಗೆ! ಇದಕ್ಕೆ ಕಾರಣ ತ. ರಾ. ಸು. ಅವರ ಕಾದಂಬರಿಗಳ ವಸ್ತು ಮಾತ್ರವಲ್ಲ, ಅವರದೇ ಒಂದು ವಿಶಿಷ್ಟವಾದ ಶೈಲಿ; ಪಾತ್ರ ಪೋಷಣೆ; ಕತೆ ಹವಣಿಸಿ, ಬೆಳೆಸಿ, ಕೊನೆಗಾಣಿಸುವ ವಿಧಾನ. ಯಾವುದೇ ಒಂದು ಸಾಮಾನ್ಯ ವಿಷಯವೇ ಆಗಲಿ, ಅದನ್ನು, ಓದುತ್ತಿರುವಂತೆಲ್ಲಾ ಓದುಗರ ಆಸಕ್ತಿ ಹೆಚ್ಚುತ್ತಾ ಹೋಗುವಂತೆ ಚಿತ್ರಿಸುತ್ತಾರೆ. ಕಾದಂಬರಿಯ ಅನೇಕ ಪಾತ್ರಗಳೊಡನೆ, ಬೆರೆತು, ಆ ಪಾತ್ರಗಳ ಕಷ್ಟ ಸುಖಗಳಲ್ಲೆಲ್ಲಾ ನಾವೂ ಭಾಗಿಗ

ಕೆಂದು ಭಾವಿಸಿ ಬಿಡಬೇಕು— ಅಷ್ಟು ಮುದ್ದಾದ ಮತ್ತು ಬಿಗಿಯಾದ ಶೈಲಿ ತ. ರಾ. ಸು. ಅವರದು.

ಶ್ರೀ ತ. ರಾ. ಸು. ನಮ್ಮ ಪಾಲಿಗೆ ಬರಿಯ ಲೇಖಕರೇ ಆಗಿರದೆ, ಆತ್ಮೀಯ ಗೆಳೆಯರಾಗಿದ್ದಾರೆ. 'ನವ್ಯ ಸಾಹಿತ್ಯ ಪ್ರಕಾಶನ'ವನ್ನು ಆರಂಭಿಸಲು ನಮಗೆ ಉತ್ತೇಜನಕೊಟ್ಟು, ಅನೇಕ ವಿಧದಲ್ಲಿ ನಮಗೆ ನೆರವು ನೀಡಿದ್ದಲ್ಲದೆ, ತಮ್ಮ ಹೊಸ ಕೃತಿ, 'ಚಂದನದ ಗೊಂಬೆ' ಯನ್ನು ನೀಡಿ ಸಹಾಯ ಮಾಡಿದ್ದಾರೆ. ಇಂಥ ಸೊಗಸಾದ ಕಾದಂಬರಿಯನ್ನು ಬರೆದಿತ್ತ ತ.ರಾ.ಸು. ಅವರಿಗೆ ನಮ್ಮ ವಂದನೆಗಳು.

ಈಗಾಗಲೇ 'ನವ್ಯ ಸಾಹಿತ್ಯ ಪ್ರಕಾಶನ' ದಿಂದ ನಾಲ್ಕು ಸುಲಭ ಬೆಲೆಯ ಕೈ ಹೊತ್ತಗೆಗಳು ಪ್ರಕಟವಾಗಿವೆ. 'ಚಂದನದ ಗೊಂಬೆ' ಹೊರಬೀಳುವುದು ಕಾರಣಾಂತರಗಳಿಂದ ಬಹಳ ತಡವಾಯಿತು. ಇನ್ನು ಮುಂದೆ ಹೀಗಾಗಲಾರದೆಂಬ ಭರವಸೆ ನಮಗಿದೆ. ಕನ್ನಡದ ಪ್ರಾತಿನಿಧಿಕ ಬರಹಗಾರರ ಕಾದಂಬರಿಗಳನ್ನು ಸುಲಭ ಬೆಲೆಯಲ್ಲಿ ಓದುಗರಿಗೆ ದೊರೆಯುವಂತೆ ಮಾಡುವುದೇ ನಮ್ಮ ಉದ್ದೇಶ. ಈ ಸದುದ್ದೇಶ ಸಫಲವಾಗಬೇಕಾದರೆ, ಓದುಗರ, ಪುಸ್ತಕ ವ್ಯಾಪಾರಿಗಳ, ಮತ್ತು ಜಾಹಿರಾತುದಾರರ ನೆರವು ಅತ್ಯಗತ್ಯ. ಈ ನೆರವು ಯಾವಾಗಲೂ ದೊರೆಯುತ್ತದೆಂಬ ಆಸೆ ನಮಗಿದೆ.

ಈ ಪುಸ್ತಕಕ್ಕೆ ತಮ್ಮ ಜಾಹೀರಾತನ್ನು ಕೊಟ್ಟು, ಪುಸ್ತಕ ಹೊರಬೀಳುವುದು ಸಾವಕಾಶವಾದರೂ, ನಮ್ಮೊಂದಿಗೆ ಸಹಕರಿಸಿ ಉಪಕಾರ ಮಾಡಿದ **ಮೈಸೂರು ಕೆಮಿಕಲ್ಸ್ ಮತ್ತು ಫರ್ಟಿಲೈಸರ್ಸ್** ರವರಿಗೆ ನಾವು ಚಿರ ಋಣಿಗಳು.

ಶೀಘ್ರದಲ್ಲಿಯೇ ಶ್ರೀ ತ. ರಾ. ಸು. ಅವರ ಮತ್ತೊಂದು ಕಾದಂಬರಿ, 'ಚಕ್ರತೀರ್ಥ' ಮತ್ತು ಪ್ರಖ್ಯಾತ ಸಾಹಿತಿಗಳಾದ ಶ್ರೀ ಎಸ್. ಅನಂತನಾರಾಯಣರವರ 'ಹೆಣ್ಣು ಕೊಟ್ಟರು' ಎಂಬ ಕಾದಂಬರಿಗಳು ಓದುಗರ ಕೈ ಸೇರಲು ಸಿದ್ಧವಾಗುತ್ತಿವೆಯೆಂದು ತಿಳಿಸಲು ನಮಗೆ ಸಂತೋಷವಾಗುತ್ತದೆ.

ಮುಖಚಿತ್ರ ಮುದ್ರಣಕ್ಕೆ ನೆರವು ನೀಡಿದ ಗೆ. ಬಸವರಾಜ್, ಆರ್. ರವರಿಗೆ ನಮ್ಮ ವಂದನೆಗಳು.

**ಪ್ರಕಾಶಕರು**

# ಮುನ್ನುಡಿ

'ಚಂದನದ ಗೊಂಬೆ' ಇಂದಿನ ನಮ್ಮ ಗ್ರಾಮ ಜೀವನದ ಒಂದು ಚಿತ್ರ.

ಸಮಾಜ ಜೀವಿಯಾದ ಮಾನವ, ತನ್ನ ಸುತ್ತಲ ಸಮಾಜದೊಂದಿಗೆ ಸುಖವಾಗಿ ಬಾಳಬೇಕೆಂದರೆ, ವ್ಯಕ್ತಿಯಲ್ಲಿ ಹೇಗೆ ಶೀಲಶುದ್ಧಿ, ಸಹಾನುಭೂತಿ, ಪರ್ರ್ಯಾನುಕಂಪಗಳಿರಬೇಕೋ, ಅಷ್ಟೇ ಮಟ್ಟಿಗೆ ಸುತ್ತಲ ಜನದಲ್ಲಿಯೂ ಸ್ನೇಹ., ತ್ಯಾಗ, ಸೌಹಾರ್ದತೆಯ ಭಾವನೆಗಳು ಸಮಾನ ಪ್ರಮಾಣದಲ್ಲಿ ಬೆಳೆದಿರಬೇಕು. ಹಾಗಲ್ಲದೆ ವ್ಯಕ್ತಿಯಲ್ಲಾಗಲಿ, ಸುತ್ತಲ ಜೀವಿಗಳಲ್ಲಾಗಲಿ, ಬಾಳನ್ನು ಸುಂದರಗೊಳಿಸುವ ಈ ಗುಣಗಳ ಅಭಾವ ಕಂಡು ಬಂದರೆ ಮಾನವ ಸಹಜವಾದ ಸ್ನೇಹ, ವಿಶ್ವಾಸಗಳು, ಸ್ವಾರ್ಥ, ದುರಾಸೆಯ ಕ್ಷುದ್ರ ದೇವತೆಗಳಿಗೆ ಬಲಿಯಾದರೆ, ಆಗ ವ್ಯಕ್ತಿಯ ವೈಯ್ಯಕ್ತಿಕ ಬಾಳು ದುರ್ಭರವಾಗುವುದಷ್ಟೇ ಅಲ್ಲ, ಸಮಾಜ ಜೀವನವೇ ಕಲುಷಿತವಾಗಿ, ಮಾರಕವಾಗಿ ಪರಿಣಮಿಸುವುದು.

' ಚಂದನದ ಗೊಂಬೆ' ಈ ಭಾವನೆಯ ಬುನಾದಿಯ ಮೇಲೆ ರಚಿತವಾದ ಕಾದಂಬರಿ. ವ್ಯಕ್ತಿ ತಾನು ವೈಯಕ್ತಿಕವಾಗಿ ಯಾವ ತಪ್ಪನ್ನೂ ಮಾಡದಿದ್ದರೂ, ಯಾರಿಗೂ ಯಾವ ಬಗೆಯ ಕೆಡುಕನ್ನೂ ಮಾಡದಿದ್ದರೂ, ಸ್ವಾರ್ಥದೂಷಿತವಾದ ಸಮಾಜದ ನಡುವೆ ಬಾಳುವಾಗ ಅಂಥ ನಿರಪರಾಧಿ ಜೀವನವೂ ಹೇಗೆ ದುರಂತದಲ್ಲಿ ಪರ್ಯವಸಾನವಾಗುತ್ತವೆ, ಬಾಳಲು ಅಗತ್ಯವಾದ ಗುಣಗಳನ್ನು ಕಳೆದುಕೊಂಡ ಜನ, ಹೇಗೆ ಅಂಥ ಜೀವವನ್ನು ಬಾಳಗೊಡುವುದಿಲ್ಲ ಎನ್ನುವ ಇಂದಿನ ನಮ್ಮ ಸಮಾಜದ ವಿಷಮ ಪರಿಸ್ಥಿತಿಯ ಚಿತ್ರಣವೇ ಈ ಕಾದಂಬರಿಯ ...ರಿ.

ಹಾಗೇ ಈ ಕಾದಂಬರಿಗೆ ಕೊಟ್ಟ ಹೆಸರಿನ ಬಗ್ಗೆಯು ಒಂದು ಮಾತು.

'ಚಂದನದ ಗೊಂಬೆ' ಎನ್ನುವುದು ಈ ಕಾದಂಬರಿಯ ಕೇಂದ್ರ ವ್ಯಕ್ತಿಯ ಅಡ್ಡ ಹೆಸರು. ಈ ಕಾದಂಬರಿ ಆ ಜೀವದ ಚಿತ್ರ ಎನ್ನುವ ಕಾರಣ ಒಂದರಿಂದಲೇ ಆ ಹೆಸರನ್ನು ಕೊಟ್ಟಿಲ್ಲ. ಚಂದನದ ಗೊಂಬೆ ನವರಾತ್ರಿಯಲ್ಲಿ ನಾವು ಪಟ್ಟಕ್ಕೆ ಕೂಡಿಸುವ ಮರದಗೊಂಬೆ. ಅದು ಪಟ್ಟಕ್ಕೆ ಕೂಡಲೂ

ಬಯಸುವುದಿಲ್ಲ, ವಿಸರ್ಜನೆಯಾಗಬಯಸುವುದೂ ಇಲ್ಲ. ನಮ್ಮ ಬಯಕೆ ಅದರ ಸ್ಥಾಪನೆ, ವಿಸರ್ಜನೆಗಳೆರಡಕ್ಕೂ ಕಾರಣವಾಗುತ್ತದೆ. ಈ ಕಾದಂಬರಿಯ ಮುಖ್ಯ ಪಾತ್ರವಾದ ರತ್ನಮ್ಮನ ಬಾಳು ಹೇಗೆ ತನ್ನ ಇಚ್ಛೆಗೆ ಅಧೀನವಾಗಿ ನಡೆಯದೆ, ಸುತ್ತಲವರ ಬಯಕೆ ಬೇಸರಿಕೆಗಳ ಕೈಗೊಂಬೆಯಾಗಿ ನಡೆದು ಮುಕ್ತಾಯಗೊಂಡಿತು ಎನ್ನುವುದನ್ನು ಸೂಚಿಸುವ ಸಲುವಾಗಿಯೂ, ಕಾದಂಬರಿಗೆ ಆ ಹೆಸರು ಕೊಟ್ಟಿದೇನೆ.

ಕಾದಂಬರೀ ರಚನೆಯಲ್ಲಿ ಮೇಲೆ ಹೇಳಿದ ಉದ್ದೇಶಗಳೆಲ್ಲವೂ ಸಾರ್ಥಕವಾಗಿದೆಯೆಂದೇ ನಂಬಿದೇನೆ.

ಈ ಕಾದಂಬರಿಯ ವಸ್ತುವನ್ನು ಕೇಳಿ 'ಬರಿ, ಬರಿ' ಎಂದು ಒತ್ತಾಯ ಮಾಡಿ ಬರೆಯಿಸಿದ ಗೆ. ಚದುರಂಗರಿಗೆ ನಾನು ಋಣಿಯಾಗಿದೇನೆ.

ಹಾಗೇ, ತಮ್ಮ ನವ್ಯ ಸಾಹಿತ್ಯ ಪ್ರಕಾಶನದಲ್ಲಿ ಇದನ್ನು ಅಚ್ಚು ಮಾಡುತ್ತಿರುವ ಗೆ. ಪಿ.ಆರ್. ಸೀತಾರಾಂರವರಿಗೂ, ಇದಕ್ಕೆ ಒಪ್ಪುವಂಥ ಮುಖ ಚಿತ್ರವನ್ನು ರಚಿಸಿಕೊಟ್ಟ ಕಲಾವಿದ ಗೆ. ಚಂದ್ರಶೇಖರ್‌ರವರಿಗೂ, ಅಚ್ಚಿನ ಕರಡು ತಿದ್ದುವಲ್ಲಿ ನೆರವಾದ ಗೆ. ಕ.ಬಾ. ಮಾಧೂರಾಯರಿಗೂ ನಾನ ಕೃತಜ್ಞನಾಗಿದ್ದೇನೆ.

ಚಾಮುಂಡಿಪುರ, ಮೈಸೂರು.
೨೩—೧೦—೫೮

**ತ. ರಾ. ಸು.**



ಪಕ್ಕದಲ್ಲಿ ಹಾಸಿದ್ದ ಟವಲಿನಲ್ಲಿದ್ದ, ಕಾರಾಶೇವು, ಬೂಂದಿಕಾಳು, ಕಡಲೇಕಾಯಿಬೀಜ, ಹಸಿ ಈರುಳ್ಳಿಯ ಚೂರುಗಳು, ಬೆರೆತ, ಚೌಚೌ ಮಂಡಕ್ಕಿಯನ್ನು ಒಂದು ಹಿಡಿ ಬಾಯಿಗೆ ಹಾಕಿಕೊಂಡು, ನಿಧಾನವಾಗಿ ಜಗಿಯುತ್ತಾ, ರಾಘವೇಂದ್ರರಾಯ, ಚಿನ್ನೋಬಯ್ಯ ಹಂಚಿದ ಇಸ್ಪೇಟ್ ಎಲೆಗಳನ್ನು ತೆಗೆದು ಜೋಡಿಸಿಕೊಂಡು, ಒಮ್ಮೆ ಎಲೆಗಳ ಮೇಲೆ ಕಣ್ಣು ಹಾಯಿಸಿದ. ಎಲೆಗಳನ್ನು ನೋಡುತ್ತಿದ್ದ ಹಾಗೇ ಅವನ ಹೃದಯ ಉತ್ಸಾಹದಿಂದ ವಿಜೃಂಭಿಸಿತು.

ಹಾಗೇ ನಡುವೆ ಹಾಸಿದ್ದ ಚೌಕದ ಮೇಲಿನ ಜೇಸ್ಟಿನ ಹಣವನ್ನು ನೋಡಿ ಮತ್ತೊಮ್ಮೆ, ಎಲೆಗಳನ್ನು ನೋಡಿದ. ಆ ಹಣ ಚೌಕದಿಂದ ಹಾರಿ ಬಂದು, ತನ್ನ ಜೇಬಿನಲ್ಲಿ ಬಿದ್ದ ಹಾಗೆ ತೋರಿತು.

ಮೂರನೆಯ ಜೇಸ್ಟಿನಾಟ ಅದು. ಆ ದಿವಸವೆಲ್ಲಾ ಅಷ್ಟು ಸೊಗಸಾದ ಆಟ ಬಿದ್ದಿರಲಿಲ್ಲ, ರಾಘವೇಂದ್ರರಾಯನಿಗೆ.

ಮತ್ತೊಂದು ಹಿಡಿ ಮಂಡಕ್ಕಿಯನ್ನು ಬಾಯಿಗೆ ಹಾಕಿಕೊಂಡು ಆಟ ಹೇಳಲು ತನ್ನ ಸರದಿ ಬರುವುದನ್ನೇ ಕಾಯುತ್ತಾ ಕುಳಿತ.

ಅವನ ಪಕ್ಕದಲ್ಲಿದ್ದವರು, ಇನ್ನೂ ಒಬ್ಬರೊಡನೊಬ್ಬರು ಸ್ಪರ್ಧಿಸುತ್ತಿದ್ದರು. ಆಟ ಹೇಳುವ ಉತ್ಸಾಹದಿಂದ ನಾಲಗೆ ತುಡಿಯುತ್ತಿದ್ದ ರಾಘವೇಂದ್ರರಾಯನಿಗೆ, ಅವರ ನಿಧಾನವಾದ ಸ್ಪರ್ಧೆಯನ್ನೂ ಕಂಡು ಅಸಹನೆ ತುಳುಕಿತು. ಇದಿರಾಳಿಯ ಮೇಲೆ ಇನ್ನೊಂದು ಸಂಖ್ಯೆ ಏರಿಸುವುದೇ,

ಬಿಡುವುದೇ ಎಂದು ಮೀನಮೇಷ ಎಣಿಸುತ್ತಾ ಕುಳಿತಿದ್ದ ಗಂಗಯ್ಯನನ್ನು ನೋಡಿ—

‘ ಏನು ಹಡಿ ಧ್ಯಾನಸಾನಯ್ಯ ನಿನ್ನದು. ಆಟ ಇದ್ದರೆ ಹೇಳಬೇಕು. ಇಲ್ಲದೆ ಹೋದರೆ ಎಲೆ ಮುಚ್ಚಿಕೊಂಡು ಕೂತುಕೊಳ್ಳಬೇಕು.’

—ಎಂದ.

‘ ಇದು ಮೂರನೇ ಬೇಸ್ತಿನಾಟ ರಾಘಣ್ಣ. ಅವಸರ ಮಾಡಿ ಸೋತರೆ, ಬಟವಾಡೆಗೆ ಹಣ ನಿಮ್ಮಪ್ಪ ಕೊಡ್ತಾನೆಯೇ? ಸ್ವಲ್ಪ ಉಸಿರು ಬಿಗಿಹಿಡಿದುಕೋ.’

—ಎಂದ ಗಂಗಯ್ಯ.

‘ ಹೋಗಲಿ, ನೀನು ಬಿಡು ಗಂಗಯ್ಯ. ಅವನೇ ಹೇಳಿಕೊಂಡು ಆಟ ಮಾಡಿಕೊಳ್ಳಲಿ. ಶಾನುಭೋಗನ ದುಡ್ಡು ತಿಂದು ಬಹಳ ದಿನ ಆಗಿದೆ.’

—ಎಂದ ಚಿನ್ನೋಬಯ್ಯ.

ಚಿನ್ನೋಬಯ್ಯನ ಮಾತು ಕೇಳಿ ಗಂಗಯ್ಯ—

‘ ಆಯ್ತು, ನೀನೇ ಮಾಡಿಕೋ ನೋಡೋಣ ’

—ಎಂದ ಸ್ಪರ್ಧೆಯನ್ನು ಬಿಟ್ಟುಕೊಟ್ಟ.

ಗಂಗಯ್ಯನ ಹಾಗೇ, ಗಂಗಯ್ಯನೊಂದಿಗೆ ಸ್ಪರ್ಧಿಸುತ್ತಿದ್ದ ವಿಠೋಬನೂ—

‘ ಮೇಲೊಂದು ಹೇಳಿ ನೀನೇ ಮಾಡಿಕೋ ’

—ಎಂದ.

‘ ಇರಲಿ.’

—ಎಂದು ರಾಘವೇಂದ್ರರಾಯ ಸವಾಲು ಸ್ವೀಕರಿಸಿದ

‘ ಬಣ್ಣ ? ’

‘ ಚಂದನದ ಗೊಂಬೆ.’

—ಎಂದ ರಾಘವೇಂದ್ರರಾಯ, ನಗುತ್ತಾ.

ಚಂದನದ ಗೊಂಬೆ, ಇಸ್ಪೀಟು ರಾಣಿಗೆ ಆ ವೃಂದದವರು ಇಟ್ಟ ಅಡ್ಡ ಹೆಸರು. ಎಂದಿನಂತಿದ್ದರೆ, ಉಳಿದವರೂ ರಾಘವೇಂದ್ರರಾಯ ಹೇಳಿದು ದನ್ನು ಕೇಳಿ ನಗಬೇಕಾಗಿತ್ತು.

ಆದರೆ ಇಂದು ಆ ಹೆಸರು ಕೇಳಿ ಅವರು ಯಾರಿಗೂ ನಗು ಬರಲಿಲ್ಲ. ಅದಕ್ಕೆ ಪ್ರತಿಯಾಗಿ, ಬೇಸ್ತಿನಾಟದ ಉತ್ಸಾಹ ಮಿನುಗುತ್ತಿದ್ದ ಅವರ ಮೊಗಗಳು ಉಸಿರು ಸೋಕಿದ ಕನ್ನಡಿಯಂತೆ ಮಂಕಾದವು, ಆ ಹೆಸರು ಅವರೆಲ್ಲರಲ್ಲೂ ಬೇರೇನೋ ನೆನಪನ್ನು ಕೆರಳಿಸಿತ್ತು.

'ಪಾಪ. ಸೀತಾರಾಮಯ್ಯನಿಗೆ ಹೇಗಿದೆಯೋ ಏನೋ. ಅವನಿಲ್ಲ ದಿದ್ದರೆ ಆಟಕ್ಕೆ ರಂಗೇ ಬರೋದಿಲ್ಲ'

—ಎಂದ ವಿಠೋಬ ಎಲೆಯನ್ನು ಇಳಿಯುತ್ತಾ.

'ನೀನೇನೇ ಹೇಳು, ಸೀತಾರಾಮಯ್ಯ ದಿಲ್ದಾರ್ ಮನುಷ್ಯ. ಅವರು ಆಟಕ್ಕೆ ಬರದೆ ಕ್ಲಬ್ಬಿನ ಕಳೆಯೇ ಕೆಟ್ಟು ಹೋಯಿತು. ಹದಿನೈದು ದಿನ ಆಯ್ತಲ್ಲೆ ಸೀತಾರಾಮಯ್ಯ ಹಾಸಿಗೆ ಹಿಡಿದು ?'

ತಾನು ಎಲೆಹಾಕುತ್ತ ಚಿನ್ನೋಬಯ್ಯ ಹೇಳಿದ.

'ಹೇಗಿದಾನೊ ಇವತ್ತು ನೋಡಿಕೊಂಡು ಬರಲಿಲ್ಲ.'

—ಎಂದ ಗಂಗಯ್ಯ ಯಾವುದೋ ಧ್ಯಾನದಲ್ಲಿ ಎಲೆ ಹಾಕುತ್ತಾ.

'ಅಲ್ಲ—ಒಂದು ದಿನ ಮಳೇಲಿ ನೆನೆದಿದ್ದಕ್ಕೆ ಹೀಗಾಗೋದೆ. ಕಲ್ಲು ಗುಂಡಿನ ಹಾಗಿದ್ದ ಮನುಷ್ಯ. ಒಂದು ದಿನ ತಲೆನೋವು, ಮೂಗು ನೋವು ಅಂತ ಮಲಗಿದವನಲ್ಲ.'

—ಚಿನ್ನೋಬಯ್ಯನೂ, ವಿಷಮ ಶೀತಜ್ವರದಿಂದ ಹಾಸಿಗೆ ಹಿಡಿದ ಸೀತಾರಾಮಯ್ಯನನ್ನೇ ನೆನಸಿಕೊಳ್ಳುತ್ತಾ ಎಲೆ ಹಾಕಿದ.

'ಏನೋ ಚಂದನದ ಗೊಂಬೆ ತಾಳೀಪುಣ್ಯ ಹೆಂಗೈತೋ ಯಾರು ಬಲ್ಲರು ?'

—ಎಂದ ಗಂಗಯ್ಯ.

ಮೊದಲ ಬಾರಿ ಆಟಗಾರರ ಮನಸ್ಸನ್ನು ಸೀತಾರಾಮಯ್ಯನತ್ತ ಸೆಳೆದ 'ಚಂದನದ ಗೊಂಬೆ' ಎನ್ನುವ ಹೆಸರು, ಈ ಬಾರಿ, ಸೀತಾರಾಮಯ್ಯನ ವಿಷ ಯವನ್ನು ಚಿಂತಿಸುತ್ತಿದ್ದ ಅವರ ಮನಸ್ಸನ್ನು ಮತ್ತೆ ಆಟದತ್ತ ಸೆಳೆದಿತು.

ಅವಕ್ಕೆ ಕಾರಣ 'ಚಂದನದ ಗೊಂಬೆ' ಎನ್ನುವುದು ಇಸ್ಪೇಟು ರಾಣಿಗೆ ಅಡ್ಡ ಹೆಸರಾದಂತೆಯೇ, ಸೀತಾರಾಮಯ್ಯನ ಹೆಂಡತಿಗೂ ಅಡ್ಡ ಹೆಸರಾಗಿತ್ತು. ತನ್ನ ಹೆಂಡತಿಗೆ ಆ ಅಡ್ಡ ಹೆಸರು ಇಟ್ಟವರು ಸೀತಾರಾಮಯ್ಯನೇ. ಆಟದಲ್ಲಿ ಇಸ್ಪೇಟು ತುರುಫು ಹೇಳಿದವರಿಗೆ—

'ನನ್ನ ಹೆಂಡತಿ ಹೆಸರು ಹೇಳಿ ಬದುಕಿಕೊಂಡೆ. ಗೆಲ್ಲೋದು ಗ್ಯಾರಂಟಿ'

—ಎಂದು ಹೇಳಿ, ಎಲ್ಲರಿಗಿಂತ ಮೊದಲು ತಾನು ನಗುತ್ತಿದ್ದ ಸೀತಾರಾಮಯ್ಯ.

'ಈಗದೆಲ್ಲಾ ಕಟ್ಟಿಕೊಂಡು ಏನಾಗಬೇಕು. ಎಲೆ ನೋಡಿಕೊಂಡು ಇಳಿ. ಮೂರನೇ ಬೇಸ್ತಿನಾಟ'

—ಎಂದು ಚಿನ್ನಪ್ಪಯ್ಯ ಆಟಗಾರರನ್ನು ಎಚ್ಚರಿಸಿದ.

ಆಟ ಮುಂದುವರಿಯಿತು. ಆದರೆ, ಆಟದಲ್ಲಿ ಗೆಲುವಿರಲಿಲ್ಲ, ಎಲೆ ಹಾಕುವಾಗ ಉತ್ಸಾಹವಿರಲಿಲ್ಲ, ಎಲ್ಲರೂ ಮಾತನಾಡದೆ ಆಟ ಮುಂದುವರೆಸಿದರು.

ನಾಲ್ಕುಗಳಿಗೆ ಕಳೆಯುವುದರೊಳಗಾಗಿ ಮತ್ತೆ ಬೇಸ್ತಿನಾಟದ ರಂಗೇರಿತು.

ಇನ್ನೂ ಆಟ ನಡೆಯುತ್ತಿರುವಾಗಲೇ ಯಾರೋ ಹೊರಗಡೆ ಬಾಗಿಲನ್ನು ದಬದಬ ಬಡಿದರು.

'ಒಳ್ಳೆ ಹೊತ್ತಿನಲ್ಲಿ ಈ ಶನಿಗಳೆಲ್ಲಾ ಬಂದು ವಕ್ಕರಿಸ್ತಾರಲ್ಲಾ.'

—ಎಂದು ಗೊಣಗಿಕೊಳ್ಳುತ್ತಾ ಗಂಗಯ್ಯ ಕೈಯ್ಯಲ್ಲಿದ್ದ ಎಲೆಗಳನ್ನು ಮಡಚಿ ಕೆಳಗಿಟ್ಟು ಬಾಗಿಲು ತೆಗೆಯಲು ಹೋದ. ಅವನು ಬಾಗಿಲು ತೆಗೆಯುವ ವರೆಗೂ ಬಾಗಿಲು ತಟ್ಟುವುದು ನಡದೇ ಇತ್ತು.

ಗಂಗಯ್ಯ ಬಾಗಿಲು ತೆಗೆದು—

'ಏನು ಪ್ರಾಣ ಹೋಗ್ತದೆ ಅಂತ ಹಾಗೆ ಬಾಗಿಲು ಬಡೀತೀಯ?'

—ಎಂದು ಅಸಹನೆಯಿಂದ ಕೇಳಿದ, ಬಾಗಿಲು ತಟ್ಟಿದವನತ್ತ ದುರುಗುಟ್ಟಿ ನೋಡುತ್ತಾ.

'ರಾಘಣ್ಣನೋರು ಇದಾರಾ?'

—ಎಂದು ಕೇಳಿದ ಬಾಗಿಲು ತಟ್ಟಿದವನು ಏದುತ್ತಾ.

' ಹೂ. ಏನಾಗ್ಬೇಕಿತ್ತು ? '

—ಗಂಗಯ್ಯನೇ ಪ್ರಶ್ನೆ ಕೇಳಿದ.

' ಸೀತಾರಾಮಪ್ನೋರು ಓಗಿಬುಟ್ರು ಬುದ್ಧಿ. ಅಮ್ಮಾವ್ರು ಬುದ್ಯೋರ್ನ ಬ್ಯಾಗ ಕರಕೊಂಡು ಬಾ ಅಂದ್ರು. ಅದ್ಕೆ ಓಡಿ ಬಂದೆ.

—ಎಂದ ರೈತ.

ಆ ಮಾತು ಕೇಳಿ, ಇಸ್ಪೇಟಾಟದಲ್ಲಿ ಮಗ್ನರಾಗಿ ಕುಳಿತಿದ್ದವರಿಗೆ ಸಿಡಿಲು ಹೊಡೆದ ಹಾಗಾಯಿತು. ಎಲ್ಲರೂ ಆಟವನ್ನು ನಿಲ್ಲಿಸಿ ಕೈಯಲ್ಲಿದ್ದ ಎಲೆಗಳನ್ನು ಚೆಲ್ಲಿ, ಬಾಗಿಲ ಬಳಿ ಓಡಿದರು.

' ಯಾವಾಗ ತೀರಿಕೊಂಡ್ರು ಸೀತಾರಾಮಪ್ಪ ? '

—ಚಿನ್ನೋಬಯ್ಯ ಆತುರವನ್ನು ತಡೆಯಲಾಗದೆ, ಹತ್ತು ಮೈಲಿ ಬಿರುಸಾಗಿ ಓಡಿಬಂದವನಂತೆ ಏದುತ್ತಾ ಕೇಳಿದ.

' ಈಗ ಒಂದು ಸ್ವಲ್ಪಹೊತ್ತಾಯ್ತು. ರಾಘಣ್ಣ ಬುದ್ದಿ ನೀವು ಬ್ಯಾಗ ಬರಬೇಕಂತೆ '

—ಎಂದ

ರಾಘಣ್ಣ ಅವನ ಮಾತು ಕೇಳಲು ಅಲ್ಲಿ ನಿಲ್ಲಲಿಲ್ಲ. ಕೈಯಲ್ಲಿದ್ದ ಎಲೆಗಳನ್ನು ಹಾಗೇ ಒಗೆದು ಬಿಟ್ಟು ಹೊರಟ. ಉಳಿದವರು ಅವನನ್ನು ಹಿಂಬಾಲಿಸಿದರು.

ಇಸ್ಪೇಟಿನ ಮನೆಯಿಂದ ಸೀತಾರಾಮಯ್ಯನ ಮನೆ ಬಹಳ ದೂರವಿರಲಿಲ್ಲ. ಮಾರುಗಾಲು ಹಾಕುತ್ತಾ ಓಡಿದ ಅವರು ಎರಡು ನಿಮಿಷದಲ್ಲಿ ಸೀತಾರಾಮಯ್ಯನ ಮನೆಯನ್ನು ತಲುಪಿದರು.

ಸೀತಾರಾಮಯ್ಯನ ಮನೆಯ ಮುಂದೆ ಆಗಲೇ ಒಂದು ಸಣ್ಣದೊಂದು ಜಾತ್ರೆ ನೆರೆದಿತ್ತು.

ಒಳಗೆ ಸೀತಾರಾಮಯ್ಯನ ಹೆಂಡತಿ—ಚಂದನದ ಗೊಂಬೆ—ಕೇಳಿದವರ ಕರುಳು ಕತ್ತರಿಸುವಂತೆ ಅಳುವುದು ಕೇಳಿಬಂತು, ಮುಂದೆ ನುಗ್ಗಲೆನಿಸಿದ ಕಾಲುಗಳನ್ನು ತಡೆಯಿತು.

' ಭಗವಂತಾ ಆಕೆ ಮಕ ಹೆಂಗೆ ನೋಡೋದು.'

—ಎಂದ ಗಂಗಯ್ಯ ಹಾಗೇ ಕಟ್ಟೆಯ ಮೇಲೆ ಕುಸಿದು.

ಒಳಗಿನಿಂದ ನುಗ್ಗಿಬಂದ ಅಳು, ರಾಘಣ್ಣನನ್ನ ಒಂದು ಗಳಿಗೆ ತಡೆಯಿತು. ಆದರೆ ಅವನು ಗಂಗಯ್ಯನಂತೆ ಕುಳಿತುಕೊಳ್ಳಲು ಸಾಧ್ಯವಿರಲಿಲ್ಲವಾದುದರಿಂದ, ನೆಲದೊಳಗೆ ಕುಸಿಯುತ್ತಿದ್ದ ಕಾಲುಗಳನ್ನು ಬಲವಂತವಾಗಿ ಕಿತ್ತು, ಒಳಗೆ ಹೋದ.

# ೧

ಸೀತಾರಾಮಯ್ಯ ಬದುಕಿದ್ದಾಗ, ಸೋಮನ ಹಳ್ಳಿಯ ಜನದ ಪಾಲಿಗೆ ಬೆಲ್ಲದ ಅಚ್ಚಾಗಿದ್ದ. ಅವನಿದ್ದ ಕಡೆ ಯಾವಾಗಲೂ ಹತ್ತು ಜನ ಸೇರುತ್ತಿದ್ದರು. ಎಲ್ಲೇ ಇರಲಿ ಸುತ್ತಲ ಜನರನ್ನು ಆಕರ್ಷಿಸುವಂಥಾ ವ್ಯಕ್ತಿತ್ವ ಆತನದು. ಆತನ ದೊಡ್ಡ ಕಂಠ, ಹಳ್ಳಿಗೆಲ್ಲಾ ಕೇಳಿಸುವಂಥಾ ನಗು, ಆತ ಎಲ್ಲೇ ಇದ್ದರೂ ಇಲ್ಲೇ ಇದ್ದಾರೆ ಎಂದು ಸಾರುತ್ತಿದ್ದುವು.

'ನಕ್ಕು ನಗಿಸುವಾ ಕಲೆ ಲೇಸು' ಎಂದು ಹೇಳಿದ ಸರ್ವಜ್ಞ ಕವಿಯ ಮಾತು ನಿಜ ಎನ್ನುವುದಾದರೆ, ಸೀತಾರಾಮಯ್ಯ ಆ ದೃಷ್ಟಿಯಲ್ಲಿ ಮಹಾ ಕಲಾವಿದ. ಆದರೆ ಸಾಂಕ್ರಮಿಕವಾಗಿ, ಸುತ್ತಲಿದ್ದವರೂ ನಗುವಂತೆ ಮಾಡುತ್ತಿತ್ತು. ಯಾವುದಾದರೂ ಕಾರಣಕ್ಕಾಗಿ ಆತನೊಂದಿಗೆ ಜಗಳವಾಡಬೇಕೆಂದು ಗಂಟು ಮುಖ ಹಾಕಿಕೊಂಡು ಬಂದವರೂ, ಆತನೊಂದಿಗೆ ಹತ್ತು ನಿಮಿಷ ಮಾತನಾಡುವುದರೊಳಗಾಗಿ, ತಾವು ಬಂದಿದ್ದ ಉದ್ದೇಶವನ್ನೇ ಮರೆತು, ನಗುತ್ತಾ ಹೋಗಿ, ಮನೆಗೆ ಹೋದಮೇಲೆ, ತಾವು ಸೀತಾರಾಮಯ್ಯನ ಬಳಿ ಹೋದುದರ ಕಾರಣವನ್ನು ನೆನಸಿಕೊಂಡು ಪೆಚ್ಚಾದದ್ದೂ ಉಂಟು. ಅವರಿವರೇನು ಜಮಾಬಂದಿಗೆ ಬಂದ ಅಮಲ್ದಾರರೂ, ಅವರ ಶಾನುಭೋಗರ ಲೆಕ್ಕಪತ್ರದಲ್ಲಿದ್ದ ತಪ್ಪುಗಳನ್ನು ಮರೆತು, ಕಂದಾಯ ಬಾಕಿ ನಿಂತಿರುವುದನ್ನು ಮರೆತು, ಆಮೇಲೆ ಗುಮಾಸ್ತರ ಕೈಲಿ 'ಇಂಥ ತಪ್ಪಿತ್ತು ಏಕೆ ವಿಚಾರಿಸು' ಎಂದು ಹೇಳಿಕಳಿಸಿದುದೂ ಉಂಟು.

ಸೀತಾರಾಮಯ್ಯನ ಆ ಸ್ವಭಾವದಿಂದಾಗಿಯೇ ಹಳ್ಳಿಯ ಜನ ಆತನಿಗೆ 'ಖುಷಿರಾಜಾ' ಎಂದೇ ಹೆಸರಿಟ್ಟಿದ್ದರು. ಆ ಹೆಸರಿಗೆ ಅನ್ವರ್ಥಕ

ವಾಗುವಂತಿತ್ತು ಆತನ ಜೀವನದ ರೀತಿ. ಆತನ ಬಾಳಿನಲ್ಲಿ ಆತನಿಗೂ ಚಿಂತೆಗೂ ಹರದಾರಿ ದೂರ. ಎಂಥಾ ಚಿಂತೆ ಬಂದರೂ ಇಷ್ಟೇನೆ ? ಅದ ಕ್ಕೇನು ಬಂದ ದಾರಿಗೆ ಸುಂಕ ಇಲ್ಲ ಅನ್ನೋದು ಗೊತ್ತಿಲ್ಲವೇ ? ಹೇಗೆ ಬಂತೋ ಹಾಗೇ ಹೋಗುತ್ತೆ ' ಎಂದು ತೇಲಿಸಿ ಬಿಡುತ್ತಿದ್ದ. ಅದು ಆತ ಪರರ ಚಿಂತೆಗೆ ಕೊಡುತ್ತಿದ್ದ ಮದ್ದಷ್ಟೇ ಅಲ್ಲ, ತನ್ನ ಚಿಂತೆಗೂ ಅದೇ ಔಷಧ ವನ್ನೇ ಕುಡಿಯುತ್ತಿದ್ದ.

ಅವನ ಬಾಳೇ ಹಾಗಿತ್ತು. ಎದೆಗೆಡಿಸುವಂಥಾ ಚಿಂತೆ ಆತನ ಬಾಳ ಪಥದಲ್ಲಿ ಅಡ್ಡ ಸುಳಿದಿರಲಿಲ್ಲ.

ಸೀತಾರಾಮಯ್ಯನ ತಂದೆ ನಾರಾಯಣಪ್ಪ ಸೋಮನ ಹಳ್ಳಿಗೆ ಮೂರು ಮೈಲಿ ದೂರದಲ್ಲಿದ್ದ ಸಂಜಾಪುರದ ಶಾನುಭೋಗರು. ಅವರಿಗಿದ್ದ ಆದಾಯ ಸರಕಾರದಿಂದ ಬರುತ್ತಿದ್ದ ಐವತ್ತು ರೂಪಾಯಿ ' ಪ್ರೋಟೆಗ ' ಸುಮಾರು ಎರಡು ಎಕರೆ ಗದ್ದೆಯ ಉತ್ಪತ್ತಿ ಅಷ್ಟೆ. ಆದರೂ ತಮ್ಮ ರೈತರ ಸಹಕಾರ ದಿಂದ ಅಷ್ಟರಲ್ಲೇ ಸುಖವಾದ ಜೀವನ ನಡೆಸುತ್ತಿದ್ದರು. ಸೀತಾರಾಮಯ್ಯ ಅವರಿಗೆ ಏಕಮಾತ್ರ ಪುತ್ರ.

ಸೀತಾರಾಮಯ್ಯ ಹುಟ್ಟಿದ್ದ ಐದೇವರ್ಷಕ್ಕೆ ಅವನ ತಾಯಿ ತೀರಿ ಕೊಂಡದ್ದರಿಂದ, ನಾರಾಯಣಪ್ಪ ಮಗನಿಗೆ ತಾನೇ ತಂದೆ-ತಾಯಿ ಎರಡೂ ಆಗಿ ಬೆಳೆಸಿದ್ದರು. ಅವರು ಇರುವಷ್ಟು ದಿನವೂ ಸೀತಾರಾಮಯ್ಯನಿಗೆ ಯಾವ ಕಷ್ಟ ಕಾರ್ಪಣ್ಯವೂ ಆಗಲಿಲ್ಲ. ಎಳೆ ವಯಸ್ಸಿನಲ್ಲೇ ಅವನಿಗೆ ಸಂಸಾರದ ಚಿಂತೆ ಹಚ್ಚಿ, ಎಳೆ ಚಿಗುರಿಗೆ ಬೆಂಕಿ ಹಚ್ಚುವುದೇಕೆ ಎಂದು ಕೊಂಡು, ಸೀತಾರಾಮಯ್ಯನಿಗೆ ಜೀವನದ ಯಾವ ಹೊಣೆಗಾರಿಕೆಯ ಅರಿ ವನ್ನು ಮಾಡಿಕೊಟ್ಟಿರಲಿಲ್ಲ. ಆ ಹೊಣೆಗಾರಿಕೆಯನ್ನು ಕಲಿಯುವ ವಯ ಸ್ಸಿಗೆ ಸೀತಾರಾಮಯ್ಯ ಬರುವುದರೊಳಗೆ, ನಾರಣಪ್ಪನೇ ಕಣ್ಣುಮುಚ್ಚಿ ಕೊಂಡ, ಸೀತಾರಾಮಯ್ಯ ಬಾಳಿನಲ್ಲಿ ಒಂಟಿಯಾದ.

ತಾಯಿ ಕಳೆದುಕೊಂಡ ಮಗು ಎಂದು ಮೊದಲೇ ನೆರೆಹೊರೆಯವರ ಅನುಕಂಪ, ವಿಶ್ವಾಸಗಳಿಗೆ ಪಾತ್ರನಾಗಿದ್ದ ಸೀತಾರಾಮಯ್ಯ ತಂದೆಯನ್ನು ಕಳೆದು ಕೊಂಡು ತಬ್ಬಲಿಯಾದ ಮೇಲೆ, ಹತ್ತು ಮನೆಯ ಮಗ ಆದ.

ಸೀತಾರಾಮಯ್ಯನ ಸ್ವಭಾವವೂ ಅದಕ್ಕೆ ಅನುಕೂಲವಾಗೇ ಇತ್ತು.

ರಾಘವೇಂದ್ರರಾಯರ ತಂದೆ ಶ್ರೀನಿವಾಸರಾಯರು ಹೇಳುತ್ತಿದ್ದ ಹಾಗೆ 'ಸೀತಾರಾಮು ನೀರಿದ್ದ ಹಾಗೆ. ಯಾವ ಪಾತ್ರೆಗೆ ಹಾಕಿದರೆ ಅದೇ ಆಕಾರ. ಪಾಯಸಕ್ಕೆ ಹಾಕಿದರೆ ಯಾಲಕ್ಕಿ, ಸಾರಿಗೆ ಹಾಕಿದರೆ ಒಗ್ಗರಣೆ.'

ದೇವರು ಸೀತಾರಾಮಯ್ಯನಿಗೆ ಹೆಚ್ಚು ಆಸ್ತಿಯನ್ನು ಕೊಟ್ಟಿರಲಿಲ್ಲ. ಆದರೆ ಬಂಗಾರದ ಗಣಿಯಂಥ ಹೃದಯವನ್ನು ಕೊಟ್ಟಿದ್ದ. ಎಲ್ಲರನ್ನು 'ಅಣ್ಣ, ಮಾವ, ಅತ್ತೆ' ಎಂದು ಸಂಬಂಧ ಕಲ್ಪಿಸಿಕೊಂಡು ಮಾತಿನಲ್ಲೇ ಅಲ್ಲದೆ ರೀತಿಯಲ್ಲೂ ಅವರವನೇ ಆಗಿ ನಡೆಯುತ್ತಿದ್ದ ಸೀತಾರಾಮಯ್ಯ, ನಾರಾಣಪ್ಪನಿಗೆ ಮಗನಾಗಿದ್ದರೆ ಊರಿನವರ ಪಾಲಿಗೆ ದೊಡ್ಡ ಆಸ್ತಿಯಾಗಿದ್ದ. ಹಳ್ಳಿಯ ಎಲ್ಲ ಕೆಲಸವೂ ತನ್ನದೇ ಎಂದುಕೊಂಡು ದುಡಿಯುತ್ತಿದ್ದ. ಅವರಿವರ ಕೆಲಸಮಾಡುವ ಉತ್ಸಾಹದಲ್ಲಿ ತನ್ನನ್ನೇ ಮರೆತು ಕೆಲಸ ಮಾಡುತ್ತಿದ್ದ. ಚಿಕ್ಕಂದಿನಿಂದಲೂ, ಹಳ್ಳಿಯ ಹತ್ತು ಜನರ ಅಕ್ಕರೆಯ ಆಶ್ರಯದಲ್ಲಿ ಅರಳಿದ ಸೀತಾರಾಮಯ್ಯನಿಗೆ, 'ಇದು ತನ್ನ ಸಂಸಾರದ ವಿಷಯ, ಇದು ಬೇರೆಯವರ ಕೆಲಸ' ಎನ್ನುವ ವ್ಯತ್ಯಾಸವೇ ಇರಲಿಲ್ಲ.

ಬೆಳಗ್ಗೆ ಎದ್ದು ಏನೊ ಕೆಲಸಮಾಡಬೇಕು ಎಂದು ಅಂದಾಜು ಹಾಕಿಕೊಂಡು ಹೊರಟವನು, ದಾರಿಯಲ್ಲಿ ಯಾರಾದರೂ ಸಿಕ್ಕಿ ಬೇರೆ ಏನಾದರೂ ಮಾತು ತೆಗೆದರೆ, ತನ್ನ ಕೆಲಸ ಮರೆತು, ಅದರಲ್ಲಿ ಮುಳುಗುತ್ತಿದ್ದ; 'ಹಾಗೇ ಹೊಲದ ಕಡೆ ಅಡ್ಡಾಡಿಕೊಂಡು ಈಗ ಬಂದುಬಿಡುತ್ತೇನೆ' ಎಂದು ಹೊರಟವನು ಹಾಗೇ ಆರು ಹಳ್ಳಿ ಸುತ್ತುಹಾಕಿಕೊಂಡು, ಮೂರುದಿನದ ಮೇಲೆ ಮನೆಯನ್ನು ಜ್ಞಾಪಿಸಿಕೊಂಡು ಬಂದದ್ದೂ ಉಂಟು.

ಹಾಗೆಂದು ಸೀತಾರಾಮಯ್ಯ ಯಾವ ಕೆಲಸದಲ್ಲೂ 'ಪಡಪೋಶಿ' ಮಾಡುತ್ತಿರಲಿಲ್ಲ. ಏನು ಕೆಲಸ ಮಾಡಿದರೂ, ಅದು ಎಷ್ಟೇ ಚಿಕ್ಕದಾಗಿರಲಿ, ದೊಡ್ಡದಾಗಿರಲಿ, ತನ್ನದಾಗಲಿ, ಪರರದಾಗಲಿ, ಎಲ್ಲವನ್ನೂ ಅಚ್ಚುಕಟ್ಟಾಗಿ ಮಾಡುತ್ತಿದ್ದ.

ನಾರಣಪ್ಪ ಸತ್ತಾಗ, ಸೀತಾರಾಮಯ್ಯ ಇನ್ನು ಚಿಕ್ಕವಯಸ್ಸಿನವನಾದ್ದರಿಂದ, ಅವನ ಶಾನುಭೋಗಿ ಕೆಲಸವನ್ನು ಶ್ರೀನಿವಾಸರಾಯರೇ ನೋಡಿಕೊಳ್ಳುತ್ತಿದ್ದರು. ಸೀತಾರಾಮಯ್ಯ ಪ್ರಾಪ್ತವಯಸ್ಕನಾದಾಗ, ಪುನಃ

ಅವನಿಗೆ ಶಾನುಭೋಕಿಯನ್ನು ವಹಿಸಿಕೊಡುವ ಹೊತ್ತಿನಲ್ಲಿ ಶ್ರೀನಿವಾಸ ರಾಯರು—

'ಆ ಶಾನುಭೋಕಿ ಮಹಾ ತರಲೆ ಕೆಲಸ, ತುಂಬಾ ಹುಷಾರಾಗಿರ ಬೇಕು. ಬೇಕಾಬಿಟ್ಟಿಯಾಗಿ ಮಾಡಿದರೆ, ತಲೆ ಹೋಗುತ್ತೆ. ಮೈಯೆಲ್ಲಾ ಕಣ್ಣಾಗಿದ್ದರೂ ಸಾಲದು. ನೀನು ಮಹಾ ಅಲಾಲುಟೋಪಿ. ಕೂತಕಡೆ ಮೈಮರೇತೀಯ. ಯಾರು ಹೇಗೆ ಹೇಳಿದರೆ ಹಾಗೆ ಕುಣಿತೀಯ. ಈ ಕೆಲಸ ಹೇಗೆ ನಿಭಾಯಿಸಿಕೊಂಡು ಹೋಗುತ್ತೀಯೊ ಏನೊ ?

—ಎಂದು ಹೇಳಿ, ಹೆದರಿಕೊಂಡೇ ವಹಿಸಿಕೊಟ್ಟಿದ್ದರು, ಅವರು ಮೆಚ್ಚುವಂತೆ ಶಾನುಭೋಕಿಯ ಕೆಲಸವನ್ನು ನಿರ್ವಹಿಸಿದ್ದ ಸೀತಾರಾಮಯ್ಯ. ರೈತರ ಪಾಲಿಗಂತೂ ಸೀತಾರಾಮಯ್ಯ 'ಚಿನ್ನದಂಥ ಮನುಷ್ಯ' ನಾಗಿದ್ದ.

'ಕಂದಾಯದಾಗೆ ನಾಕಾಣೆ ನಿಂತರೂ ಮನೆಭಾವಣಿ ಕೀಳಿಸ್ತೀವಿ ಅನ್ತಾರೆ ಈ ಶಾನುಭೋಗ್ರು, ಆದರೆ ನಮ್ರ ಬುದ್ದಿಯೋರು ಮಕ್ಕಳಂಗೆ ನೋಡ್ಕೋತಾರೆ.

—ಎಂದು ಹೊಗಳುತ್ತಿದ್ದರು.

ಸೀತಾರಾಮಯ್ಯ ಅವರನ್ನು ಹಾಗೇ ನೋಡಿಕೊಳ್ಳುತ್ತಿದ್ದ. ಅವರ ಕಷ್ಟ ಸುಖ ಅಂದರೆ ಹಾಗೇ ಮರುಗುತ್ತಿದ್ದ.

ಒಮ್ಮೆ ಸೋಮನಹಳ್ಳಿಯಲ್ಲಿ ಕಾಲಕ್ಕೆ ಸರಿಯಾಗಿ ಮಳೆಯಾಗದೆ, ಕೆರೆ ಒಣಗಿ, ಪೈರು ಕೆಟ್ಟುಹೋಗಿ, ರೈತರ ಬಳಿ ಕಂದಾಯವನ್ನು ತೀರಿಸಲೂ ಹಣವಿಲ್ಲದಂತಾಗಿ, ಕಂದಾಯ ಅರ್ಧ ಮುಕ್ಕಾಲು ಪಾಲು ಬಾಕಿ ನಿಂತಿತ್ತು. ರೈತರ ಕಷ್ಟಕ್ಕೆ ಮರುಗಿ ಕಂದಾಯವನ್ನು ವಸೂಲು ಮಾಡಲಾಗದ ಸೀತಾ ರಾಮಯ್ಯ ಜಮಾಬಂದಿಯ ಕಾಲದಲ್ಲಿ ಅಮಲ್ದಾರರ ಕೋಪಕ್ಕೆ ಪಾತ್ರರಾಗ ಬೇಕಾಗಿ ಬಂತು.

ಏನ್ರೀ, ಸೀತಾರಾಮಯ್ಯ, ನಿಮ್ಮಂಥ ಶಾನುಭೋಗರನ್ನ ನೆಚ್ಚಿ ಕೊಂಡರೆ, ನಾನು ಕೆಲಸ ಕಳೆದುಕೊಂಡು ಮನೆಗೆ ಹೋಗಬೇಕಾಗುತ್ತೆ. ಇಷ್ಟು ಕಂದಾಯ ಬಾಕಿ ನಿಲ್ಲಿಸಿದರೆ, ಡೆಪ್ಯುಟಿ ಕಮೀಷನರ್ ಸಾಹೇಬರಿಗೆ ನಾನು ಮುಖ ತೋರಿಸೋದು ಹೇಗೆ?'

—ಎಂದರು.

‘ತಾವು ಧಣಿಗಳು, ಈ ತಾಲೂಕಿಗೆ ತಂದೆ ಇದ್ದಹಾಗೆ. ತಮ್ಮಲ್ಲಿ ನಮ್ಮ ಕಷ್ಟ ನಿಷ್ಠುರ ಹೇಳಿಕೊಳ್ಳದೆ ಬೇರೆ ಯಾರಲ್ಲಿ ಹೇಳಿಕೊಳ್ಳಬೇಕು. ತಮಗೆ ಕೆಟ್ಟ ಹೆಸರು ತರಬೇಕು ಅನ್ನುವ ಇಷ್ಟ ನಮಗಿಲ್ಲ. ಆದರೂ ರೈತರಿಗೆ ಈ ವರ್ಷ ಕಂದಾಯ ಕೊಡೋ ಚೈತನ್ಯವಿಲ್ಲ. ಅದಕ್ಕೇ ಅಷ್ಟು ಬಾಕಿ ನಿಂತಿದೆ ಮನ್ನಿಸಬೇಕು.

—ಎಂದು ಕೇಳಿಕೊಂಡ ಸೀತಾರಾಮಯ್ಯ.

‘ಅದೆಲ್ಲಾ ಯಾರು ಕೇಳ್ತಾರೆ ಸೀತಾರಾಮಯ್ಯ. ಈಗ ಬಂದಿರೋ ಸಾಹೇಬರು ಬೆಂಕಿ ಚೂರಿದ್ದ ಹಾಗೆ. ನನ್ನ, ನಿಮ್ಮನ್ನ ಇಬ್ಬರನ್ನೂ ಉಳಿಸೋದಿಲ್ಲ. ಆದ್ದರಿಂದ ಹುಜೂರು ಜಮಾಬಂದಿ ಹೊತ್ತಿಗೆ ಹೇಗಾದರೂ ನೀವು ಕಂದಾಯ ಬೇಬಾಕಿಯಾಗಿ ಫೈಸಲ್ ಮಾಡಿಬಿಡಬೇಕು.’

—ಎಂದು ಅಪ್ಪಣೆ ಮಾಡಿದರು.

‘ನಿಜ ಸ್ವಾಮಿ. ಆದರೆ ಬೆಳಿಕೆಟ್ಟು ತಿನ್ನೋ ಅನ್ನಕ್ಕೇ ಕಾಳು ನಾಲ ಮಾಡಿಕೊಂಡು ಕೂತಿರೋರನ್ನ ಕಂದಾಯ ತೀರಿಸಿ ಅಂತ ಏನು ಮುಖ ಇಟ್ಟುಕೊಂಡು ಕೇಳಲಿ? ನಮ್ಮ ರೈತರು ಕಳ್ಳರಲ್ಲ, ಸುಳ್ಳರಲ್ಲ, ಸರಕಾರಕ್ಕೆ ಕೊಡೋ ಹಣಾನ ಎತ್ತಿ ಹಾಕಬೇಕು ಅನ್ನೋರಲ್ಲ, ಮುಂದಿನ ವರ್ಷವಾದರೂ ದೇವರು ಕಣ್ಣುಬಿಟ್ಟು ಮಳೆಯಾದರೆ, ಚಿಕ್ಕಾಸೂ ನಿಲ್ಲಿಸಿಕೊಳ್ಳದ ಹಾಗೆ ಕಂದಾಯ ತೀರಿಸುತ್ತಾರೆ. ತಾವೂ ಈ ವಿಷಯಾನ ಖಾವಂದರಲ್ಲಿ ಅರಿಕೆ ಮಾಡಿಕೊಂಡು ನಮ್ಮನ್ನ ಉಳಿಸಿಕೊಡಬೇಕು.’

—ಎಂದು ಸೀತಾರಾಮಯ್ಯ ರೈತರ ಪರವಾಗೇ ವಾದಿಸಿ ಬೇಡಿದ.

‘ನೋಡಿ–ಸೀತಾರಾಮಯ್ಯ, ಸರಕಾರದೋರು ನಿಮಗೆ ಪ್ರೋಟಿಗಿ ಕೊಡೋದು ಈ ಕಳ್ಳನೆಪ ಹೇಳೋಕಲ್ಲ, ನೀವು ಸರಕಾರಿ ನೌಕರರು. ಅದಕ್ಕೆ ಸರಿಯಾಗಿ ನಡೆದುಕೋ ಬೇಕು.’

‘ಹೌದು ಸ್ವಾಮಿ. ನಾನು ಸರಕಾರದ ಉಪ್ಪು ತಿನ್ನೋ ಚಾಕರ. ಆದರೆ ಹಾಗೇ ನಾನೂ ಒಬ್ಬ ರೈತ. ಹಾಗಿರುವಾಗ ತಿಳಿದೂ ತಿಳಿದೂ ಅವರ ಮೇಲೆ ಜುಲುಂಮಾಡಿ ಕಂದಾಯ ಹೇಗೆ ಕೇಳಲಿ?’

‘ಹೇಗೆ ಕೇಳ್ತೀರೋ ಏನು ಕೇಳ್ತೀರೋ ನನಗೆ ಗೊತ್ತಿಲ್ಲ. ನನಗೆ ಬೇಕಾದ್ದಿಷ್ಟೆ–ಕಂದಾಯ ಬೇಬಾಕಾಗಬೇಕು.’

—ಎಂದು ಟಿಪ್ಪಣಿಮಾಡಿ ಹೋದರು.

ಅಮಲ್ದಾರರೇನೊ, ಅಷ್ಟನ್ನೇ ಜಾರಿಮಾಡಿ ಹೋದರು. ಆದರೆ ಅದನ್ನು ನೆರವೇರಿಸುವ ದಾರಿ ಏನು? ಕಂದಾಯ ಕೊಡಲಾಗದ ರೈತರ ಮೇಲೆ ಬಲಾತ್ಕಾರ ನಡೆಸುವುದೇ? ಆ ದಾರಿ ಸೀತಾರಾಮಯ್ಯನಿಗೆ ಸರಿ ಹೋಗಲಿಲ್ಲ. ಹಾಗೇ ಮತ್ತೆ ಅಮಲ್ದಾರರ ಕೈಯಲ್ಲಿ ಅನ್ನಿಸಿ ಕೊಳ್ಳುವುದೂ ಹಿತವಾಗಲಿಲ್ಲ.

ಮಾರನೆಯ ದಿನವೇ ತಾಲೂಕು ಕಛೇರಿಗೆ ಹೋಗಿ, ತನ್ನ ಪ್ರೋಟಗಿ ಹಣವನ್ನೆಲಾ ಕಂದಾಯಕ್ಕೆ ಜಮಾ ಮಾಡಿಸಿ, ಸಾಲದು ಬಂದದ್ದಕ್ಕೆ, ಸಾಲ ಮಾಡಿ ಕಟ್ಟಿ, ಕಂದಾಯದ ಲೆಕ್ಕ ಬೇಬಾಕಿ ಮಾಡಿಬಂದ.

ಇದನ್ನು ಕೇಳಿದ ಶ್ರೀನಿವಾಸರಾಯರು ಸೀತಾರಾಮಯ್ಯನ ಮೇಲೆ ಸಿಟ್ಟಾದರು.

' ನೀನು ತೀರಾ ಹುಡುಗ. ಗುಡ್ಡಕ್ಕೆ ಚಾಪೆ ಹೊದಿಸೋಕೆ ಹೋಗಿ, ಮನೆ ಛಾವಣಿ ತಲೇಮೇಲೆ ಎಳಕೋತೀಯ. ಈ ಅಧಿಕ ಪ್ರಸಂಗ ಎಲಾ ನಿನಗ್ಯಾಕೆ ಬೇಕಾಗಿತ್ತು.'

—ಎಂದು ಗದರಿಕೊಂಡರು. ' ಹೀಗೆಲ್ಲಾ ರ್‍ದ್ದೂ ನಂಬ್ತಾ ಹೋದರೆ, ನಾಳೆ ನಿನ್ನ ಕೈಗೆ ಚಿಕ್ಕನಾಯಕನ ಹಳ್ಳಿ ಬೆಳ್ಳಿ ಬಟ್ಟಲು ಬರೋದು ಖಂಡಿತ ಎಲ್ಲಾರ ಕಂದಾಯಾನೂ ಕಟ್ಟಿ ರಸೀದಿ ಹರಿದುಕೊಟ್ಟು ಬಂದಿದೀಯಲ್ಲಾ. ಅದು ವಾಪಸು ಬರುತ್ತೆ ಅಂತ ತಿಳಿದು ಕೊಂಡಿದೀಯ? ಹೀಗೆಲ್ಲಾ ಮಾಡ ಲಿಕ್ಕೆ ಹೋಗಬೇಡ.'

—ಎಂದು ಬುದ್ಧಿವಾದ ಹೇಳಿದರು.

' ಏನೋ ಮಾವ. ಅವರ ಕಷ್ಟ ಕಂಡು ಅಯ್ಯೋ ಅನ್ನದೆ ಇರೋಕೆ ಆಗಲಿಲ್ಲ ನನಗೆ. ಆ ಗಳಿಗೇಲಿ ದೇವರು ಬುದ್ಧಿ ಕೊಟ್ಟಹಾಗೆ ಮಾಡಿದೆ. ಇವರು ನಂಬಿಕೆ ಉಳಿಸಿಕೊಂಡರೆ ಉಳಿಸಿ ಕೊಳ್ಳಲಿ, ಬಿಟ್ಟರೆ ಬಿಡಲಿ.'

—ಎಂದ ಸೀತಾರಾಮಯ್ಯ.

' ಈಗಂತೂ ನಿನಗೆ ಹೆಂಡಿರು ಮಕ್ಕಳು ಇಲ್ಲ. ಏನು ಆಡಿದರೂ ಚೆನ್ನಾಗಿ ಕಾಣುತ್ತೆ. ನಾಳೆ ಮದುವೆಯಾಗಿ ಹೆಂಡತಿ ಮಕ್ಕಳು ಮನೆಗೆ ಬಂದಮೇಲೂ ಹೀಗೇ ಮಾಡಿದರೆ, ನಿನ್ನ ನಂಬಿಕೊಂಡೋರು ತಲೆ ಮೇಲೆ

ಬೂದಿ ಹೊಯ್ದು ಕೊಂಡು ಹೋಗಬೇಕಾಗುತ್ತೆ. ಅಜ್ಜೀಪಾರಿ ಆಟ ಎಲಾ ಬಿಟ್ಟು ಹತ್ತು ಜನದ ಹಾಗೆ ಇರು'

—ಎಂದು ಶ್ರೀನಿವಾಸರಾಯರು ಸೀತಾರಾಮಯ್ಯನಿಗೆ ಪ್ರಪಂಚದ ವ್ಯವಹಾರದ ದಾರಿ ತೋರಿಸಿದರು.

'ಆಗ್ಲಿ ಮಾವ.'

—ಎಂದು ಸೀತಾರಾಮಯ್ಯ ಆ ಮಾತನ್ನು ಮುಗಿಸಿದ. ಅಷ್ಟೆ. ಆದರೆ ತನ್ನ ಸ್ವಭಾವ ಮಾತ್ರ ಬದಲಾಯಿಸಲಿಲ್ಲ ಮದುವೆಯಾಗಿ ಹೆಂಡತಿ ಮನೆಗೆ ಬಂದಮೇಲೂ ಅಷ್ಟೆ.

## ೩

ಸೀತಾರಾಮಯ್ಯನಿಗೆ ಮದುವೆಯಾದದ್ದೂ ಹಾಗೇ.

ಉಳಿದವರ ಹಾಗೆ ತಾನೂ ಮದುವೆಯಾಗಬೇಕು, ಹತ್ತು ಜನದ ಹಾಗೆ ಲಕ್ಷಣವಾಗಿ ಸಂಸಾರ ಮಾಡಬೇಕು–ಅನ್ನುವ ಯೋಚನೆಯೇ ಸೀತಾರಾಮಯ್ಯನಿಗಿರಲಿಲ್ಲ. ಶ್ರೀನಿವಾಸರಾಯರ ಹೆಂಡತಿ ಕಮಲಮ್ಮ—

‘ ಅಲ್ಲೋ ಸೀತಾರಾಮು, ಇನ್ನೆಷ್ಟು ದಿನ ಹೀಗೆ ದೇವರ ಬಸವ ಇದ್ದ ಹಾಗಿರ್ತೀಯ. ಎಲ್ಲಾದ್ರೂ ಒಂದು ಸಂಸಾರಕ್ಕೆ ಅಣಿಯಾದ ಹೆಣ್ಣು ನೋಡಿ ಮದುವೆ ಮಾಡಿಕೊಳ್ಳಬಾರದೇನೊ, ಹಚ್ಚಗಿದ್ದ ಕಡೆ ಮೆಯ್ದು ಬೆಚ್ಚಗಿದ್ದ ಕಡೆ ಮಲಗಿದರೆ ಏನು ಸಾರ್ಥಕ.’

—ಎಂದರೆ—

‘ ಸರಿ, ಸರಿ, ಬಿಡು ಅತ್ತೆ. ನನಗೆ ಮದುವೆ ಒಂದು ಕೇಡು. ನನಗಿರೋ ಶ್ರೀಮಂತಿಕೆ ಅನುಭವಿಸೋಕೆ ನಾನೊಬ್ಬನೆ ಸಾಲದು ಅಂತ, ಇನ್ನೊಂದು ಹುಡುಗೀನ ಬೇರೆ ತರಲೆ. ನಾನು ಮೊದಲೇ ಮಾವಯ್ಯ ಹೇಳೋ ಹಾಗೆ ಬರೀ ಅಲಾಲು ಟೋಪಿ ಮನುಷ್ಯ. ಹಾಗಿರೋವಾಗ ಮದುವೆ ಗಿದುವೆ ಅನ್ನೋ ಮಾತೇ ಬೇಡ.’

‘ ಮದುವೆ ಬೇಡ ಅಂದ್ರೆ ಹೀಗೇ ಗುಂಡುಗೋವಿಯಾಗಿರ್ತೀಯಾ ? ಈಗಿರೋ ಹಾಗೆ ಏಳುಮನೆ ಚೇಲಿಯಾಗಿ ಅಲೆಕೊಂಡಿದ್ರೆ ನಿನ್ನ ಹೆತ್ತೋರ ಪುಣ್ಯಕ್ಕೆ ಎಣೆಯೇ ಇಲ್ಲ. ಹಾಗೆಲ್ಲಾ ಆಗೊಲ್ಲ. ನೀನೂ ಒಂದು ಮದುವೆ ಅಂತ ಮಾಡಿಕೊಂಡು ನಾಲ್ಕು ಜನರ ಹಾಗೆ ಸಂಸಾರ ಮಾಡಿಕೊಂಡಿದ್ದರೇ ಚೆನ್ನ.’

'ಅದೆಲ್ಲಾ ಸರಿ ಅತ್ತೆ. ನಾನೇನೋ ಮದುವೆ ಮಾಡ್ಕೋತೀನಿ ಅನ್ನಬಹುದು. ಆದರೆ ನನಗೆ ಹೆಣ್ಣು ಕೊಡೋ ಪುಣ್ಯಾತ್ಮರು ಯಾರಿದಾರೆ ಮೊದಲು ತೋರಿಸು.'

'ಸರಿ, ಸರಿ, ಹೆಣ್ಣಿಗೇನು ಬರ. ನೀನು ಮದುವೆ ಮಾಡ್ಕೋತೀನಿ ಅಂದರೆ ಒಂದಲ್ಲ ಹತ್ತು ಹೆಣ್ಣು ಬರುತ್ತೆ.'

'ಸರಿ, ಬಂದಾಗ ನೋಡೋಣ ಬಿಡು. ಈಗ್ಯಾಕೆ ಆ ಮಾತಾಡಿ ನಾನೂ ನೀನು ಜಗಳ ಆಡಬೇಕು.'

—ಎಂದು ಆ ಮಾತನ್ನು ಮುಗಿಸುತ್ತಿದ್ದ ಸೀತಾರಾಮಯ್ಯ—ತನಗೆ ಯಾರೂ ಹೆಣ್ಣು ಕೊಡುವುದಿಲ್ಲ ಎನ್ನುವ ರೀತಿಯಲ್ಲಿ. ಆದರೆ ಒಂದು ದಿನ ಹೆಣ್ಣು ಅವರ ಮನೆ ಬಾಗಿಲಿಗೆ ಹುಡುಕಿಕೊಂಡು ಬಂದಿತು.

ಒಂದು ದಿನ ಮಧ್ಯಾಹ್ನ ಶ್ರೀನಿವಾಸರಾಯರು ಊಟ ಮುಗಿಸಿಕೊಂಡು ಹೊರಗೆ ಬರುವ ವೇಳೆಗೆ, ಮನೆಯ ಮುಂದಿನ ಕಟ್ಟೆಯ ಮೇಲೆ, ಕಂಭಕ್ಕೆ ಒರಗಿಕೊಂಡು ಯಾರೋ ಒಬ್ಬರು ಕುಳಿತಿರುವುದು ಕಾಣಿಸಿತು.

ಆತನನ್ನು ನೋಡಿದ ಕೂಡಲೇ, ಎಲ್ಲೋ ಬಿಸಿಲಿನಲ್ಲಿ ಸಾಕಷ್ಟು ದೂರದ ಪ್ರಯಾಣ ಮಾಡಿ ಬಂದು, ಬಳಲಿ ಕುಳಿತುಕೊಂಡಿರಬೇಕೆಂದು ತೋರಿತು ಶ್ರೀನಿವಾಸರಾಯರಿಗೆ. ಹಾಗೇ ಆತನ ಮುಖವನ್ನು ನೋಡಿದರು. ಚಿಂತೆಯನ್ನೇ ಚಿತ್ರರೂಪವಾಗಿ ಬರೆದಂತಿತ್ತು ಆತನ ಮುಖ. ಸುಮಾರು ಮೂವತ್ತು-ಮೂವತ್ತೈದು ವರ್ಷ ವಯಸ್ಸಿರಬಹುದಾದ ಆತನ ಮುಖದ ಮೇಲೆ ಬೆಳೆದ ಗಡ್ಡದಲ್ಲಿ ತುಂಬಿದ ನರೆಗೂದಲು, ಚಿಂತೆಯ ನೂರು ಗೆರೆ ಕೊರೆದು ಸುಕ್ಕು ಗಟ್ಟಿದ ಹಣೆ, ದುರ್ಬಲವಾದ, ಬಡಕಲಾದ, ಮೈಯನ್ನು ಕಂಡು, ಶ್ರೀನಿವಾಸರಾಯರಿಗೆ 'ಅಯ್ಯೋ ಪಾಪ' ಎನ್ನಿಸಿತು. 'ಯಾರೋ ಬಿಸಿಲಿಗೆ ನೆರಳನ್ನಾಶ್ರಯಿಸಿ ಕುಳಿತುಕೊಂಡಿರಬೇಕು. ಕುಳಿತುಕೊಂಡಿರಲಿ' ಎಂದು ಒಳಗೆ ಹೋಗಬೇಕು ಎಂದುಕೊಂಡಿದ್ದವರು, ಆತನ ಮುಖವನ್ನು ನೋಡಿ ಹಾಗೆ ಮಾಡಲಾಗದೆ—

'ಯಾವ ಊರು ನಿಮ್ಮದು?'

—ಎಂದು ವಿಚಾರಿಸಿದರು.

'ಕೆರೆಸಂತೆ ಹಳ್ಳಿ.'

‘ ಇಲ್ಲಿ ಯಾರ ಮನೆಗೆ ಬಂದಿದ್ದಿರಿ ? ’

‘ ಯಾರ ಮನೆಗೂ ಇಲ್ಲ. ಇಲ್ಲೀ ಬಸವನ ಹಳ್ಳಿಗೆ ಬಂದಿದ್ದೇ. ಅಲ್ಲಿಂದ ಊರಿಗೆ ವಾಪಸು ಹೊರಟಿದ್ದೆ. ಬಿಸಿಲಿನಲ್ಲಿ ನಡೆಯಲಿಕ್ಕಾಗಲಿಲ್ಲ. ನಿಮ್ಮ ಕಟ್ಟೆ ವಿಶಾಲವಾಗಿತ್ತು. ಕುಳಿತುಕೊಂಡೆ. ನನ್ನಿಂದ ತಮಗೆ ತೊಂದರೆಯಾಗಿದ್ದರೆ ಕ್ಷಮಿಸಬೇಕು.’

‘ ಛೆ, ಛೆ, ತೊಂದರೆ ಏನು ಬಂತು. ಎಷ್ಟು ಹೊತ್ತು ಬೇಕಾದರೂ ಕುಳಿತುಕೊಳ್ಳಿ. ಬಸವನಹಳ್ಳಿ ಎಷ್ಟು ಹೊತ್ತಿಗೆ ಬಿಟ್ಟಿರಿ.’

‘ ಬೆಳಗ್ಗೆ ಆರು ಗಂಟೆಗೇ ಬಿಟ್ಟೆ.’

‘ ಹಾಗಾದರೆ ಊಟ ಆಗಿಲ್ಲಾಂತ ಕಾಣಿಸುತ್ತೆ. ಏಳಿ, ಊಟಮಾಡಿಕೊಂಡು ಹೋಗುವಿರಂತೆ.’

—ಎಂದರು ಶ್ರೀನಿವಾಸರಾಯರು.

‘ ಅದೆಲ್ಲಾ ತೊಂದರೆ ಏಕೆ ಸ್ವಾಮಿ. ಕೊಂಚ ದಣಿವು ಆರಿದರೆ ಹಾಗೇ ಹೊರಟು ಸಂಜೆಗೆ ಕೆರೆಸಂತೆ ಹಳ್ಳಿ ಸೇರುತ್ತೇನೆ. ’

—ಎಂದ ಆತ ಸಂಕೋಚದಿಂದ.

‘ ಎಲ್ಲಾದರೂ ಉಂಟೆ, ಕೆರೆಸಂತೆ ಹಳ್ಳಿ ಇನ್ನು ಹನ್ನೆರಡು ಮೈಲಿ ಆಗುತ್ತೆ. ಈ ಬಿಸಿಲಿನಲ್ಲಿ, ಬರಿ ಹೊಟ್ಟೆಯಲ್ಲಿ ನಡೆಯುವುದುಂಟೆ? ನೀವೇನೂ ಸಂಕೋಚ ಮಾಡಿಕೊಳ್ಳಬೇಡಿ, ಏಳಿ.’

—ಎಂದು ಬಲವಂತಮಾಡಿದರು ಶ್ರೀನಿವಾಸರಾಯರು.

‘ ಏನು ಊಟವೋ ಸ್ನಾನವೋ—ಈ ಜೀವಕ್ಕೆ ಅದೊಂದೂ ಬೇಡವಾಗಿ ಹೋಗಿದೆ. ’

—ಎಂದ ಆತ ಕಡು ನಿರಾಶೆ ತುಂಬಿತುಳುಕುವ ಧ್ವನಿಯಲ್ಲಿ, ನಿಟ್ಟುಸಿರಿಟ್ಟು.

ಆ ಮಾತನ್ನು ಕೇಳಿ, ಶ್ರೀನಿವಾಸರಾಯರಿಗೆ ಕರಳು ಕತ್ತರಿಸಿದಂತಾಯಿತು. ಊಟ ತಿಂಡಿಯೂ ಬೇಡವಾಗುವಂಥ ಯಾವ ಉರಿಚಿಂತೆ ಈ ಬಾಳನ್ನು ದಹಿಸುತ್ತಿದೆಯೋ ಎನ್ನಿಸಿ ವ್ಯಥೆಯಾಯಿತು. ಹಾಗೇ ‘ ನಿಮ್ಮ ಚಿಂತೆ ಏನು ? ’ ಎಂದು ವಿಚಾರಿಸಬೇಕೆಂದೂ ತೋರಿತು. ಆದರೆ ಅಪರಿಚಯಸ್ಥರನ್ನು ಅವನ್ನೆಲ್ಲಾ ಕೇಳುವ ಸಲಿಗೆ ವಹಿಸಲಾಗದೆ—

' ಮನುಷ್ಯನಾಗಿ ಹುಟ್ಟಿದ ಪ್ರತಿಯೊಬ್ಬನಿಗೂ ಚಿಂತೆ ಇದ್ದದ್ದೆ. ಅದಿಲ್ಲದ ಪುಣ್ಯಾತ್ಮರು ಯಾರಿದ್ದಾರೊ ಈ ಭೂಮಿ ಮೇಲೆ. ನಾನು ಬೇರೆ ಕಾಣೆ.'

—ಎಂದರು ಸಮಾಧಾನ ಹೇಳುವ ಧ್ವನಿಯಲ್ಲಿ.

' ಒಂದು ಚಿಂತೇನೇ ಸ್ವಾಮಿ. ಚಿಂತೆಗೆ ಚಿಂತೆ ತೇಪೆ ಹಾಕಿ ಹೊಲಿದ ಕೌದಿಯ ಹಾಗಾಗಿದೆ ನನ್ನ ಬಾಳು. ಏನೋ, ದೇವರಿಗೂ ನಮ್ಮ ಮೇಲೆ ದಯೆ ಇಲ್ಲ. ಕಾಡಿಸಿ ಸಂತೋಷಪಡ್ತಾ ಇದ್ದಾನೆ. ಹೀಗೆ ನಾನು ಎಷ್ಟು ದಿನ ಅಲೀಬೇಕೂಂತ ಆತನ ಮನಸ್ಸಿನಲ್ಲಿದೆಯೊ ನಡೆಯಲಿ.'

ಆಮಾತು, ಆಮಾತನ್ನು ಆಡಿದ ರೀತಿಯನ್ನು ಕೇಳಿ ಶ್ರೀನಿವಾಸರಾಯರಿಗೆ ಮತ್ತಷ್ಟು ಕರುಳು ಕಿವುಚಿದ ಹಾಗಾಯಿತು.

' ತಾವು ಯಾರೋ ನನಗೆ ತಿಳಿಯದು. ಆದರೂ ಏನೋ ದೊಡ್ಡ ಚಿಂತೆ ಹಚ್ಚಿಕೊಂಡ ಹಾಗಿದೆ. ನಿಮ್ಮ ಚಿಂತೆ ತೀರಿಸುವ ಶಕ್ತಿ ನನಗಿದೆಯೋ ಇಲ್ಲವೋ ಗೊತ್ತಿಲ್ಲ. ಆದರೂ ನೀವು ಹೇಳುವುದಾದರೆ ಕೇಳುವುದಕ್ಕೆ ಸಿದ್ಧವಾಗಿದ್ದೇನೆ. ಆದರೆ ಅದಕ್ಕೆಲ್ಲಾ ಈಗ ವೇಳೆಯಿಲ್ಲ. ಮೊದಲು ಊಟಕ್ಕೇಳಿ. ಸ್ನಾನವಾಗಿದೆಯೋ ?........ಅಂದಹಾಗೆ ನಿಮ್ಮ ಹೆಸರು........'

' ಲಕ್ಷ್ಮಣರಾಯ ಅಂತ. ಕೆರೆಸಂತೆ ಹಳ್ಳೀಲಿ ಸ್ಕೂಲು ಮೇಷ್ಟರು ನಾನು.'

' ಸರಿ ಹಾಗಾದರೆ, ಮೊದಲು ಊಟಕ್ಕೇಳಿ ಆ ಮೇಲೆ ನಿಧಾನವಾಗಿ ಮಾತನಾಡೋಣವಂತೆ '

—ಎಂದು ಬಲವಂತಮಾಡಿ, ಆತನನ್ನು ಊಟಕ್ಕೆ ಎಬ್ಬಿಸಿದರು. ಸ್ನಾನ, ಊಟ ಎಲ್ಲಾ ಆದಮೇಲೆ ಲಕ್ಷ್ಮಣರಾಯನೇ—

' ಸ್ವಾಮಿ, ನೀವು ಪುಣ್ಯಾತ್ಮರು. ನಿಮ್ಮನ್ನು ಹೆತ್ತವರು, ಕೈಹಿಡಿದವರು ತಣ್ಣಗಿರಲಿ. ಈ ಕಾಲದಲ್ಲಿ ' ಅಯ್ಯೋ ಪಾಪ ' ಅಂತ ಮರುಗುವವರೇ ಇಲ್ಲ ಎಂದು ಕೊಂಡಿದ್ದೆ. ಅಂಥ ಪುಣ್ಯಾತ್ಮರೂ, ಅಪರೂಪಕ್ಕಾದರೂ ಒಬ್ಬಿಬ್ಬರಿದ್ದಾರೆ ಅನ್ನಿಸಿತು ನಿಮ್ಮನ್ನು ನೋಡಿ.'

—ಎಂದ ಕೃತಜ್ಞತೆಯಿಂದ ಭಾರವಾದ ಸ್ವರದಲ್ಲಿ.

' ಇದೆಲ್ಲಾ ಏನು ದೊಡ್ಡದು ಬಿಡಿ. ಊಟದ ಹೊತ್ತಿಗೆ ಬಂದವರಿಗೆ

ಒಪ್ಪತ್ತು ಊಟ ಹಾಕದಿದ್ದರೆ, ಮನೆ ಬಾಗಿಲು ಅಂತ ಕಟ್ಟಿಕೊಂಡಿದ್ದಕ್ಕೇನು ಸಾರ್ಥಕ? ನಿಮ್ಮ ಮಾತುಕೇಳಿದರೆ, ಏನೋ ದೊಡ್ಡ ಚಿಂತೆಗೆ ಸಿಕ್ಕಹಾಗಿದೆ. ಅದೇನು ಎಂತ ಕೇಳಬೇಕು ಅನ್ನೋ ಚಪಲ. ಏನೂ ತಿಳಿದುಕೊಳ್ಳದಿದ್ದರೆ, ಹೇಳಬಹುದಾದಂಥದಾಗಿದ್ದರೆ ಹೇಳಬಹುದು.'

—ಎಂದರು ಶ್ರೀನಿವಾಸರಾಯರು, ಆಮಾತು ಕೇಳಬಹುದೊ, ಕೂಡದೊ ಎನ್ನುವ ಸಂಕೋಚದಿಂದ.

' ಹೇಳುವುದಕ್ಕೇನು ಸ್ವಾಮಿ ಸಂಕೋಚ. ಈ ಕಾಲದಲ್ಲಿ ನನ್ನ ದುಃಖ ಏನು ಅಂತ ಕೇಳೋ ಪುಣ್ಯಾತ್ಮರಾದರೂ ಯಾರು? ಕೇಳುವುದಕ್ಕೆ ಒಂದು ಬಾಯಿ ಇದ್ದರೆ ಹೇಳುವುದಕ್ಕೆ ಹತ್ತು ಬಾಯಿ. ಅದರಲ್ಲೂ ಚಿಂತೆಗೆ ಸಿಕ್ಕಿದವರಿಗಂತೂ, ಎಂಥವರ ಮುಂದಾದರೂ ತೋಡಿಕೊಳ್ಳಬೇಕು ಅನಿಸುತ್ತೆ. ಊರೂರಿಗೆಲ್ಲಾ ಅಂಗಲಾಚಿ ಬೇಡಿಕೊಳ್ಳುತ್ತಿರುವಾಗ, ನಿಮ್ಮ ಮುಂದೆ ಹೇಳುವುದಕ್ಕೇನು ಸಂಕೋಚ. ನೋಡೀ ಸ್ವಾಮಿ........ತಾವು ಯಾರೋ ಏನೋ ನನಗೊಂದೂ ತಿಳಿಯದು. ನಾನು ಏನೋ ಎಂತೋ ನಿಮಗೂ ತಿಳಿಯದು. ಆದರೂ ಮನುಷ್ಯ ಅಂತ ಕನಿಕರಿಸಿ ಊಟ ಇಟ್ಟಿರಿ. ಅಯ್ಯೋ ಪಾಪ ಅಂದವರೇ ಅಣ್ಣತಮ್ಮಂದಿರು. ಹಾಗಂತಲೇ ನಿಮ್ಮಲ್ಲೂ ಹೇಳಿಕೊಳ್ಳುತ್ತೇನೆ. ಏನೊ ನಿಮ್ಮ ರೂಪದಲ್ಲಾದರೂ ದೇವರು ನನಗೆ ದಾರಿ ತೋರಿಸಬಹುದು ಅಂತ ಅನಿಸುತ್ತಿದೆ ನಿಮ್ಮ ವಿಶ್ವಾಸ, ಅಂತಃ ಕರುಣ ನೋಡಿದರೆ.'

' ಅದೇನು ಹೇಳಿ—ನನ್ನಿಂದ ಸಾಧ್ಯವಾಗುವ ಕೆಲಸವಾದರೆ ಮಾಡಿ ಕೊಡುತ್ತೇನೆ.'

' ಏನೋ ನೋಡಿ. ನಾನೂ ಹೆಣ್ಣು ಹೆತ್ತವನು. ಮದುವೆಗೆ ಬಂದ ಹುಡುಗೀನ ಮನೇಲಿಟ್ಟುಕೊಂಡು, ಅದಕ್ಕೊಂದು ಗಂಡು ಅಂತ ಎಲ್ಲಾದರೂ ಬ್ರಹ್ಮ ಸೃಷ್ಟಿ ಮಾಡಿದ್ದಾನೆಯೇ ಅಂತ ಹುಡುಕಿಕೊಂಡು ಮೂರು ವರ್ಷದಿಂದ ಅಲೀತಾ ಇದೀನಿ. ಮರದ ಕಾಲಾಗಿದ್ದರೆ ಇಷ್ಟು ಹೊತ್ತಿಗೆ ಮೂರು ಜೊತೆ ಸವೀಬೇಕಾಗಿತ್ತು, ಅಷ್ಟು ಅಲೆದರೂ ಗಂಡು ದಿಕ್ಕು ಕಾಣಲಿಲ್ಲ. ಬನವನ ಹಳ್ಳಿಗೂ ಅದೇ ಕೆಲಸಕ್ಕೇ ಬಂದಿದ್ದೆ. ಆಗಲಿಲ್ಲ. ಬಂದದ್ದಾರಿಗೆ ಸುಂಕ ವಿಲ್ಲ ಅಂತ ವಾಪಸ್ಸು ಹೊರಟಿದ್ದೆ. ತಮಗೆ ಯಾರಾದರೂ ಪರಿಚಯ

ವಿದ್ದ ಗಂಡು ತಿಳಿಸಿದರೆ ತುಂಬಾ ಉಪಕಾರವಾಗುತ್ತೆ.'

'ಗಂಡಿಗೇನು ಕಡಿಮೆ ಲಕ್ಷ್ಮಣರಾಯರೇ, ಅದಕ್ಕೆ ಇಷ್ಟು ಚಿಂತೆ ಹಚ್ಚಿಕೊಳ್ಳಬೇಕೇ ?'

'ನಮ್ಮ ಅದೃಷ್ಟ ಹಾಗಿದೆ ಸ್ವಾಮಿ.'

—ಎಂದ ಆತ ಬಹು ಕಹಿಯಾದ ಸ್ವರದಲ್ಲಿ.

'ಏಕೆ ? ಗಂಡುಗಳೇ ಇಲ್ಲಾಂತ ನಿಮ್ಮ ಅಭಿಪ್ರಾಯವೋ ?'

—ಎಂದರು ಆತನ ಮಾತು ಅರ್ಥವಾಗದೆ ಶ್ರೀನಿವಾಸರಾಯರು.

'ಗಂಡುಗಳಿಗೇನು ಸ್ವಾಮಿ, ಬೇಕಾದಷ್ಟು ಇವೆ. ಆದರೆ ನಮಗೂ ಅವಕ್ಕೂ ಕೂಡಿ ಬರಬೇಕಲ್ಲ.

'ಅದೇಕೆ ಕೂಡಿ ಬರುವುದಿಲ್ಲ. ಹುಡುಗಿ ಏನಾದರೂ ಕುಂಟೇ, ಕುರುಡೇ ?'

'ಕುಂಟೂ ಅಲ್ಲ, ಕುರುಡೂ ಅಲ್ಲ.'

'ಮತ್ತೆ ?'

'ಅವಳದು ಮೂಲಾ ನಕ್ಷತ್ರ. ಮಾವ ಇಲ್ಲದ ಮನೆ ಆಗಬೇಕು. ಅದನ್ನೇ ಹುಡುಕಿಕೊಂಡು ಹೋದರೆ, ಅನುಕೂಲವಾಗಿ ಸಿಕ್ಕುವವರು ಕಡಮೆ. ಹಾಗೆ ಸಿಕ್ಕರೂ ತನ್ನ ಉದ್ದಕ್ಕೂ ವರದಕ್ಷಿಣೆ, ವರೋಪಚಾರ ಕೇಳುತ್ತಾರೆ. ಹುಡುಗೀಲಿ ಈ ದೋಷ ಇಟ್ಟ ದೇವರು ನನಗೆ ಸಾಕಷ್ಟು ಸಂಪತ್ತನ್ನು ಕೊಡಲಿಲ್ಲ. ನನಗೂ ಇರೋದು ಒಂದು ಹೆಣ್ಣು ಮಗು. ಕಷ್ಟವೋ ನಿಷ್ಠುರವೋ ಏನಾದರೂ ಅನುಭವಿಸಿ, ಎರಡೂ ಖರ್ಚೂ ಇಟ್ಟು ಕೊಂಡು ಮದುವೆ ಮಾಡಿಕೊಡುತ್ತೇನಿ ಅಂದರೂ, ನನ್ನ ಕಷ್ಟ ಸುಖ ಯಾರಿಗೆ ಬೇಕಾಗಿದೆ ಹೇಳಿ. ನಾವು ಕೇಳಿದಷ್ಟು ಕೊಡೋ ಹಾಗಿದ್ದರೆ ಮಾತು, ಇಲ್ಲದಿದ್ದರೆ ಮುಂದಕ್ಕೆ ಹೋಗು ಅನ್ನುತ್ತಾರೆ. ಹಾಗೆ ಅನ್ನಿಸಿಕೊಂಡು ಇಷ್ಟು ವರ್ಷ ಅಲೆದದ್ದಾಯಿತು. ಇಷ್ಟು ದಿನ ಹುಡುಗೀಗೆ ಚಿಕ್ಕ ವಯಸ್ಸು ಆಗಲಿ ಎಂದು ತಳ್ಳಿದ್ದಾಯಿತು. ಈಗ ಅವಕ್ಕೂ ಅವಕಾಶವಿಲ್ಲ.'

'ಎಷ್ಟು ವರ್ಷ ವಯಸ್ಸು ನಿಮ್ಮ ಹುಡುಗಿಗೆ ?'

'ಹದಿಮೂರು ತುಂಬಿ, ಹದಿನಾಲ್ಕಕ್ಕೆ ಬಂತು. ಏನೋ ನಮ್ಮ

ಅದೃಷ್ಟ ತೀರಾ ಕೆಟ್ಟಿಲ್ಲ. ಅದಕ್ಕೇ ಇನ್ನೂ ದೊಡ್ಡವಳಾಗಿಲ್ಲ. ಅದೊಂದು ಆಗಿ ಹೋಗಿದ್ದರೆ ನಾನು ಭಾವೀನೋ ಕೆರೇನೋ ನೋಡಿಕೊಳ್ಳಬೇಕಾಗಿತ್ತು. ಆದರೆ ನಮ್ಮ ಹಣೇಲಿ ಅದೇ ಬರೆದಿದೆಯೋ ಏನೋ ಯಾರು ಬಲ್ಲರು.'

—ಎಂದ ಲಕ್ಷ್ಮಣರಾಯ, ಪ್ರವಾಹಕ್ಕೆ ಸಿಕ್ಕಿ ಈಜು ಬರದವನಂತೆ.

ಆ ಮಾತು ಕೇಳಿ ಶ್ರೀನಿವಾಸರಾಯರಿಗೂ ಆತನ ಚಿಂತೆಯ ಝಳ ತಟ್ಟಿತು. ಹಾಗೇ ಯೋಚಿಸುತ್ತಾ ಕುಳಿತಾಗ ಮದುವೆ ಇಲ್ಲದಿದ್ದ ಸೀತಾ ರಾಮಯ್ಯನ ನೆನಪು ಬಂತು ಅವರಿಗೆ.

'ನೀವು ಇವತ್ತು ಇಲ್ಲಿ ಇರಲಿಕ್ಕೆ ಸಾಧ್ಯವೇ?'

—ಎಂದು ಕೇಳಿದರು.

'ಏಕೆ?'

'ನಿಮಗೆ ಅನುಕೂಲವಾಗುವಂಥ ಒಬ್ಬ ಹುಡುಗನ ನೆನಪು ಬಂತು. ನೀವು ಇವತ್ತು ಇಲ್ಲಿ ಉಳಿದುಕೊಂಡರೆ ನಾನು ಅವನನ್ನು ಮಾತನಾಡಿಸಿ ನೋಡುತ್ತೇನೆ. ಒಪ್ಪಿದರೂ ಒಪ್ಪಬಹುದು.'

'ಸದ್ಯ—ನೀವು ಅಷ್ಟು ಮಾಡ್ತೀನಿ ಅಂದರೆ, ಒಂದು ದಿನವೇನು ಹತ್ತು ದಿನವಾದರೂ ಇರಲಿಕ್ಕೆ ಸಿದ್ಧ.'

—ಎಂದ ಲಕ್ಷ್ಮಣರಾಯ, ಮುಳುಗುವವರು, ಹುಲ್ಲು ಕಡ್ಡಿಗೇ ಜೋತು ಬೀಳುವಂತೆ.

'ಹಾಗಿದ್ದರೆ ಸರಿ. ನಿಮ್ಮ ಅದೃಷ್ಟ ಹೇಗಿದೆಯೋ ನೋಡೋಣ. ನೀವು ಒಂದು ಗಳಿಗೆ ಎಲ್ಲಾ ಚಿಂತೇನೂ ಮರೆತು ನಿದ್ರೆ ಮಾಡಿ. ಅವನೂ ಈಗ ಊರಿನಲ್ಲಿಲ್ಲ. ಸಂಜೆಗೆ ಬರುತ್ತಾನೆ. ಕರೆಸಿ ಮಾತನಾಡೋಣ.'

—ಎಂದರು.

ಆ ಮಾತೇ ಮಗಳಿಗೆ ಗಂಡು ಸಿಗದೆ ತೊಳಲುತ್ತಿದ್ದ ಲಕ್ಷ್ಮಣರಾಯ ನಿಗೆ ಅಮೃತದಂತಿತ್ತು.

# ೪

ಲಕ್ಷ್ಮಣರಾಯ ಶ್ರೀನಿವಾಸರಾಯರ ಮುಂದೆ ಹೇಳಿದ ತನ್ನ ಬಾಳಿನ ಗೋಳಿನ ಕಥೆ ಅವರ ಹೆಂಡತಿ ಕಮಲಮ್ಮನ ಕಿವಿಗೂ ಬಿದ್ದು ಆಕೆಯ ಕರುಳು ಕಲಕಿತ್ತು. ಎಂತಲೇ ಈ ವಿಷಯದಲ್ಲಿ ತಾನೇ ಸೀತಾರಾಮಯ್ಯನೊಂದಿಗೆ ರಾಯಭಾರ ನಡೆಸಬೇಕು ಎನ್ನುವ ಮಾತಿಗೆ ಒಪ್ಪಿದರೂ, ಹೆಣ್ಣಿಗೆ ಸಹಜವಾಗಿ ಬರುವ ವ್ಯವಹಾರಜ್ಞತೆಯಿಂದ—

‘ ಹೆಣ್ಣನ್ನು ಕಣ್ಣಾರೆ ನೋಡದೆ, ಒಪ್ಪಿಕೊ ಎಂದು ಸೀತಾರಾಮುವಿಗೆ ಹೇಗೆ ಹೇಳುವುದು?’

—ಎಂದು ಸಂಶಯ ವ್ಯಕ್ತಪಡಿಸಿದಳು.

‘ ಹೆಣ್ಣನ್ನು ಏನು ನೋಡಬೇಕು ? ಲಕ್ಷ್ಮಣರಾಯರನ್ನು ನೋಡಿದರೆ ತುಂಬಾ ಒಳ್ಳೆಯವರ ಹಾಗೆ ಕಾಣುತ್ತಾರೆ. ಆದ್ದರಿಂದ ಆ ಹುಡುಗಿಯೂ ಒಳ್ಳೆಯವಳೇ ಇರಬೇಕು. ಅಲ್ಲಿಗೆ ಬಡತನದಲ್ಲಿ ಬೆಳೆದ ಹುಡುಗಿಯಾದ್ದರಿಂದ ಸೀತಾರಾಮುವಿಗೆ ತಕ್ಕ ಹೆಂಡತಿಯಾಗುತ್ತಾಳೆ ಅಂತ ಅನಿಸುತ್ತದೆ ನನಗೆ ’

—ಎಂದು ಶ್ರೀನಿವಾಸರಾಯರು ಕಮಲಮ್ಮನ ಸಂದೇಹವನ್ನು ನಿವಾರಿಸಲು ಯತ್ನಿಸಿದರು.

‘ ಅದೆಲ್ಲಾ ಇರಬಹುದು, ಬಿಡಬಹುದು. ಆದರೆ ಹುಡುಗಿಯನ್ನು ಒಂದುಸಲ ಕಣ್ಣಾರೆ ನೋಡದೆ ಗೃಹ ಪ್ರವೇಶ ಮಾಡಿದರೆ ಹೇಗೆ? ಸೀತಾರಾಮೂನ ಒಪ್ಪಿಸೋದು ದೊಡ್ಡದಲ್ಲ. ಆದರೆ ನಾಳೆ ಏನಾದರೂ ಹೆಚ್ಚು

ಕಡಮೆಯಾದರೆ ಆ ಜವಾಬ್ದಾರಿ ನಮ್ಮ ತಲೆಯ ಮೇಲೆ ಬೀಳುತ್ತೆ. 'ತಬ್ಬಲಿ ಹುಡುಗ ಹೇಳಿದ ಹಾಗೆ ಕೇಳುತ್ತಾನೆ ಅಂತ, ಎಂಥದೋ ಕೋಡಂಗೀನ ತಂದು ಅವನ ತಲೆಗೆ ಸುತ್ತಿದರು ಅಂತ ಜನ ನಾಳೆ ನಮ್ಮನ್ನು ಆಡಿಕೊಳ್ಳುತ್ತಾರೆ. ಅದೆಲ್ಲಾ ಯೋಚಿಸಬೇಕೋ ಬೇಡವೋ?'

'ನಿನ್ನ ಮಾತು ನಿಜ. ನನಗೂ ಗೊತ್ತಿದೆ—ನಾವೇನಾದರೂ ಹೇಳಿದರೆ ಸೀತಾರಾಮು ಇಲ್ಲಾನ್ನೋದಿಲ್ಲ. ನಾನು ಹೇಳಿದರಂತೂ, ಖಂಡಿತ ಎದುರು ಹೇಳುವುದಿಲ್ಲ. ಅದಕ್ಕೇ ನೀನು ವಿಚಾರಿಸು ಎಂದದ್ದು. ಅವನು ಮದುವೆ ಆಗುತ್ತೇನೆ ಅಂದರೆ, ಕೆರೆಸಂತೆ ಹಳ್ಳಿ ಏನು ದೂರಾನೇ ? ಒಪ್ಪತ್ತು ಹೋಗಿ ನೋಡಿಕೊಂಡು ಬರಬಹುದು. ನನಗೇನೋ ಏಕೋ ಈ ಸಂಬಂಧ ಆಗಬಹುದು ಅನ್ನಿಸುತ್ತದೆ. ಏನೊ—ದೇವರ ದಯದಿಂದ ಈ ಕೆಲಸ ವಾಗಿ, ಆ ಬಡಬ್ರಾಹ್ಮಣನ ದುಃಖ ನಿವಾರಣೆಯಾದರೆ ಸಾಕು. ಮೂಲಾ ನಕ್ಷತ್ರದ ತೊಂದರೆಯೊಂದು ಇಲ್ಲದಿದ್ದರೆ ರಾಘೂಗೇ ತಂದುಕೋತೀನಿ ಎಂತ ಹೇಳಬೇಕೂಂತ ಇದ್ದೆ.'

—ಎಂದರು ಶ್ರೀನಿವಾಸರಾಯರು.

'ಅವರು ಹೇಳಿದ್ದನ್ನು ಕೇಳಿದಾಗ ನನಗೂ ಹಾಗೇ ಅನ್ನಿಸಿತು. ಆದರೂ ಇದು ಮದುವೆ ವಿಚಾರ. ಒಂದು ದಿನದ ಸಂಬಂಧವಲ್ಲ. ಜೀವಮಾನಕಾಲ ನಡೆಯಬೇಕಾದದ್ದು. ಅದಕ್ಕೇ ಎಚ್ಚರವಾಗಿರಬೇಕು ಅಂದದ್ದು.'

'ನನಗದು ಗೊತ್ತಿಲ್ಲವೇ? ಸೀತಾರಾಮನೂ ನನಗೆ ಮಗ ಇದ್ದ ಹಾಗೇ. ಅವನ ತಲೆಯ ಮೇಲೆ ಕಲ್ಲು ಎತ್ತಿಹಾಕುವಂಥ ಕೆಲಸ ನಾನು ಖಂಡಿತ ಮಾಡುವುದಿಲ್ಲ, ನೀನು ಸೀತಾರಾಮೂನ ವಿಚಾರಿಸು. ನಿನ್ನ ಎದುರಿಗಾದರೆ, ಮನಸ್ಸು ಬಿಚ್ಚಿ ಮಾತಾಡುತ್ತಾನೆ. ಅವನ ಮನಸ್ಸಿನಲ್ಲಿ ಏನಿದೆ ಅಂತ ತಿಳಿದುಕೊಂಡು ಮುಂದಿನ ಕೆಲಸ ಮಾಡೋಣ.'

—ಎಂದು ಶ್ರೀನಿವಾಸರಾಯರು ಭರವಸೆ ಕೊಟ್ಟಮೇಲೆ, ಕಮಲಮ್ಮ ಈ ಸಂಧಾನ ನಡೆಸಲು ಒಪ್ಪಿ ತನ್ನ ಮಗ ರಾಘವೇಂದ್ರನನ್ನು ಕರೆದು, 'ಸೀತಾರಾಮು ಮನೆಗೆ ಬಂದಿದ್ದರೆ ಕರೆದುಕೊಂಡು ಬಾ' ಎಂದು ಹೇಳಿ ಕಳಿಸಿದಳು.

ಸೀತಾರಾಮಯ್ಯ ಕೆಲಸವಿರಲಿ, ಬಿಡಲಿ, ದಿನಕ್ಕೆ ಎರಡು ಮೂರು ಬಾರಿಯಾದರೂ ಶ್ರೀನಿವಾಸರಾಯರ ಮನೆಗೆ ಬಂದು ಹೋಗುತ್ತಿದ್ದ. ಹಾಗಿರುವಾಗ ಇಷ್ಟಕ್ಕಿದ್ದಹಾಗೇ ಬರಬೇಕೆಂದು ಕಮಲಮ್ಮ ಹೇಳಿ ಕಳಿಸಿ ದುದನ್ನು ಕಂಡು ಸೀತಾರಾಮಯ್ಯನಿಗೆ ಆಶ್ಚರ್ಯವಾಯಿತು.

'ಅಮ್ಮ ಕರೀತಾಳೆ, ಈಗಲೇ ಬರಬೇಕಂತೆ'

—ಎಂದ ರಾಘವೇಂದ್ರನ ಮಾತನ್ನು ಕೇಳಿ ಅಂಥ ಅವಸರದ ಕೆಲಸ ಏನಿರಬಹುದೆಂದು ಚಿಂತಿಸುತ್ತಲೇ ಹೋದ, ಕಮಲಮ್ಮನನ್ನು ಕಾಣಲು.

'ಏನತ್ತೆ, ಇಷ್ಟು ಅವಸರವಾಗಿ ಹೇಳಿಕಳುಹಿಸಿದೆ'

—ಎಂದು ಕೇಳಿದ ಸೀತಾರಾಮಯ್ಯ ತನ್ನ ಬರವನ್ನೇ ಕಾದು ಕುಳಿತ ಕಮಲಮ್ಮನನ್ನು ನೋಡಿ.

'ಹೇಳಿ ಕಳಿಸದೆ ಇನ್ನೇನು ಮಾಡಬೇಕಪ್ಪ. ಈಗ ನೀನು ದೊಡ್ಡ ಮನುಷ್ಯನಾದೆ. ಕರೆ ಕಳಿಸದೆ ಬರೋದುಂಟೆ?'

—ಎಂದಳು ಕಮಲಮ್ಮ ನಗುತ್ತಾ.

'ಹೌದು ಹೌದು. ಇವತ್ತು ಬೆಳಗಿನಿಂದ ನನ್ನ ತಲೇ ಮೇಲೆ ಬಂಗಾರದ ಕೋಡು ಮೂಡಿದೆ. ಅದೆಲ್ಲಾ ಇರಲಿ—ಈಗ ನನ್ನಿಂದ ಏನಾಗಬೇಕು ಹೇಳು?'

—ಸೀತಾರಾಮಯ್ಯ ಕೇಳಿದ.

'ಇಲ್ಲಿ ಬೇಡ, ಹೇಳ್ತೀನಿ ಬಾ'

—ಎಂದು ಕಮಲಮ್ಮ ಸೀತಾರಾಮಯ್ಯನನ್ನು ಒತ್ತಲಿಗೆ ಕರೆದು ಕೊಂಡು ಹೋಗಿ ತುಳಸಿ ಕಟ್ಟೆಯ ಬಳಿ ಕುಳಿತುಕೊಂಡು,

'ನಿನಗೆ ದಿನಾ ದಿನಾ ಸಾರು, ಹುಳಿ ಕೊಟ್ಟು ನನಗೆ ಬೇಜಾರು ಬಂದಿದೆ. ಅದಕ್ಕೆ ಇನ್ನುಮೇಲೆ ಆಗೊಲ್ಲಾಂತ ಹೇಳಲಿಕ್ಕೆ ಕರೆಸಿದೆ'

—ಎಂದಳು.

'ಅದ್ಯಾಕತ್ತೆ ನನ್ನ ಮೇಲೆ ಅಷ್ಟು ಬೇಜಾರು?'

'ಮತ್ತೆ ಎಷ್ಟು ದಿನಾಂತ ಮಾಡಿಹಾಕಲಿ. ಸಾಯೋವರೆಗೂ ನಾನೇ ಮಾಡಿ ಹಾಕ್ತೀನಿ ಅಂತ ಕರಾರು ಬರೆದು ಕೊಟ್ಟಿದೇನೋ? ನಿನ್ನ ದಾರಿ ನೀನು ನೋಡಿಕೋ ಬೇಕೋ ಬೇಡವೊ?

'ಅದೆಲ್ಲಾ ಬರೀ ಕಳ್ಳನೆಪ. ಇರಲಿ. ಇದೆಲ್ಲಾ ಈಗ ಯಾಕೆ ಬಂತು ಹೇಳು?'

'ಯಾಕೆ ಬರುತ್ತೆ ಹೇಳು? ದುಡಿಯೋದು ನನ್ನ ಕೈಯಲ್ಲಿ ಆಗದ್ದಕ್ಕೆ. ಎಷ್ಟು ದಿನಾಂತ ಒಬ್ಬಳೇ ದುಡೀಲಿ. ನನಗೂ ಕಣ್ಣೋ ಮೂಗೋ ನೋವಾದರೆ ಸಹಾಯಕ್ಕೆ ಯಾರಿದಾರೆ? ನೀನು ಮದುವೆ ಮಾಡಿಕೊಂಡು, ನಿನಗೊಬ್ಬಳು ಹೆಂಡತಿ ಅಂತಲಾದರೂ ಬಂದರೆ, ಇಷ್ಟುದಿನ ಮಗ ಅಂದುಕೊಂಡು ನಿನಗೆ ದುಡಿದೆ; ಸೊಸೆ ಅಂದುಕೊಂಡು ಅವಳ ಕೈಲಿ ಕೆಲಸ ಮಾಡಿಸಿಕೊಳ್ಳಬಹುದಾಗಿತ್ತು. ಆದರೆ ನಿನಗೆ ಆ ಯೋಚನೇನೇ ಇಲ್ಲ. ಬೆಲ್ಲ ಬಡಿದ ಕಲ್ಲಿನ ಹಾಗೆ ತಣ್ಣಗೆ ಇದೀಯ. ನನ್ನ ಕಷ್ಟ ಸುಖ ಯಾರಿಗೆ ಬೇಕಾಗಿದೆ ಹೇಳು?'

—ಸಿಟ್ಟಾದಂತೆ ಹೇಳಿದಳು ಕಮಲಮ್ಮ. ಆ ಮಾತು ಕೇಳಿ ಸೀತಾರಾಮಯ್ಯನಿಗೆ ನಗುಬಂತು.

ಅಷ್ಟೇತಾನೇ ಕಮಲತ್ತೆ. ಅದಕ್ಕೆ ಇಷ್ಟೆಲ್ಲಾ ಅಟಾಟೋಪಾನೆ? ಈಗ ನಿನಗೆ ಬೇಕಾದ್ದು ಒಬ್ಬಳು ಸೊಸೆ ತಾನೇ. ನಿನಗೆ ಒಪ್ಪಿಗೆಯಾದೋಳು ಎಲ್ಲಿದಾಳೆ ತೋರಿಸು. ಹೋಗಿ ತಾಳಿ ಕಟ್ಟಿ ಹಿಡಿದುಕೊಂಡು ಬರ್ತೀನಿ.'

'ಅದೆಲ್ಲಾ ಬರೀ ಮಾತು. ನನ್ನ ಮಾತು ನೀನೆಲ್ಲಿ ಕೇಳ್ತೀಯ? ನಾನು ತೋರಿಸಿದರೆ ನೀನು ಒಪ್ಪಿಕೊ ಬೇಕಲ್ಲ.'

'ನೀನು ತೋರಿಸು—ಆಮೇಲೆ ನಾನು ಒಪ್ಪಿಕೊತೀನೋ ಇಲ್ಲವೋ ನಿನಗೆ ಗೊತ್ತಾಗುತ್ತೆ.'

'ಇದೇ ಮಾತೆ?'

'ಹೂ.'

'ಹಾಗಾದ್ರೆ ಈಗ ಒಂದು ಹೆಣ್ಣು ಬಂದಿದೆ. ನಾನು ಒಪ್ಪಿದರೆ ನೀನು ಮದುವೆ ಆಗ್ತೀಯಾ?'

'ನೀನು, ಮಾವ ಒಪ್ಪಿದರೆ ಆಗಿಹೋಯ್ತು. ನನ್ನ ಕೇಳೋದು ಏನಿದೆ? ನೀವು ಹೂ ಅಂದು ಕಲ್ಲು ಗುಂಡು ತೋರಿಸಿದರೆ ಅದಕ್ಕೇ ತಾಳಿ ಕಟ್ಟೇನಿ.'

'ಹಾಗಾದರೆ ಸರಿ.'

—ಎಂದು ಕಮಲಮ್ಮ ಕೆರೆಸಂತೆಹಳ್ಳಿ ಮೇಸ್ಟರು ಲಕ್ಷ್ಮಣರಾಯರ ಕಥೆಯನ್ನೆಲ್ಲಾ ಹೇಳಿ—

‘ಅವರು ಈ ಹೆಣ್ಣನ್ನು ಸೀತಾರಾಮುನಿಗೆ ಏಕೆ ತಂದುಕೋಬಾರದು. ಸೀತಾರಾಮುನ ಕೇಳು ಅಂದರು. ಅದಕ್ಕೇ ಹೇಳಿ ಕಳಿಸಿದೆ’

—ಎಂದಳು.

ಆಕೆ ಹೇಳಿದುದನ್ನು ಕೇಳಿ ಸೀತಾರಾಮಯ್ಯನಿಗೆ ವ್ಯಥೆಯಾಯಿತು.

‘ಅಲ್ಲ ಅತ್ತೆ. ಮಾವ ಆಗಲಿ ಅಂದ ಮೇಲೆ ನನ್ನ ಕೇಳೋದು ಏನಿತ್ತು? ಹೂ ಅಂದಿದ್ದರೆ, ಪಾಪ, ಅವರು ಕಾಯುವುದಾದರೂ ತಪ್ಪುತ್ತಿತ್ತು.’

‘ಮದುವೆಯಾಗೋನು ನೀನು ಹೇಳದೆ, ನಾವು ಹೇಳಲಿಕ್ಕಾಗುತ್ತೆಯೇ ಸೀತಾರಾಮು?’

‘ಯಾಕೆ? ನನ್ನಲ್ಲಿ ಅಷ್ಟು ನಂಬಿಕೆ ಇರಲಿಲ್ಲವೆ ನಿನಗೆ?’

‘ನಂಬಿಕೆ ಇದೆಯಪ್ಪ. ಆದರೂ ಇದು ಮದುವೆ ವಿಚಾರ. ಒಳ್ಳೇದೋ ಕೆಟ್ಟದೋ ಅನುಭವಿಸೋನು ನೀನು. ನಾವೆಲ್ಲಾ ಬರೀ ಮಾತಾಡೋ ರಾಗ್ತೀವಿ. ಅದಕ್ಕೆ ನಿನ್ನನ್ನು ಒಂದು ಮಾತು ಕೇಳಿ, ಆಮೇಲೆ ಹೇಳೋ ದೂಂತ ಅಂದುಕೊಂಡೆವು. ನೀನು ಮದುವೆ ಮಾಡಿಕೊಳ್ಳಲಿಕ್ಕೆ ಒಪ್ಪೋ ದಾದರೆ, ಒಂದು ದಿನ ಹೋಗಿ, ಹುಡುಗೀನ ನೋಡಿಕೊಂಡು ಬಾ. ಹುಡುಗಿ ನಿನ್ನ ಮನಸ್ಸಿಗೆ ಬಂದರೆ, ಆಮೇಲೆ ಜಾತಕಾನುಕೂಲ ನೋಡಿಕೊಂಡು ಲಗ್ನ ನಿಶ್ಚಯ ಮಾಡೋದು.’

—ಎಂದಳು ಕಮಲಮ್ಮ.

‘ನೋಡು ಅತ್ತೆ. ನನಗೊಂದೂ ಹೇಳಬೇಡ. ನನ್ನನ್ನೇನೂ ಕೇಳಬೇಡ. ನಿಮಗೆ ಒಪ್ಪಿಗೆ ಆದರೆ ನನಗೂ ಒಪ್ಪಿಗೆ ಆದಹಾಗೇ. ಹುಡುಗೀನ ನೋಡೋದೋ ಜಾತಕಾ ನೋಡಿಸೋದೋ—ಎಲ್ಲಾ ನಿಮಗೇ ಸೇರಿದ್ದು.’

‘ಹುಡುಗೀನೂ ನಾನೇ ನೋಡಬೇಕು ಅಂತೀಯ?’

‘ಹೂ.’

‘ನಾಳೆ ಕರೀಮುಖದ ಕೋಡಂಗೀನ ನಾನು ಒಪ್ಪಿಕೊಂಡು ಬಂದರೆ..’

‘ನಿನ್ನ ಸೊಸೇನೇ ಕೋಡಂಗಿ ಆಗ್ತಾಳೆ. ನೋಡು ಅತ್ತೆ— ನನಗೊಂದೂ ತಿಳಿಯೊಲ್ಲ. ನನ್ನ ಒಳಿತು—ಕೆಡಕು ನನಗಿಂತ ಚೆನ್ನಾಗಿ

ನಿಮಗೆ ಗೊತ್ತು. ತಬ್ಬಲಿಯಾಗಿದ್ದೋವ್ನ ಸಾಕಿ ಬೆಳಸಿದೋರು ನೀವು. ಆದ್ದ ರಿಂದ ನಿಮಗೆ ಹೇಗೆ ಬೇಕೋ ಹಾಗೆ ಮಾಡಿ. ನೀವು ಮಾಡಿದ್ದಕ್ಕೆ ನನ್ನ ಒಪ್ಪಿಗೆ ಇದೆ. ನೀವು ನನಗೆ ಕೆಟ್ಟದಾಗೋವನ್ನು ಖಂಡಿತ ಮಾಡೋಲ್ಲ ಅನ್ನೋ ನಂಬಿಕೆ ನನಗಿದೆ.'

—ಎಂದು ಸೀತಾರಾಮಯ್ಯ ಎಲ್ಲಾ ಜವಾಬ್ದಾರಿಯನ್ನು ಅವರ ಮೇಲೇ ಹೊರಿಸಿದ.

ಅವನ ಮಾತಿನಿಂದ ಕಮಲಮ್ಮನಿಗೆ ಸಮಾಧಾನವಾಯಿತು. ಸೀತಾ ರಾಮಯ್ಯ ಹೇಳಿದುದನ್ನು ಶ್ರೀನಿವಾಸರಾಯರಿಗೂ ಹೇಳಿ—

'ಸೀತಾರಾಮು ನಮ್ಮ ಮಾತಿಗೆ ಎದುರು ಹೇಳೊಲ್ಲ ಅಂತ ನನಗೆ ಮೊದಲೇ ಗೊತ್ತಿತ್ತು!'

—ಎಂದಳು.

'ಆ ನಂಬಿಕೆ ಎಷ್ಟು ಸಂತೋಷದ ವಿಷಯವೋ, ಅಷ್ಟೇ ದೊಡ್ಡ ಜವಾಬ್ದಾರಿ'

—ಎಂದರು ಶ್ರೀನಿವಾಸರಾಯರು.

೫

ಸೀತಾರಾಮಯ್ಯ ಮದುವೆಯಾಗಲು ಒಪ್ಪಿದನೆಂದು ಹೆಂಡತಿಯಿಂದ ಕೇಳಿದ ಶ್ರೀನಿವಾಸರಾಯರಿಗೆ ಆಗಲೇ ಆ ವಿಷಯವನ್ನು ಲಕ್ಷ್ಮಣರಾಯನಿಗೆ ತಿಳಿಸಿ 'ನಿನ್ನ ಕೆಲಸ ಆಯಿತು. ಚಿಂತೆಯನ್ನು ಮರೆತು ಹಾಯಾಗಿರು' ಎಂದು ಹೇಳಬೇಕೆಂಬಷ್ಟು ಉತ್ಸಾಹವಾಯಿತು. ಆದರೆ ಕಮಲಮ್ಮ ಆ ಮಾತನ್ನು ಅಷ್ಟು ಸುಲಭಕ್ಕೆ ಮುಗಿಸಲು ಒಪ್ಪಲಿಲ್ಲ.

'ಹುಡುಗನೇನೊ ಮದುವೆಗೆ ಸಿದ್ಧವಾಗಿದಾನೆ. ಹುಡುಗಿಯನ್ನು ನೋಡಿ, ಒಪ್ಪಿಗೆಯಾದರೆ ಮುಂದಿನ ಮಾತಾಡೋಣ ಎಂದು ಹೇಳಿ'

—ಎಂದಳು.

'ಹುಡುಗೀನ ನೋಡೋದೇನೇ? ಬಡವರ ಮನೇಲಿ ಬೆಳೆದ ಹುಡುಗಿ, ಸಂಸಾರಕ್ಕೆ ತಕ್ಕ ಹಾಗೆ ಇರ್ತಾಳೆ. ಸ್ವಲ್ಪ ಹೆಚ್ಚು ಕಡಮೆ ಇದ್ದರೆ ಆಮೇಲೆ ತಿದ್ದಿಕೊಂಡರೂ ಆಗುತ್ತೆ. ಅದಕ್ಕೋಸ್ಕರ ಅವನ ಮನಸ್ಸಿನಲ್ಲಿ ಮತ್ತಷ್ಟು ಅನುಮಾನ ಇಟ್ಟು ಕುದಿಸೋದೇಕೆ? ಜಾತಕ ಒಂದು ನೋಡಬೇಕು. ನೋಡಿದರಾಯಿತು.'

'ಮನೆಗೆಲಸ ಬರದಿದ್ದರೆ ನೀವು ಹೇಳೋಹಾಗೆ ಮನೆಗೆ ಬಂದಮೇಲೂ ತಿದ್ದಿಕೊಳ್ಳಬಹುದು. ಕಣ್ಣು ಮೂಗು ನೇರವಾಗಿಲ್ಲದಿದ್ದರೆ, ಅವನ್ನು ತಿದ್ದೋದು ಯಾರಿಂದ ಸಾಧ್ಯ? ಅದನ್ನಾದರೂ ನೋಡಬೇಕೋ ಬೇಡವೋ? ಹುಡುಗ ಹೇಳಿದಹಾಗೆ ಕೇಳ್ತಾನೆ ಅಂತ, ಯಾರನ್ನೋ ಉಳಿಸಲಿಕ್ಕೆ ಹೋಗಿ, ಒಂದು ಕುರುಡಿಯನ್ನು ತಂದು ಗಂಟು ಹಾಕಿದರೆ, ನಾಳೆ ನೋಡಿದ ಜನ

ನಮ್ಮನ್ನು ಅನ್ನೋಲ್ಲವೆ? ಅದೆಲ್ಲಾ ಆಗೋಮಾತಲ್ಲ. ಮೊದಲು ಹುಡುಗೀನ ನೋಡಿ ಆಮೇಲೆ ಮುಂದಿನ ಮಾತು.’

—ಎಂದು ನಿಧಾನವಾಗಿ ಹೇಳಿದರು ಕಮಲಮ್ಮ.

‘ನೋಡು—ಕಣ್ಣು, ಮೂಗು ಊನವಾಗಿದ್ದರೆ ಲಕ್ಷ್ಮಣರಾಯರೇ ಹೇಳೋರು. ಜಾತಕದಲ್ಲಿನ ಮೂಲಾನಕ್ಷತ್ರವೇ ದೊಡ್ಡ ದೋಷ ಅಂದರು. ಅದರಿಂದ ಸೀತಾರಾಮನಿಗೆ ಬಾಧಕವಿಲ್ಲ. ಹಾಗಿರೋವಾಗ ಮತ್ತಿನ್ನೇನು ನೋಡಬೇಕು?’

‘ಬಣ್ಣ ಹೇಗಿದೆಯೋ?’

‘ಹೇಗಿರುತ್ತೆ? ಬಣ್ಣ ಹೇಗಿದ್ದರೇನು ತೊಳೆದುಕೊಂಡು ಕುಡೀಬೇಕೇ? ನೀನು ಇಲ್ಲದ್ದೆಲ್ಲಾ ತರಲೆ ತೆಗೀಬೇಡ. ಆ ಬ್ರಾಹ್ಮಣನ ಮನಸ್ಸಿನ ವ್ಯಥೆ ನಮ್ಮಿಂದ ನೀಗೋ ಯೋಗ ನಮಗಿದ್ದರೆ ನೀಗಲಿ.’

—ಎಂದು ಸಮಾಧಾನ ಹೇಳಿದರು ಶ್ರೀನಿವಾಸರಾಯರು. ಆದರೆ ಕಮಲಮ್ಮ ಆ ಮಾತಿಗೆ ಒಪ್ಪಲಿಲ್ಲ. ಕಡೆಗೆ ಶ್ರೀನಿವಾಸರಾಯರೇ ಆಕೆಯ ಮಾತಿಗೆ ಸೋತು, ಲಕ್ಷ್ಮಣರಾಯರಿಗೆ ಆ ಮಾತನ್ನೇ ಹೇಳಿದರು.’

‘ಅಗತ್ಯವಾಗಿ ಆಗಲಿ ಸ್ವಾಮಿ. ಹಸೂನ ಕೊಟ್ಟಿಗೇಲಿ ಕಟ್ಟಿ, ಬೀದೀಲಿ ನಿಂತು ವ್ಯಾಪಾರ ಮಾಡಿದರೆ ಹೇಗೆ? ನಿಮ್ಮ ಮನೆಯವರು ಕೇಳೋದೇನೂ ಹೆಚ್ಚಲ್ಲ. ಅಗತ್ಯವಾಗಿ ಬಂದು ಹುಡುಗೀನ ನೋಡಿ. ಎಂದು ಬರುತ್ತೀರಿ ಅಂತ ತಿಳಿಸಿದರೆ, ಅವತ್ತು ನಾನು ಸಿದ್ಧವಾಗಿರುತ್ತೇನೆ.’

—ಎಂದರು, ಲಕ್ಷ್ಮಣರಾಯರು.

‘ಏನೋ ನಿಮ್ಮ ಚಿಂತೆ ಬಗೆಹರಿಸಿಯೇ ಕಳಿಸಬೇಕೆಂದಿದ್ದೆ, ಆದರೆ ದೇವರು ಅಷ್ಟಕ್ಕೆ ಬಾಯಿ ಕೊಡಲಿಲ್ಲ. ನಾಳೆ, ನಾಳಿದ್ದರಲ್ಲಿ ಹುಡುಗನ್ನ ಕಳಿಸುತ್ತೇನೆ. ಹುಡುಗ ಒಳ್ಳೆಯವನು. ಏಕೋ ನನಗೂ, ಅವನು ಒಪ್ಪುತ್ತಾನೆ, ಇದು ಆಗೋ ಕೆಲಸ ಅಂತಲೇ ಅನಿಸುತ್ತದೆ. ಇಷ್ಟರ ಮೇಲೆ ದೇವರ ಮನಸ್ಸಿನಲ್ಲಿದ್ದ ಹಾಗಾಗಲಿ.’

'ಸ್ವಾಮಿ, ನಿಮ್ಮ ಹಾಗೆ ನನಗೂ ಅನಿಸುತ್ತಾ ಇದೆ. ನಿಮ್ಮ ಭೇಟಿಯಾದ ಹೊತ್ತು ಒಳ್ಳೆಯದು. ಜೋಲುಮೋರೆ ಹಾಕಿಕೊಂಡು ಹೋಗುತ್ತಿದ್ದವನು, ಏನೋ ಒಂದು ಹೊಸ ಆಸೆ ಹಚ್ಚಿಕೊಂಡು ಹೋಗುವ ಹಾಗಾಯಿತು. ನಮ್ಮ ಕಷ್ಟ ಪರಿಹಾರವಾಗುವ ಹೊತ್ತು ಬಂದಿದ್ದರೆ, ಎಲ್ಲಾ ಸುಗಮವಾಗಿ ಆಗುತ್ತೆ. ಅಪ್ಪಣೆಯಾದರೆ, ನಾನು ಇವತ್ತೇ ಹೊರಟು ಬಿಡುತ್ತೇನೆ.'

'ಇವತ್ತೇ ಏನು ಅವಸರ? ನೀವು ಹುಡುಗನನ್ನು ನೋಡ್ತುವುದಿಲ್ಲವೆ?'

'ಹುಡುಗ ನಿಮ್ಮ ಮನೆಯಿಂದ ಹೋಗುವಾಗ ನೋಡಿದೆ. ಉಳಿದದ್ದಕ್ಕೆಲ್ಲಾ ನಿಮ್ಮ ಮಾತೇ ನನಗೆ ಸಾಕು.'

—ಎಂದರು ಲಕ್ಷ್ಮಣರಾಯರು.

'ಆದರೂ ನೋಡಿ, ಮಾತನಾಡಬೇಕು ಎನ್ನುವುದಿದ್ದರೆ, ಸಂಕೋಚ ಪಟ್ಟುಕೊಳ್ಳಬೇಡಿ.'

'ಸಂಕೋಚವೂ ಇಲ್ಲ, ಏನೂ ಇಲ್ಲ ಸ್ವಾಮಿ. ತುಂಬು ಮನಸ್ಸಿನಿಂದ ಈ ಮಾತು ಹೇಳುತ್ತಿದ್ದೇನೆ. ಅರೆಜೀವವಾಗಿದ್ದೋನಿಗೆ ಇವತ್ತು ನಿಮ್ಮ ಮಾತು ಕೇಳಿ ಮತ್ತೆ ಜೀವ ಬಂದಹಾಗಿದೆ.'

—ಎಂದು ಲಕ್ಷ್ಮಣರಾಯರು, ಶ್ರೀನಿವಾಸರಾಯರು ಎಷ್ಟು ಬಲವಂತ ಮಾಡಿದರೂ ಕೇಳದೆ, ರಾತ್ರಿಯ ಪ್ರಯಾಣ ಏಕೆ ? ' ಎಂದರೆ—

'ಬೇಸಿಗೆಯಲ್ಲಿ ಪ್ರಯಾಣ ನಡೆಯುಲಿಕ್ಕೆ ಹಿತವಾಗಿರುತ್ತೆ. ಮನೆ ಬಿಟ್ಟು ಮೂರುದಿನ ಆಯಿತು ಮನೇಲಿ ಎಂದು ಬರ್ತೀನೋ, ಏನು ಸುದ್ದಿ ತರ್ತೀನೋ ಅಂತ ಕಾಯ್ತಾ ಇರ್‍ತಾರೆ. ಆದಷ್ಟು ಬೇಗ ಈ ಸುದ್ದಿ ಅವರ ಕಿವೀ ಮೇಲೆ ಹಾಕ್ತೀನಿ.'

—ಎಂದು ಹೇಳಿ ಆ ಸಂಜೆಯೇ ಕೆರೆಸಂತೆ ಹಳ್ಳಿಗೆ ಹೊರಟೇಬಿಟ್ಟರು.

ಕಮಲಮ್ಮ ಹುಡುಗಿಯನ್ನು ನೋಡದೆ ಮದುವೆಗೆ ಒಪ್ಪಲು ಇಷ್ಟಪಡಲಿಲ್ಲ. ಆದರೆ ಹುಡುಗಿಯನ್ನು ನೋಡ ಹೋಗಲು ಸೀತಾರಾಮಯ್ಯನೂ ಒಪ್ಪಲಿಲ್ಲ.

‘ ನನಗೆ ಅದೊಂದೂ ಗೊತ್ತಾಗೊಲ್ಲ ಅತ್ತೆ. ನಾನಾಗಲೇ ಹೇಳಿಬಿಟ್ಟಿದೀನಿ—ನೀನು ಕಲ್ಲುಗುಂಡು ತೋರಿಸಿ ತಾಳಿಕಟ್ಟು ಅಂದರೂ ಕಟ್ತೀನೆ ಅಂತ. ಈಗಲೂ ಅಷ್ಟೆ. ನೀನು ಒಪ್ಪಿದರೆ ನಾನೂ ಒಪ್ಪಿದ ಹಾಗೇ.’

—ಎಂದು ಬಿಟ್ಟ.

‘ ಮದುವೆಯಾಗೋನು, ನೀನು, ನಾನಲ್ಲ. ನಾಳೆ ಹುಡುಗಿ ನಿನಗೆ ಒಪ್ಪಿಗೆಯಾಗದೆ ಹೋದರೆ ನಾನು ಅವಳನ್ನು ಕಟ್ಟಿಕೊಂಡು ಸಾಕಲೇ ?’

‘ ನೀನು ಒಪ್ಪಿಕೊಂಡು ಬಾ, ಸಾಕೋ ಭಾರ ನನಗಿರಲಿ.’

‘ ಹುಡುಗಿ ಚೆನ್ನಾಗಿಲ್ಲದಿದ್ದರೆ....?’

‘ ಪರವಾಯಿಲ್ಲ. ಹೇಗಾದರೂ ಇರಲಿ. ಗುಣಮಾತ್ರ ನಿನ್ನ ಹಾಗಿದ್ದರೆ ಸರಿ.’

—ಎಂದ.

‘ ಎಲ್ಲಾ ನನ್ನಮೇಲೆ ಜವಾಬ್ದಾರಿ ಹಾಕಿ, ನನ್ನ ಕೆಟ್ಟೋಳನ್ನ ಮಾಡಬೇಕು ಅಂತೀರಿ. ಆಗಲಿ—ಕೊಡೋ ತರೋ ವಿಷಯ ಏನು ಹೇಳಲಿ ?’

‘ ಕೊಡೋ ತರೋ ವಿಷಯ ಅಂದರೆ....? ’

—ಕಮಲಮ್ಮನ ಮಾತು ಅರ್ಥವಾಗದಂತೆ ಕೇಳಿದ ಸೀತಾರಾಮಯ್ಯ.

‘ ಅವರು ಗಂಡಿಗೆ ಕೊಡೋದು, ಗಂಡು ಹೆಣ್ಣಿಗೆ ಕೊಡೋ ಒಡವೆ, ಉಡುಗರೆ....’

‘ ನಮಗಿರೋ ಶ್ರೀಮಂತಿಕೆ ನಿನಗೆ ಗೊತ್ತೇ ಇದೆ ಅತ್ತೆ. ತಾಳಿ ಒಂದು ತಗೊಂಡು ಬರ್ತೀನಿ. ಅವರು ಕೊಡೋದು ಬಿಡೋದು ಅವರಿಷ್ಟ.’

‘ ನೀನೇನೂ ಕೇಳೊಲ್ಲವೇ ? ’

‘ ಊಹೂ.’

‘ ಸರಿ ಹಾಗಾದ್ರೆ-ಬಿಚ್ಚಾತ್ರೆ ಗೌರೀನ ತಂದು ನಿಲ್ಲಿಸಿದರೂ ನಮ್ಮ ಹುಡುಗ ತಾಳಿ ಕಟ್ತಾನೆ ಅಂತ ಹೇಳ್ತೀನಿ. ಇಬ್ಬರಿಗೂ ಜೋಡಿ ಚನ್ನಾಗಿ ಸೇರಿದೆ.”

—ಎಂದು ಕಮಲಮ್ಮ ಮಾತು ಮುಗಿಸಿದರು.

ಮದುವೆಯನ್ನು ನಿಶ್ಚಯಿಸುವ ದೊಡ್ಡ ಜವಾಬದಾರಿಯನ್ನು ಹೊತ್ತು ರಾಘವೇಂದ್ರನೊಂದಿಗೆ ಗಾಡಿಯಲ್ಲಿ, ಕೆರೆಸಂತೆಹಳ್ಳಿಗೆ ಬಂದ ಕಮಲಮ್ಮ ನನ್ನು ಕಂಡು ಲಕ್ಷ್ಮಣರಾಯನಿಗೆ, ಆತನ ಹೆಂಡತಿ ಸೀತಮ್ಮನಿಗೆ ತಮ್ಮ ಪಾಲಿನ ಅದೃಷ್ಟ ದೇವತೆಯೇ ಮನೆಬಾಗಿಲಿಗೆ ಬಂದಷ್ಟು ಸಂತೋಷ ವಾಯಿತು. ಕೈಕಾಲು ತೊಳೆಯಲು ನೀರಿನ ತಂಬಿಗೆಯನ್ನು ಕೂಡಾ ತಾನು ಎತ್ತಲು ಅವಕಾಶ ಕೊಡದೆ, ಸ್ವತಃ ಆಜೂಜುವಾರಿಯನ್ನು ನೋಡಿ ಕೊಳ್ಳುತ್ತಿದ್ದ ಸೀತಮ್ಮನನ್ನು ಕಂಡು, ಆದರ ಹಿಂದಿದ್ದ ಹೆಣ್ಣು ಹಡೆವ ತಾಯಿಯ ಹೃದಯದ ಬೇಗೆಯನ್ನು ಅರಿತು, ಕಮಲಮ್ಮನಿಗೆ ಕರಳು ಹಿಂಡಿ ದಂತಾಯಿತು.

'ಅಯ್ಯೋ, ನಾನೇನು ದಿವಾನರ ಹೆಂಡತೀನೇ, ಇದೇನು ಇಷ್ಟು ಉಪಚಾರ ಮಾಡ್ತೀರ?'

—ಎಂದು ಕೇಳಿದಳು.

'ದಿವಾನರ ಹೆಂಡತಿ ಅಲ್ಲ ನೀವು ಕಮಲಮ್ಮ, ಆದರೆ ನಮ್ಮ ಪಾಲಿಗೆ ಅದೃಷ್ಟ ದೇವತೆ. ನಮ್ಮ ಯಜಮಾನರಿಗೆ ನೀವು, ನಿಮ್ಮ ಯಜಮಾನರು ಮಾಡಿದ ಉಪಕಾರ, ನಮ್ಮ ದುಃಖ ಕಂಡು ನೀವು ಮರುಗಿದ್ದು ಎಲ್ಲಾ ಅವರು ಹೇಳಿದರು. ಈ ಲೋಕದಲ್ಲಿ ನಮ್ಮ ಪಾಲಿಗೆ ಅಯ್ಯೋ ಅನ್ನೋರೆ ಇಲ್ಲವೇನೋ ಅನಿಸಿತ್ತು. ಅಂಥ ಹೊತ್ತಿನಲ್ಲಿ ನಿಮ್ಮ ವಿಷಯ ಕೇಳಿ ಬಂಗಾರದ ಗಣಿ ಕಂಡಹಾಗಾಯಿತು. ದುಃಖದಲ್ಲಿರೋರಿಗೆ ಅಯ್ಯೋ ಪಾಪ ಅಂದವರೇ ದೇವರು.'

—ಎಂದಳು ಸೀತಮ್ಮ. ಆ ಮಾತಿನೊಂದಿಗೆ ಅಯಾಚಿತವಾಗಿ ಮೂಡಿಬಂದು ಕಣ್ಣನ್ನು ತುಂಬಿದ ಕಂಬನಿ, ಅದು ತೋರಿಕೆಯ ಉಪಚಾರದ ಮಾತಲ್ಲ ಎಂದು ಸಾಕ್ಷಿ ಹೇಳಿತು.

'ನಾವು ಮಾಡಿದ್ದು ಏನು ಮಹಾ ಸೀತಮ್ಮ. ಗಂಡಿತ್ತು, ಇದೆ ಅಂತ ಹೇಳಿದೆವು. ಅಷ್ಟೇ—ಏನೋ ಅಂದುಕೊಂಡ ಕೆಲಸ ಆದರೆ........'

'ಆಗೋದು ಬಿಡೋದು ನಮ್ಮ ಅದೃಷ್ಟ. ಆದರೆ ಈ ಕಾಲದಲ್ಲಿ ತಾವು ಅನ್ನ ಹಾಕೋದು ಇರಲಿ, ಇಂಥ ಕಡೆ ಅನ್ನ ಹಾಕ್ತಾರೆ ಅಂತ ಹೇಳಿ

ಆ ಸ್ಥಳ ತೋರಿಸೊ ಅಂಥ ಪುಣ್ಯವಂತರಾದರೂ ಎಲ್ಲಿದಾರೆ ಕಮಲಮ್ಮ? ಏನೋ ನಮ್ಮ ರತ್ನನ ಅದೃಷ್ಟ ದೊಡ್ಡದು. ಅದಕ್ಕೆ ನಮ್ಮ ಪಾಲಿಗೆ ದೇವರೂ ಇಲ್ಲ ಎಂದುಕೊಂಡ ಹೊತ್ತಿನಲ್ಲಿ ನೀವು ಕಣ್ಣಿಗೆ ಬಿದ್ದಿರಿ. '

—ಎಂದಳು ಸೀತಮ್ಮ.

ಆಕೆಯಾಡಿದ ಒಂದೊಂದು ಮಾತೂ, ಬೆಳೆದ ಮಗಳ ಮದುವೆಯ ಚಿಂತೆ ಆಕೆಯ ಹೃದಯವನ್ನು ಹೇಗೆ ದಹಿಸುತ್ತಿದೆ ಎಂದು ಸಾರಿ ಸಾರಿ ಹೇಳುತ್ತಿದ್ದವು. ಆ ಮಾತಿಗಿಂತಲೂ ಹೆಚ್ಚಾಗಿ, ಬಹುದಿನದ ಚಿಂತೆಯಿಂದ ಬಳಲಿ ಬಾಡಿದ ಆಕೆಯ ಮುಖ, ಚಿಂತೆಯ ಗೂಡಿನಂತೆ ನಿಸ್ತೇಜವಾಗಿದ್ದ ಕಣ್ಣುಗಳು, ತೊಟ್ಟಿದ್ದ ರವಿಕೆಯಡಿಯಲ್ಲಿ ಎದ್ದು ಕಾಣಿಸುತ್ತಿದ್ದ ಎದೆಯ ಮೂಳೆಗಳು, ತೊಟ್ಟ ಬಳೆ ಸಡಿಲವಾದ ಕೈಗಳು, ಅಲ್ಲಲ್ಲಿ ನರೆಕೂದಲುಗಳು ಮಿನುಗುತ್ತಿದ್ದ ತಲೆಗೂದಲು—ಒಂದೊಂದೂ ಆಕೆಯ ಜೀವದ ಬಳ್ಳಿಗೆ ಹಬ್ಬಿದ ಚಿಂತೆಯ ಬೇಗೆಗೆ ಬರೆದ ಮಹಾ ವ್ಯಾಖ್ಯಾನದಂತಿದ್ದವು. ಬಾಡಿದ ಮುಖದಲ್ಲಿ, ಆಳಕ್ಕಿಳಿದ ಕಣ್ಣುಗಳ ಆಳದಲ್ಲಿ ಹೊಳೆಯುತ್ತಿದ್ದ ಹೊಸ ಬೆಳಕು, ' ನಾನು ಆರದಂತೆ ನೋಡಿಕೊ ' ಎಂದು ಕಮಲಮ್ಮನನ್ನು ಬೇಡಿ ಹುಡುಗಿಯನ್ನು ನೋಡುವ ಮೊದಲೇ, ಕಮಲಮ್ಮ ಮದುವೆಗೆ ಒಪ್ಪುವಂತೆ ಮಾಡಿತು. ಆದರೂ ಹುಡುಗಿಯನ್ನು ನೋಡಬೇಕೆಂದೇ ಬಂದಿದ್ದುದರಿಂದ—

' ಎಲ್ಲಿ ನಿಮ್ಮ ಹುಡುಗಿ ಕಾಣುವುದಿಲ್ಲವಲ್ಲಾ ?'

—ಎಂದು ಕೇಳಲೇಬೇಕಾಯಿತು.

' ಬಟ್ಟೆ ಒಗೆದುಕೊಂಡು ಬರಲು ಕಾಲುವೆಗೆ ಹೋಗಿದಾಳೆ. ಇನ್ನೇನು ಬರಬಹುದು. ನೀವು ಮೊದಲು ಊಟಮಾಡಿ '

—ಎಂದದ್ದರಿಂದ, ಕಮಲಮ್ಮ ಸೀತಮ್ಮನ ಬಲವಂತಕ್ಕೆ ಕಟ್ಟುಬಿದ್ದು ಊಟ ಮುಗಿಸಬೇಕಾಯಿತು.

ಕಮಲಮ್ಮ ಊಟ ಮುಗಿಸಿ, ಕೈ ತೊಳೆಯಲೆಂದು ಹಿತ್ತಲಿಗೆ ಬರುವ ವೇಳೆಗೆ, ರತ್ನ ಒಗೆದ ಬಟ್ಟೆಗಳ ಮೂಟೆಯನ್ನು ಹೊತ್ತುಕೊಂಡು ಬಂದಳು.

ಬಟ್ಟೆಗಳನ್ನು ಒಗೆದ ಶ್ರಮ, ಭಾರವಾದ ಒದ್ದೆ ಬಟ್ಟೆಗಳ ಮೂಟೆಯನ್ನು ಬಿಸಿಲಿನಲ್ಲಿ ಹೊತ್ತು ತಂದ ದಣಿವಿನಿಂದ ಕೆಂಪೇರಿದ ರತ್ನಳ ಮುಖವನ್ನು ನೋಡಿದಳು ಕಮಲಮ್ಮ.

ನೋಡುತ್ತಿದ್ದ ಹಾಗೇ ಆ ಎಳೆ ಜೀವದ ದಣಿವು ಆಕೆಯ ಕರುಳಿಗೆ ತಟ್ಟಿ, ತೊಳೆದ ಕೈಯ್ಯನ್ನು ಅವಸರವಾಗಿ ಸೀರೆಯ ನೆರಿಗೆಗೆ ಒರಸಿಕೊಂಡು, ಮುಂದೆ ಹೋಗಿ,

‘ ಇಲ್ಲಿ ಕೊಡು ’

—ಎಂದು ಬಲವಂತವಾಗಿ ಆ ಹೊರೆಯನ್ನು ಇಳಿಸಿಕೊಂಡು—

‘ ಈ ಬೇಯೋ ಬಿಸಿಲಿನಲ್ಲೇ ಬಟ್ಟೆ ಒಗೆಯೋಕೆ ಹೋಗಿದೀಯಲ್ಲೇ ತಾಯಿ, ಬಿಸಿಲು ಏರೋ ಮುಂಚೇನೆ ಹೋಗಬಾರದಿತ್ತೆ ? ’

—ಎಂದು, ಮೂಟೆಯನ್ನು ಬಿಚ್ಚಿ, ಹಿತ್ತಿಲಿನಲ್ಲಿದ್ದ ಕರಿಬೇವಿನಮರ, ನುಗ್ಗೆಮರಗಳಿಗೆ ಬಿಗಿದಿದ್ದ ಹಗ್ಗದ ಮೇಲೆ ಬಟ್ಟೆಗಳನ್ನು ಒಣಗಲು ಹಾಕುತ್ತಾ—

‘ ನೀನು ಹೋಗಿ ಸ್ನಾನ ಮಾಡಿ, ಊಟಮಾಡು ಹೋಗು. ಈ ಬಟ್ಟೆ ನಾನು ಆರಹಾಕ್ತೀನಿ ’

—ಎಂದಳು.

‘ಬೇಡ. ಅದೇನು ಮಹಾ. ನಾನು ಒಣಗಿಹಾಕಿ ಊಟಮಾಡ್ತೀನಿ’

—ಎಂದಳು ರತ್ನ, ಅಪರಿಚಿತಳಾದ ಕಮಲಮ್ಮನ ಸರಳ ಸ್ವಭಾವಕ್ಕೆ ಮಾರುಹೋಗಿ.

‘ ಚಿಕ್ಕೋರು, ದೊಡ್ಡೋರು ಹೇಳಿದ ಹಾಗೆ ಕೇಳಬೇಕು. ಎದುರು ವಾದಿಸಬಾರದು, ಹೋಗು ’

—ಎಂದಳು ಕಮಲಮ್ಮ ರತ್ನಳ ಮಾತಿನಿಂದ ಸಿಟ್ಟಾದಂತೆ. ಆ ಮಾತು ಕೇಳಿ ರತ್ನ ಅಪ್ರತಿಭಳಾಗಿ ನಿಂತುಬಿಟ್ಟಳು. ಇವರ ಮಾತು ಕೇಳಿ ತಾನೂ ಹಿತ್ತಲಿಗೆ ಬಂದ ಸೀತಮ್ಮ, ಕಮಲಮ್ಮ ಮಾಡುತ್ತಿದ್ದ ಕೆಲಸವನ್ನು ನೋಡಿ, ಧಾವಿಸಿ ಬಂದು—

‘ ಚೆನ್ನಾಯಿತು ಕಮಲಮ್ಮ, ಈ ಕೆಲಸ ನೀವೇ ಮಾಡೋದು ? ರತ್ನ ನೀನು ಸ್ನಾನ ಮಾಡುಹೋಗು. ಬಿಡಿ ಕಮಲಮ್ಮ ನಾನು ಬಟ್ಟೆ ಆರ ಹಾಕ್ತೀನಿ ’

—ಎಂದಳು.

‘ ತಾಯಿಮಕ್ಕಳು ಇಬ್ಬರೂ ಸೇರಿಕೊಂಡು ನನ್ನ ಹೊರಗಿನೋಳನ್ನ

ಮಾಡಬೇಡಿ. ನಾನೂ ಮನೆಯವಳೇ. ಅದಕ್ಕೇ ತಾನೇ ಇಲ್ಲಿಗೆ ಬಂದಿರೋದು. ಅವಳಂತೂ ಹುಡುಗಿ—ತಿಳಿಯೊಲ್ಲ ಅಂದರೆ ನಿನಗಾದರೂ ತಿಳೀಬಾರದೇ ? ಬಿಡು'

—ಎಂದು ಕಮಲಮ್ಮ ಸೀತಮ್ಮನನ್ನು ಗದರಿಕೊಂಡಳು.

ಆ ಮಾತು ಕೇಳಿ ಸೀತಮ್ಮನ ಕಣ್ಣಲ್ಲಿ ನೀರು ಹರಿಯಿತು.

'ಅಕ್ಕಾ........'

—ಎಂದು ಏನೋ ಹೇಳ ಹೊರಟಳು. ಆದರೆ ಬಿಗಿದ ಗಂಟಲು ಮುಂದಿನ ಮಾತು ಹೊರಡಲು ಬಿಡಲಿಲ್ಲ.

'ನೀನಿನ್ನೇನೂ ಪ್ರವರ ಓದಬೇಡ. ನಿನ್ನ ಗಂಡನಿಗೆ ಊಟಕ್ಕೆ ಹಾಕಿ, ಜೋಯಿಸರಿದ್ದರೆ ಕರೆಸಿ ಜಾತಕ ನೋಡಿಸಬೇಕಂತೆ ಅಂತ ಹೇಳು. ರತ್ನಾ—ಇನ್ನುಮೇಲೆ ನೀನು ನಾನು ಹೇಳಿದಹಾಗೆ ಕೇಳಬೇಕು, ನಿಮ್ಮಮ್ಮ ಹೇಳಿದ ಹಾಗಲ್ಲ. ತಿಳೀತೇ ? ಹೋಗಿ ಬೇಗ ಸ್ನಾನಮಾಡಿ, ಹೆರಳು ಹಾಕಿಕೊಂಡು, ಊಟಮಾಡಿ ಬಾ. ಆಗ ಹೇಗೆ ಕಾಣಸ್ತೀಯೋ ನೋಡಬೇಕು'

—ಎಂದಳು ಕಮಲಮ್ಮ ತಾನೇ ಆ ಮನೆಗೆ ಸರ್ವಾಧಿಕಾರಿ ಎಂಬಂತೆ.

ರತ್ನಳಿಗೆ ಕಮಲಮ್ಮನ ಮಾತು ಪೂರಾ ಅರ್ಥವಾಗಲಿಲ್ಲವಾದರೂ, ಆ ಮಾತು ಕೇಳಿ ಏಕೋ ನಾಚಿಕೆ ಉಕ್ಕಿಬಂದು, ವೇಗವಾಗಿ ಒಳಗೆ ಸರಿದಳು.

ಆದರೆ ರತ್ನಳಿಗೆ ಅರ್ಥವಾಗದ ಮಾತು ಸೀತಮ್ಮನಿಗೆ ಅರ್ಥವಾಯಿತು. ಏನೂ ಮಾತನಾಡದೆ, ತನಗೆತಾನೇ—

'ದೇವರೇ—ಜಾತಕಾನುಕೂಲ ಕೊಟ್ಟು, ಈ ಸಂಬಂಧ ಕೂಡಿಸು'

—ಎಂದು ಬೇಡಿದಳು.

ಕಮಲಮ್ಮನ ಮನಸ್ಸೂ ಅದೇ ಮಾತನ್ನೇ ಬೇಡುತ್ತಿದ್ದುದು ಸೀತಮ್ಮನಿಗೆ ತಿಳಿಯಲಿಲ್ಲ.

ಇಬ್ಬರ ಮಾತನ್ನೂ ಕೇಳಿದ ದೇವರು ಜಾತಕ ರೂಪದಲ್ಲಿ 'ನಿಮ್ಮ ಬಯಕೆ ನನಗೂ ಸಮ್ಮತ' ಎಂದ.

ಹೆಣ್ಣು ನೋಡಬಂದ ಕಮಲಮ್ಮ ಲಗ್ನದ ದಿನ ನಿಶ್ಚಯಿಸಿಕೊಂಡೇ ಸೋಮನಹಳ್ಳಿಗೆ ಹಿಂದಿರುಗಿದಳು.

# ೬

ಕಮಲಮ್ಮ ಹೆಣ್ಣನ್ನು ನೋಡಿ ಒಪ್ಪಿಕೊಂಡು, ಲಗ್ನದ ದಿನವನ್ನು ನಿಶ್ಚಯ ಮಾಡಿಕೊಂಡು ಬಂದುದನ್ನು ಕೇಳಿ ಶ್ರೀನಿವಾಸರಾಯರಿಗೆ ಸಂತೋಷವಾಯಿತು.

‘ ಸದ್ಯ ಆ ಹುಡುಗಿಯ ಕನ್ಯಾಸೆರೆ ಬಿಡುಗಡೆಯಾಯಿತು. ಬ್ರಾಹ್ಮಣ ಹಾಯಾಗಿ ಉಸಿರಾಡಿಸಬಹುದು ’

—ಎಂದರು ತಮ್ಮ ತಲೆಯ ಮೇಲಿದ್ದ ದೊಡ್ಡ ಭಾರ ಇಳಿದಂತೆ.

‘ಅವರ ಮಾತಿಗೆ ‘ ಆಗಲಿ ’ ಎನ್ನುವಷ್ಟು ಬಾಯಿಕೊಟ್ಟನಲ್ಲ ದೇವರು, ಅದೇ ನಮ್ಮ ಪುಣ್ಯ. ಏನೋ ಇಷ್ಟು ಮಾಡಿಸಿದ ದೇವರು ಇಷ್ಟೇ ಸಲೀಸಾಗಿ ಮದುವೇನೂ ಒಂದು ನಡಸಿ ಕೊಟ್ಟುಬಿಟ್ಟರೆ ಧನ್ಯಳಾದೆ ’

—ಎಂದಳು ಕಮಲಮ್ಮ.

‘ ಆಗುತ್ತೆ ಬಿಡು. ಇಷ್ಟುದೂರ ದಾರಿ ತೋರಿಸಿದ ದೇವರು ಮುಂದೂ ದಾರಿ ತೋರಿಸುತ್ತಾನೆ.’

—ಎಂದರು ಶ್ರೀನಿವಾಸರಾಯರು ಮದುವೆ ಮಾಡುವುದೇನೂ ದೊಡ್ಡ ಕೆಲಸವಲ್ಲ ಎನ್ನುವಹಾಗೆ.

ಆದರೆ, ಅವರಿಗೆ ದೊಡ್ಡದಾಗಿ ಕಾಣದ ಮದುವೆಯ ಕೆಲಸ ಸೀತಾ ರಾಮಯ್ಯನ ಪಾಲಿಗೆ ಹತ್ತಲಾಗದ ಹಿಮಾಲಯದಂತೇ ಕಾಣಿಸಿತು.

‘ ಅಲ್ಲ ಕಮಲತ್ತೆ, ಹೂ ಅಂದದ್ದೇ ಸಾಕು ಅಂತ ಲಗ್ನದ ದಿನಾನೂ ನಿಶ್ಚಯ ಮಾಡಿಕೊಂಡು ಬಂದುಬಿಟ್ಟೆಯಲ್ಲ........’

—ಎಂದ ಚಿಂತೆಯಲ್ಲಿ ತೂಗುತ್ತಾ.

' ಮತ್ತೆ–ಹುಡುಗಿ ಒಪ್ಪಿಗೆಯಾಗಿ, ಜಾತಕಾನುಕೂಲವೂ ಆದಮೇಲೆ ಇನ್ನೂ ಅಡ್ಡಗೋಡೆ ಮೇಲೆ ದೀಪ ಇಟ್ಟು ಬರಬೇಕಾಗಿತ್ತೆ? ಚಿಂತೆ ಮಾಡಿ ಮಾಡಿ ಅವರ ಮುಖ ಬೆಂದ ಬದನೇಕಾಯಿ ಆಗಿಹೋಗಿದೆ. ಸದ್ಯ ಎಷ್ಟು ಬೇಗ ಆ ಮುಖದ ಮೇಲೆ ಸ್ವಲ್ಪ ಬೆಳಕು ಕಾಣಿಸೀತೋ ಅನಿಸಿತ್ತು ನನಗೆ ಅವರನ್ನು ನೋಡಿದಾಗ. ಹಾಗಿರೋವಾಗ ಮತ್ತೇಕೆ ಮೀನ ಮೇಷ?'

' ಅದೆಲ್ಲಾ ನಿಜ ಅತ್ತೆ. ನಾನೇನೂ ಮದುವೆ ಮಾಡಿಕೊಳ್ಳೋಲ್ಲ ಅಂತ ಹೇಳೊಲ್ಲ. ಆದರೆ ನಮ್ಮ ಅನುಕೂಲ ಅನಾನುಕೂಲ ನೋಡ ಬೇಡವೇ? ಧಡೀರಂತ ಮದುವೆ ಗೊತ್ತುಮಾಡಿ ಬಿಟ್ಟರೆ, ಇಲ್ಲಿ ನಾವೇನೂ ಸವರಿಸಿಕೊಳ್ಳಬೇಡವೇ? ಬರೀಕೈಲಿ ಮದುವೆಗೆ ಹೋಗೋಕೆ ಆಗುತ್ತೆಯೆ?'

' ಮದುವೆಗೆ ಸವರಿಸಿಕೊಳ್ಳೋ ಚಿಂತೆ ನಮಗೆ ಹೆಂಗಸರಿಗೆತಾನೇ? ನಿನಗೇನು ಗುನುಗು?'

' ಹಾಗಾದರೆ ನನಗೇನೂ ಇಲ್ಲಾನ್ತೀಯ?'

' ಅಷ್ಟೇ, ಏನಿದೆ?'

ನೋಡು ನನ್ನ ಬೇಜವಾಬ್ದಾರಿ, ಹುಡುಗು, ಹಾಗೆ, ಹೀಗೆ ಅಂತ ಬಯ್ತೀಯ. ಈಗ ನೀನಾಡ್ತಿರೋ ಮಾತು ನೋಡು ........'

' ನಾನೇನು ಆಡಬಾರದ ಮಾತು ಆಡಿದ್ದು?'

' ಅಲ್ಲ ಅತ್ತೆ, ಬಡವರ ಹುಡುಗಿ, ನಾನೇನೂ ಕೇಳದೆ ಮಾಡದೆ ಮದುವೆಗೆ ಒಪ್ಪಬೇಕು ಅಂದೆ. ಆಗಲಿ. ನೀನು ಹೇಳಿದ್ದು ನನಗೂ ಒಪ್ಪಿಗೆಯೇ. ಆದರೆ ಹಾಗಂತ ನಾವೂ ಬರೀ ಕೈಲಿ ಹೋದರೆ ಏನು ಚಂದ. ಬಡವರ ಹುಡುಗೀಂತ ತಾತ್ಸಾರ ಮಾಡಿದರೂಂತ ಅನ್ನೋದಿಲ್ಲವೆ?'

' ಅನ್ನೋರು ಯಾರು? ಸೀತಮ್ಮ, ಲಕ್ಷ್ಮಣರಾಯರು ಅಂಥ ಜನ ಅಲ್ಲ ಕಣೋ ಸೀತಾರಾಮು.'

' ಅವರು ಅಂಥಜನ ಅಲ್ದೇ ಇರಬಹುದು. ಆದರೆ ನೋಡಿದೋರು ಸುಮ್ಮನಿರ್ತಾರೆಯೇ? ನಿನ್ನ ಗಂಡನ ಮನೆಯೋರು ಏನಿಟ್ಟರು ಅಂತ ಯಾರಾದರೂ ಕೇಳಿದರೆ ಆ ಹುಡುಗಿ ನೊಂದುಕೊಳ್ಳೋದಿಲ್ಲವೇ? ಹಾಗೆ ಮಾಡಿದರೆ ಏನಾದಹಾಗಾಯಿತು. ಅದಕ್ಕೇ........'

‘ ಅದಕ್ಕೇ........ಏನು ?’

‘ ಏನಾದರೂ ಒಂದು ಚಾರೋ ಚೂರೋ ಒಡವೇನಾದರೂ ಮಾಡಿಸಿಕೊಂಡು ಹೋಗಬೇಕಾಗಿತ್ತು. ನೀನು ಅವಸರಮಾಡಿ ಯಾವುದಕ್ಕೂ ಅವಕಾಶವಿಲ್ಲದ ಹಾಗೆ ಮಾಡಿದೆ.’

—ಎಂದ ಸೀತಾರಾಮು. ಅವನ ಮಾತುಕೇಳಿ ಕಮಲಮ್ಮನಿಗೆ ಸೀತಾರಾಮುವಿನ ಅಂತರಂಗದ ಕೋಮಲತೆಯನ್ನರಿತು ಅಭಿಮಾನ ಮೂಡಿತು. ಆದರೂ ಅದನ್ನು ತೋರಗೊಡದೆ—

‘ ಇನ್ನೂ ನೀನು ಹುಡುಗೀನ ನೋಡಲಿಲ್ಲ ತಲೇ ಮೇಲೆ ಅಕ್ಕೀ ಕಾಳು ಬೀಳಲಿಲ್ಲ. ಈಗಲೇ ಇಷ್ಟು ಅಭಿಮಾನ. ಈಗಲೇ ಈಪಾಟಿ ಇನ್ನು ಮದುವೆ ಆದರೆ, ನಮ್ಮನ್ನೆಲ್ಲಾ ಮರತೇಬಿಡ್ತೀಯಾಂತ ಕಾಣುತ್ತೆ.’

—ಎಂದಳು ಹುಸಿ ಅಸಮಧಾನದ ಧ್ವನಿಯಲ್ಲಿ ಕಮಲಮ್ಮ.

‘ ನೋಡು ಮತ್ತೆ. ಇದೇ ಹೆಂಗಸಿನ ಬುದ್ಧಿ ಅನ್ನೋದು. ನಾನು ಏನೋ ಹೇಳಿದರೆ ನೀನು ಅರ್ಥಮಾಡಿಕೊಳ್ಳೋದೇ ಬೇರೆ, ನಿನ್ನ ಸೊಸೆ ಬಿಚ್ಚಾಲೆ ಗೌರಿ ಹಾಗೆ ಮನೆಗೆ ಬರಬೇಕೂಂತ ನಿನಗೆ ಆಸೆ ಇದ್ದರೆ ಹಾಗೇ ಆಗಲೇಳು. ನಾನ್ಯಾಕೆ ಕೆಟ್ಟೋನಾಗಲಿ.’

—ಎಂದ ಸೀತಾರಾಮಯ್ಯ ಆಕೆಗೆ ಸಮಾಧಾನ ಹೇಳುವಂತೆ.

‘ ನೀನು ಕೆಟ್ಟೋನೂ ಆಗಬೇಡ, ನನಗೆ ಅಸಮಧಾನಾನೂ ಇಲ್ಲ. ಈಗ ನೀನು ಮಾತಾಡಿದ ಮನಸ್ಸು ಇದೆ ನೋಡು ಸೀತಾರಾಮು, ಅದೇ ಕಡೇವರೆಗೂ ಇದ್ದರೆ, ಹೆಂಗಸಿಗೆ ಅದಕ್ಕಿಂತ ದೊಡ್ಡ ಒಡವೆ ಇನ್ನೇನು ಬೇಕು.’

‘ ಬರೀ ಮಾತಾಡಲಿಕ್ಕೆ ಏನು ಮುಟ್ಟಿಸಬೇಕು ಬಿಡು. ಮಾತು ಬಂಗಾರವಲ್ಲ.’

‘ ಅದೇ ನೀನು ತಪ್ಪು ತಿಳಿದುಕೊಂಡಿರೋದು. ಹೊತ್ತಿನಲ್ಲಿ ಹಿತವಾದ ಮಾತು ಆಡಿದರೆ ಅದೇ ಕೋಟಿ ವರಹ. ಒಳ್ಳೇ ಮಾತಾಡೋ ಮನಸ್ಸು ಹೊಂದಿದ್ದರೆ, ಸಮಯದಲ್ಲಿ ಅದೇ ಬೇಕಾದ ಕೆಲಸಾನೂ ಮಾಡಿಸುತ್ತೆ. ’

‘ಏನಾಗುತ್ತೋ ಏನು ಬಿಡುತ್ತೋ. ಹೇಗಾಗಬೇಕೋ ಹಾಗಾಗಲಿಬಿಡು.’

‘ ಹೇಗೂ ಆಗೊಲ್ಲ. ಎಲ್ಲಾ ಚೆನ್ನಾಗೇ ಆಗುತ್ತೆ.’

‘ ಹೇಗಾಗುತ್ತೆ ?’

‘ ಹೇಗೆ ಅಂದರೆ—ಮನೇಲಿ ನಿನ್ನ ತಾಯೀದು ಓಲೆ, ಮೂಗುಬಟ್ಟು ಇರಬೇಕು. ಅದನ್ನೇ ನಿನ್ನ ಹೆಂಡತಿಗೆ ಇಟ್ಟರಾಯಿತು; ಅದೇ ಶುಭ. ಇನ್ನು ಮಾಡಿಸಬೇಕಾದ್ದು ತಾಳಿ ।ಒಂದು ತಾನೇ. ಹೇಳಿದರೆ ಒಂದು ದಿನದಲ್ಲಿ ಮಾಡಿಕೊಡ್ತಾನೆ ಚಿನ್ನಾಚಾರಿ. ಅದನ್ನು ಮಾಡಿಸಿಕೊಡೋ ಭಾರ ನನಗಿರಲಿ. ಇನ್ನೇನು ?’

—ಎಂದು ಆ ಮಾತು ಮುಗಿಸಿ ಕೇಳಿದಳು ಕಮಲಮ್ಮ.

‘ ಅಷ್ಟೇ........’

—ಎಂದು ತನ್ನ ಮಾತನ್ನು ಅರ್ಧಕ್ಕೇ ನಿಲ್ಲಿಸಿ ಹೇಳಿದ ಸೀತಾರಾಮಯ್ಯ.

‘ ಅಷ್ಟೇ ಅಂದರೆ – ಇನ್ನೇನು ?’

‘ ಏನೂ ಇಲ್ಲ. ಎಲ್ಲಾ ಆಯಿತು. ಆದರೆ ........’

‘ ಅರ್ಧಕ್ಕೇ ಮಾತು ನಿಲ್ಲಿಸಿದೆಯಲ್ಲ. ಇನ್ನೇನಾಗಬೇಕು ಹೇಳು....’

‘ ನೀನು ಹುಡುಗೀನ ನೋಡಿಕೊಂಡು ಬಂದದ್ದು ಆಯಿತು. ಲಗ್ನವೂ ನಿಶ್ಚಯವಾಯಿತು....ಆದರೆ........’

—ಯಾವುದೋ ಮಾತನ್ನು ಕೇಳಲಾಗದೆ ತಡೆ ತಡೆದು ಕೇಳಿದ ಸೀತಾರಾಮಯ್ಯ.

‘ಆದರೆ....ಆದರೆ....ಆದರೆ. ನಿನ್ನ ಮನಸ್ಸಿನಲ್ಲಿರೋ ಮಾತು ಏನೂಂತ ಹೇಳಬಾರದೇ ? ಸರಿಯಾಗಿ ಕೇಳದೆ ಹೋದರೆ ನಾನು ಯಾವುದಕ್ಕೇಂತ ಉತ್ತರ ಕೊಡಲಿ ?

—ತೋರಿಕೆಯ ಅಸಹನೆಯ ಧ್ವನಿಯಲ್ಲಿ ಕೇಳಿದಳು ಕಮಲಮ್ಮ.

‘ ಏನೂ ಇಲ್ಲ. ಹುಡುಗಿ....ಹೆಸರು....’

ಆ ಮಾತಾಡುತ್ತಾ ಆಡುತ್ತಾ ಕೆಂಪಾದ ಮುಖವನ್ನು ಕಮಲಮ್ಮನಿಗೆ ತೋರಿಸದೆ ಎತ್ತಲೋ ತಿರುಗಿಸಿ ಕೇಳಿದ ಸೀತಾರಾಮಯ್ಯ. ಅವನ ಮಾತು, ಮಾತಿನ ರೀತಿಯಿಂದಲೇ ಅದರ ಅಂತರಾರ್ಥ ಅರಿವಾಗಿ ಕಮ

ಲಮ್ಮನಿಗೆ ನಗು ಬಂದಿತು. ಆದರೂ ತಮಗೆ ಅರ್ಥವಾದುದನ್ನು ತೋರಗೊಡದೆ—

‘ ಬರೀ ಹೆಸರು ತಾನೇ ನಿನಗೆ ಬೇಕಾದದ್ದು ?’

—ಎಂದು ಕೆಣಕಿ ಕೇಳಿದಳು.

‘ ಹೂ.’

‘ ಹೆಸರು ಹುಣಸೇಕಾಯಿ.’

—ಎಂದಳು ಕಮಲಮ್ಮ ಗಟ್ಟಿಯಾಗಿ ನಗುತ್ತಾ.

‘ ಹುಡುಗಿಯದು ಹುಣಸೇಕಾಯಿ, ನಿನ್ನದು ಬೇವಿನಕಾಯಿ, ನನ್ನದು ಹಾಗಲಕಾಯಿ. ಚೆನ್ನಾಗಿದೇಳು. ನಾಳೆ ಮನೆಗೆ ಬಂದರೆ ಹಾಗೇ ಕರೀತೀನಿ. ಇದೇ ತಾನೇ ನೀನು ಹೇಳೋದು.’

—ಎಂದ ಸೀತಾರಾಮಯ್ಯ ಅಸಮಾಧಾನದ ಧ್ವನಿಯಲ್ಲಿ.

‘ ಮತ್ತೆ ಮನಸ್ಸಿನಲ್ಲಿ ಏನೋ ಇಟ್ಟುಕೊಂಡು ಹೊರಗೊಂದು ಮಾತು ಕೇಳಿದರೆ ಏನು ಹೇಳಲಿ ?’

‘ ಮನಸ್ಸಿನಲ್ಲಿ ಏನು ಇಟ್ಟುಕೊಂಡು ಕೇಳಿದೆ ?’

‘ ಏನು ಅನ್ನೋದು ನನಗೂ ಗೊತ್ತು, ನಿನಗೂ ಗೊತ್ತು.’

‘ ಏನು ಗೊತ್ತು ನಿನಗೆ ?’

‘ ನಮ್ಮ ದೇವರ ಸತ್ಯ ನನಗೆ ಗೊತ್ತಿಲ್ಲವೇ ? ಹೆಸರು ಬೇಕಂತೆ ಇವನಿಗೆ. ಹೆಸರು ಕೇಳಿ ಏನು ಹುಣುಸೇಹಣ್ಣು ಹಾಕಿ ನೆಕ್ಕುತೀಯ ? ನಿನಗೆ ಬೇಕಾಗಿರೋದು ಹುಡುಗಿ ಹೇಗಿದಾಳೇಂತ ತಿಳುಕೊಳ್ಳೋದು. ನೇರವಾಗಿ ಕೇಳಿದರೆ ಏನಾಗುತ್ತೆ ?’

‘ ನನ್ನ ಮನಸ್ಸಿನಲ್ಲಿದ್ದುದು ಅದೇ ಅಂದುಕೋ. ಅದಕ್ಕೇ ಉತ್ತರ ಹೇಳು.’

—ಎಂದ ಸೀತಾರಾಮಯ್ಯ ತನ್ನ ಮನಸ್ಸಿನಲ್ಲಿದ್ದ ಮಾತು ಅದಲ್ಲ ಎನ್ನುವಂತೆ.

‘ ಅದೇ ಅಂತ ಅಂದುಕೋಬೇಕಂತೆ. ಯಾರ ಮುಂದೆ ಆಡ್ತಿಯೋ ಈ ಆಟಾನೆಲ್ಲ. ನಿಮ್ಮಪ್ಪನ್ನೂ ಬಲ್ಲೆ ನಾನು.’

‘ ನಮ್ಮಪ್ಪನ್ನೂ ಬಲ್ಲೆ, ನಮ್ಮಜ್ಜನ್ನೂ ಬಲ್ಲೆ ನೀನು. ಅದು ನನಗೂ ಗೊತ್ತು. ಈಗ ನಾನು ಕೇಳಿದ ಪ್ರಶ್ನೆಗೆ ಉತ್ತರ ಹೇಳೋ ಮನಸ್ಸಿದೆಯೋ ಇಲ್ಲವೋ ಹೇಳು. ಸುಮ್ಮನೆ ಅಡ್ಡಮಾತಾಡಿ ಸತಾಯಿಸಬೇಡ.’

‘ ಹಾಗೆ ದಾರಿಗೆ ಬಾ. ಹುಡುಗಿ ಹೇಗಿದಾಳೆ ಗೊತ್ತೆ ಸೀತಾರಾಮು. ’

‘ ಹೇಗಿದಾಳೆ ? ’

‘ ಒಳ್ಳೇ ಚಂದನದ ಗೊಂಬೆ! ನಿನಗೆ ತಕ್ಕಹಾಗಿದಾಳೆ. ನೀನು ಜಾಲಿ ಕೊರಡು, ಅವಳು ಕರೀಮರದ ವಿಗ್ರಹ.’

‘ ನಿನ್ನ ಹಣೇಬರಹ ಅಂಥಾದ್ದು.’

‘ ಏಕೆ, ನನ್ನ ಹಣೇಬರಹಕ್ಕೇನು ಬಂತು ?’

‘ ಮತ್ತೆ ಜಾಲಿಕೊರಡಿನಂಥ ಮಗ, ಕರೀಮರದ ಗೊಂಬೆಯಂಥ ಸೊಸೆ ಪಡೆಯೋ ಭಾಗ್ಯ ನಿನ್ನ ಹಣೇಲಿ ಬರೆದಿರೋವಾಗ ನಾನೇನು ಮಾಡಲಿ. ಯಾರಾದರೂ ಕೇಳಿದರೆ, ಕಮಲತ್ತೆ ತನಗೆ ತಕ್ಕಂಥವಳನ್ನೇ ಆರಿಸಿಕೊಂಡು ಬಂದಳು ಅನ್ತೀನಿ. ಹೋಗಲಿ ಬಿಡು. ಆದರೆ ನನ್ನ ಮಾತಿಗೆ ಉತ್ತರಾನೇ ಹೇಳಲಿಲ್ಲವಲ್ಲ. ’

‘ ಮತ್ತೇನು ನಿನ್ನ ಮಾತು ?’

‘ ನಾನು ಕೇಳಿದ್ದು ಹುಡುಗಿ ರೂಪ ಅಲ್ಲ. ಅವಳ ಹೆಸರು.’

‘ ರೂಪಾನೇ ಹೀಗಿರೋವಾಗ ಹೆಸರು ಹೇಗಿದ್ದರೇನು ?’

‘ ರೂಪಾನಂತೂ ದೇವರು ಕೊಡಲಿಲ್ಲ. ಹೆಸರು ಹಿಡಿದು ಕರೀಲಿಕ್ಕೆ ಒಂದು ಒಳ್ಳೇ ಹೆಸರಾದರೂ ಇದೆಯೋ ಇಲ್ಲವೋ ಅಂತ....’

‘ ಹೆಸರಿಗೇನು—ಬಂಗಾರದಂಥ ಹೆಸರು.’

‘ ಏನು ಹೇಳು.’

‘ ರತ್ನದಂಥ ಹೆಸರು.’

‘ ಅಂದರೆ....’

‘ ಅದೇ....’

‘ ಬಂಗಾರ ಅಂತಲೇ....’

‘ ಅಲ್ಲ....’

‘ ಮತ್ತೆ—ರತ್ನ ಅಂತಲೇ....’

'ಹೂ. ಅದೇ.'

'ಅದೇ ಅಂತಾಲೇ....'

—ಎಂದು ಸೀತಾರಾಮಯ್ಯ ನಗುತ್ತಾ ಹೊರಟು ಹೋದ. ಅವನು ಕೇಳಿದ ಹೆಸರು, ಅವನ ಎದೆಯಲ್ಲಿ ಅಪೂರ್ವ ಮಧುರ ಭಾವತರಂಗಗಳನ್ನು ಮಿಡಿಯುತ್ತಿತ್ತು. ಕಣ್ಣು ಕಾಣದ ರೂಪವನ್ನು ಹೆಸರು ಕೇಳಿದ ಕಿವಿ ಚಿತ್ರಿಸುತ್ತಿತ್ತು.

ಹೆಸರು ಕೇಳಿದ ಗಳಿಗೆಯಿಂದಲೂ, ಗಳಿಗೆಗೆ ಹತ್ತುಬಾರಿ, ಎದೆಯ ಮಿಡಿತಕ್ಕೊಂದು ಬಾರಿ, ಮನಸ್ಸು ಆ ಹೆಸರನ್ನು ನುಡಿಯುತ್ತಿದ್ದರೂ, ಹೆಸರಿನ ಏಣಿಯನ್ನು ಹತ್ತಿ ಅದರ ಆಚೆಗಿರುವ ಯಾವುದೋ ಮುಖವನ್ನು ನೋಡಲು ಯತ್ನಿಸುತ್ತಿದ್ದರೂ, ಆ ನಾಮ ಜಪ, ರೂಪ ಧ್ಯಾನಗಳಲ್ಲೇ ಹೊತ್ತು ಕಳೆಯಲು ಅವನಿಗೆ ಅವಕಾಶವಿರಲಿಲ್ಲ. 'ನೀನೇನೂ ಮಾಡಬೇಕಾದದ್ದಿಲ್ಲ' ಎಂದು ಕಮಲಮ್ಮ ಹೇಳಿದ್ದರೂ, ದಿನದಿನಕ್ಕೆ ಹತ್ತಿರಕ್ಕೆ ಬರುತ್ತಿದ್ದ ಮದುವೆಗೆ ಅಷ್ಟಿಷ್ಟಾದರೂ ಸೀತಾರಾಮಯ್ಯ ಸಿದ್ಧತೆ ಮಾಡಿಕೊಳ್ಳಬೇಕಾಗಿತ್ತು—ಅವನೊಂದಿಗೆ ದೊಡ್ಡದೊಂದು ಪರಿವಾರವೇ ಮದುವೆಗೆ ಹೊರಡಲು ಸಿದ್ಧವಾದುದರಿಂದ.

ಸೀತಾರಾಮಯ್ಯನ ಲಗ್ನ ನಿಶ್ಚಯವಾಯಿತು ಎಂಬುದನ್ನು ಕೇಳಿದ ಗಳಿಗೆಯಿಂದ ರೈತರು ಅವನ ಗಂಟು ಬಿದ್ದಿದ್ದರು—

'ಹೇಳ್ದೆ ಕೇಳ್ದೆ ಲಗ್ನ ಗೊತ್ತುಮಾಡಿಕೊಂಡು ಬಿಟ್ಟಿರಿ ಬುದ್ದಿ, ಹಂಗೇನೇ ಊಟಾನೂ ನಮಗೆ ತಪ್ಪಿಸಿಬಿಟ್ಟರೆ ನಾವು ಕೇಳೋಕಿಲ್ಲ. ನೀವು ಕರೀದೇ ಹೋದ್ರೂ ನಾವಂತೂ ಬರೋದು ಬಿಡೋಕಿಲ್ಲ.'

—ಎಂದು ಅವನ ಬೆನ್ನು ಬಿದ್ದಿದ್ದರು.

ಅವರ ಆ ಮಾತು ಬರೀ ತೋರಿಕೆಯ ಮಾತಲ್ಲವೆಂಬುದು ಸೀತಾರಾಮಯ್ಯನಿಗೂ ಗೊತ್ತಿತ್ತು. ಅವರ ಆ ಅಭಿಮಾನದಿಂದ ಅವನಿಗೆ ಸಂತೋಷವಾಗಿದ್ದರೂ, ಅದೇ ಒಂದು ರೀತಿಯಲ್ಲಿ ಚಿಂತೆಯೂ ಆಗಿತ್ತು.

'ಮದುವೆಗೆಂದು ಬಂಡಿಗಟ್ಟಲೆ ಜನ ಇಲ್ಲಿಂದ ಹೊರಟರೆ, ಇವರಿಗೆ ಊಟ ನೀರು ಪೂರೈಸುವುದಾದರೂ ಲಕ್ಷ್ಮಣರಾಯರಿಗೆ ಸಾಧ್ಯವಾದೀತೆ ?'

—ಎಂದು ಚಿಂತಿಸತೊಡಗಿದ ಸೀತಾರಾಮಯ್ಯ.

# ೭

ಆ ಯೋಚನೆಯಿಂದಾಗಿಯೇ ಮದುವೆಗೆ ತನ್ನೊಡನೆ ಕೆರೆಸಂತೆ ಹಳ್ಳಿಗೆ ಹೊರಡಲು ಸಿದ್ಧತೆಮಾಡಿಕೊಳ್ಳುತ್ತಿದ್ದ ಸೋಮನ ಹಳ್ಳಿಯ ರೈತರಿಗೆ—

' ಮದುವೆಗೆ ನೀವು ಯಾರೂ ಬರುವುದು ಬೇಡ '

—ಎಂದು ಹೇಳಿದ ಆ ಮಾತನ್ನು ಹೇಳಲು ಮನಸ್ಸು ಹಿಂಜರಿಯುತ್ತಿದ್ದರೂ.

' ಇದೆಂಥ ಮಾತು ಸೀತಾರಾಮಪ್ಪ. ನಿನ್ನಂಥ ಪುಣ್ಯಾತ್ಮರು ಈ ಭೂಲೋಕದಾಗೆ ಪಂಜುಹಿಡಿದುಕೊಂಡು ಹುಡುಕಿದರೂ ಸಿಕ್ಕೋಕಿಲ್ಲ. ಅಲ್ಲ—ಎಲ್ಲಾರೂ ನಮ್ಮನೆ ಮದುವೆ ಬನ್ನಿ ಅಂತ ಬಲವಂತಮಾಡಿ ಕರೀತಾರೆ. ನಾವೇ ಬರ್ತೀವಿ ಅಂದರೂ ಬ್ಯಾಡ ಅನ್ನೋ ನಿನ್ನಂಥ ಪುಣ್ಯಾತ್ಮನನ್ನ ನಾವೆಲ್ಲೂ ನೋಡಲಿಲ್ಲ. ಅದೆಲ್ಲಾ ಆಗಾಕಿಲ್ಲ. ನೀನೇನು ಹತ್ತು ಹತ್ತು ಸಲ ಮದುವೆ ಆಗ್ತೀಯಾ ? ಈ ಜನ್ಮದಲ್ಲಿ ಒಂದು ಸಲ—ಆಯಿತು. ಮತ್ತೆ ಲಕ್ಷ ರೂಪಾಯಿ ಕೊಟ್ಟರೂ ಮತ್ತೊಂದು ಸಲ ಬೇಕೂಂದರೆ ಮದುವೆ ನೋಡೋಕಾದಾತ ? '

—ಎಂದು ರೈತರೂ ಹಟ ಹಿಡಿದರು.

' ನೀವು ಹೇಳೋದೆಲ್ಲಾ ನಿಜವೆ. ನಾನೂ ಒಪ್ಪಿಕೋತೀನಿ. ಆದರೂ ಬೇಡ.'

' ಏಕೆ ? ಬಂದರೆ ನಮಗೆಲ್ಲಾ ಊಟ ಹಾಕಬೇಕಾಗುತ್ತೆ ಅಂತಲೇ?'

' ಊಹೂ, ಅದಕ್ಕಲ್ಲ. ಮದುವೆ ಮುಗಿಸಿಕೊಂಡು ಬಂದಮೇಲೆ

ಒಂದಲ್ಲ ನಾಲ್ಕುಸಲ ಬೇಕಾದರೂ ಊರಿಗೆಲ್ಲಾ ಊಟ ಹಾಕುತ್ತೇನೆ.'

'ಹಾಗಾದ್ರೆ ಮತ್ತ್ಯಾಕೆ?'

ಅವರ ಹಟದ ಇದಿರು ಸೀತಾರಾಮಯ್ಯ ಸೋತು, ಅವರಿಗೆ ಬರುವುದು ಬೇಡ ಎಂದುದಕ್ಕೆ ನಿಜವಾದ ಕಾರಣವನ್ನು ಹೇಳಲೇ ಬೇಕಾಯಿತು.

'ನಿಮ್ಮನ್ನೆಲ್ಲಾ ಬಿಟ್ಟು ಮದುವೆ ಮಾಡಿಕೊಳ್ಳಲು ನನಗೂ ಮನಸ್ಸಿಲ್ಲ. ಆದರೂ ಈಗ ಬೇಡ ಎನ್ನುವಂಥ ಹೊತ್ತು ಬಂದಿದೆ.'

'ಏನದು?'

'ನೋಡು, ಬ್ರಾಹ್ಮಣರಲ್ಲಿ ನಿಮ್ಮ ಹಾಗಲ್ಲ. ಮದುವೆ ಅಂದರೆ ಖರ್ಚೆಲ್ಲಾ ಹೆಣ್ಣಿನ ಕಡೆಯವರದೆ. ಆದುದರಿಂದ ನೀವೆಲ್ಲಾ ಬಂದರೆ ನಮ್ಮ ಜೊತೆಯಲ್ಲಿ ನಿಮಗೂ ಊಟ, ಉಪಚಾರ ಎಲ್ಲಾ ನೋಡಿಕೊಳ್ಳ ಬೇಕು. ಲಕ್ಷ್ಮಣರಾಯರು ಬಡವರು. ಅವರಿಗೆ ಅಷ್ಟೆಲ್ಲಾ ಭಾರವನ್ನು ಹೊರುವ ಶಕ್ತಿ ಇಲ್ಲ. ತಿಳಿದೂ ತಿಳಿದೂ ನಾನೇ ಅವರನ್ನು ಏಕೆ ಇಕ್ಕಟ್ಟಿಗೆ ಸಿಕ್ಕಿಸಬೇಕು. ಆ ಕಾರಣಕ್ಕಾಗಿ ಬೇಡ ಎಂದೆ.'

—ಎಂದು ಸೀತಾರಾಮಯ್ಯ ತನ್ನ ಮನಸ್ಸಿನ ಭಾವನೆಯನ್ನು ವಿವರಿಸಿದ.

'ಇನ್ನೂ ಮದುವೆ ಆಗಲಿಲ್ಲ, ಹೆಣ್ಣಿನ ಮಕಾನೂ ನೋಡಲಿಲ್ಲ. ಈಗಲೇ ನಮ್ಮನ್ನೆಲ್ಲ ದೂರಮಾಡಿ, ಮಾವನ ಮನೆ ಹಿತಚಿಂತನೆ ಮಾಡೋಕೆ ಆರಂಭ ಮಾಡಿಬಿಟ್ಟೆ. ಆಯ್ತು ಬಿಡು. ಹಾಲು ಸಕ್ಕರೆ ಎಂದಿದ್ರೂ ಒಂದೇ; ಬಟ್ಟಲು ಮಾತ್ರ ಬೇರೆ. ನಿಮ್ಮ ವಿಶ್ವಾಸಕ್ಕೆ ನಾವು ಯಾಕೆ ಬ್ಯಾಡಾ ಅನ್ನಬೇಕು. ನಿನಗೆ ಹೆಂಗೆ ಹಿತಾನೋ ಹಾಗೆ ಮಾಡು. ನಮಗೆ ಹೆಂಗೆ ಪ್ರೀತೀನೊ ನಾವು ಹಾಗೆ ಮಾಡ್ತೀವಿ.'

'ಅಂದರೆ........'

'ನಿನ್ನ ಜೊತೆಗೆ ನಾವು ಬಂದ್ರೆ ತಾನೇ ಅವರಿಗೆಲ್ಲಾ ಕಷ್ಟ. ಹಾಗೆ ಬೇಡ. ನಿನಗೆ ಹೇಗೆ ಬೇಕೊ ಹಾಗೆ ಹೋಗು. ನಮ್ಮಪಾಡಿಗೆ ನಾವೂ ಬರ್ತೀವಿ.'

'ನಿಮ್ಮ ಮಾತೇ ನನಗೆ ಅರ್ಥವಾಗಲಿಲ್ಲ.'

'ಅರ್ಥಮಾಡಿಕೊಳ್ಳೋಕೆ ಇದೇನೂ ಅಂಥ ಭಾರಿ ಸಿಕ್ಕಿನ ಮಾತಲ್ಲ

ಸೀತಾರಾಮಪ್ಪ. ನಿನಗೊಬ್ಬನಿಗೇನಾ ಕೆರೆಸಂತೆಹಳ್ಳೀಲಿ ನೆಂಟರು ಇಷ್ಟರ ಮನೆ ಇರೋದು. ಕೆರೆಸಂತೆ ಹಳ್ಳಿ ನಮಗೇನೂ ಕಾಣದ ಊರಲ್ಲ. ನಮಗೂ ನೆಂಟರು ಇಷ್ಟರು ಇದಾರೆ. ನಮ್ಮ ಪಾಡಿಗೆ ನಾವು ಬಂದು ಎಲ್ಲಾರ ಇದ್ದುಕೊಂಡು ಮದುವೆ ಮಾಡಿಕೊಂಡು ಬರ್ತೀವಿ. ಯಾರು ಯಾರಿಗೂ ಭಾರ ಆಗೋದು ಬ್ಯಾಡ.'

—ಎಂದ ರೈತರ ಮುಖಂಡನಾದ ಪಟೇಲ ಗಿರಿಯಪ್ಪ.

ಆ ಮಾತಿಗೆ ಸೀತಾರಾಮಯ್ಯ ಏನೂ ಇದಿರು ಹೇಳಲಾಗಲಿಲ್ಲ.

'ನಿಮ್ಮ ಇಷ್ಟ ಏನಾದರೂ ಮಾಡಿಕೊಳ್ಳಿ. ಇರೋ ಮಾತು ಹೇಳಿದೆ.'

—ಎಂದ, ಅಸಮಾಧಾನದ ಧ್ವನಿಯಲ್ಲಿ.

'ನಾನು ಹಿಂಗಂದೆ ಅಂತ ಸಿಟ್ಟುಮಾಡಿಕೊಬ್ಯಾಡ ಸೀತಾರಾಮಪ್ಪ. ನೀನು ಹಸೆ ಮೇಲೆ ಕೂತು ಧಾರೆ ಎರಸಿಕೊಳ್ಳೋದು ನೋಡಬೇಕು ಅನ್ನೋ ಆಸೆ ಬಾಳ ಜನಕ್ಕೈತೆ. ನಿನ್ನ ಮಾತು ನನಗೆ ಅರ್ಥ ಆಗ್ತದೆ. ನಿನ್ನ ನೆಂಟರಿಗೆ ಕಷ್ಟಾನೂ ಬ್ಯಾಡ. ಈ ಜನದ ಆಸೆ ನಿರಾಸೆ ಆಗೋದು ಬ್ಯಾಡ. ಎರಡೂ ತೀರೊ ಹಂಗೆ ನಾನು ನೋಡ್ಕೊಂತೀನಿ'

—ಎಂದು ಸಮಾಧಾನ ಹೇಳಿದ ಗಿರಿಯಪ್ಪ.

'ಆಯಿತು. ಹಾಗೇ ಆಗಲಿ.'

—ಎಂದು ಸುಮ್ಮನಾದ ಸೀತಾರಾಮಯ್ಯ.

ಪಟೇಲ ಗಿರಿಯಪ್ಪನಿಗೆ ಸೀತಾರಾಮಯ್ಯ ಎಂದರೆ ಹೊಟ್ಟೆಯಲ್ಲಿ ಹುಟ್ಟಿದ ಮಗನಿದ್ದಹಾಗೆ. ಸೀತಾರಾಮಯ್ಯನ ತಂದೆ ನಾರಾಯಣಪ್ಪನ ಕಾಲದ ಮನುಷ್ಯ ಆತ. ಸೀತಾರಾಮಯ್ಯ ಆತನ ಕಣ್ಣಮುಂದೆ ಬೆಳೆದ ಮಗು. ಆತ ಸೀತಾರಾಮಯ್ಯನಲ್ಲಿ ಎಷ್ಟು ಪ್ರೀತಿ ಇಟ್ಟುಕೊಂಡಿದ್ದನೋ, ಸೀತಾರಾಮಯ್ಯನಿಗೂ ಗಿರಿಯಪ್ಪನಲ್ಲಿ ಅಷ್ಟೇ ಪ್ರೀತಿ ಇತ್ತು. ಅಷ್ಟು ಪ್ರೀತಿ ಇದ್ದರೂ ಮಾವನ ಬಡತನಕ್ಕೆ ಮರುಗಿ, ತನಗೆ ಅತ್ಯಂತ ಆಪ್ತರಾದವರಿಗೂ ಮದುವೆಗೆ ಬರಬೇಡಿ ಎನ್ನುವಾಗ ಸೀತಾರಾಮಯ್ಯನ ಹೃದಯಕ್ಕಾದ ವೇದನೆ ಆತ ಬಾಯಿ ಬಿಟ್ಟು ಹೇಳದಿದ್ದರೂ ಗಿರಿಯಪ್ಪನಿಗೆ ಅರಿವಾಯಿತು. ಎಂತಲೇ ಸೀತಾರಾಮಯ್ಯ ಆ ಮಾತು ಹೇಳಿದಾಗ ಆತನ ಮೇಲೆ ಅಸಮಾಧಾನವಾಗದೆ

ಅದಕ್ಕೆ ಪ್ರತಿಯಾಗಿ ಸೀತಾರಾಮಯ್ಯನ ಹೃದಯದ ಸಹಜ ಕೋಮಲತೆ ಅರಿವಾಗಿ ಆ ಪ್ರೀತಿ ಮತ್ತಷ್ಟು ಹೆಚ್ಚಿತು. ಹಾಗೇ ಲಕ್ಷ್ಮಣರಾಯರ ಬಡತನದ ಆಳವೂ ಅವನ ಹೃದಯವನ್ನು ಸೋಕಿ, ಕರುಳನ್ನು ಕರಗಿಸಿ ಮುಂದೆ ಸೀತಾರಾಮಯ್ಯನ ಮಾವನಾಗಲಿರುವಾತನಿಗೆ, ಆ ಹೊತ್ತಿನಲ್ಲಿ ತಾನು ಹೇಗೆ ನೆರವಾಗಬಹುದು ಎಂಬ ಆಲೋಚನೆಯನ್ನು ಪ್ರೇರೇಪಿಸಿತು.

ಏನು ಮಾಡುವುದು, ಹೇಗೆ ಮಾಡುವುದು ಎಂದು ಯೋಚಿಸಿ, ಕಡೆಗೆ ಕೆರೆಸಂತೆಹಳ್ಳಿಯಲ್ಲಿದ್ದ ತನ್ನ ನೆಂಟ ಪಟೇಲ ಪಾಪಣ್ಣನಿಗೆ ಸಂದರ್ಭವನ್ನು ತಿಳಿಸಿ, 'ಲಕ್ಷ್ಮಣರಾಯರಿಗೆ ಆದಷ್ಟು ಸಹಾಯ ಮಾಡಬೇಕು. ಸೋಮನಹಳ್ಳಿಯ ರೈತರು ಅಲ್ಲಿಗೆ ಬಂದಾಗ, ಅವರ ಊಟಕ್ಕೆ, ಇಳಿದುಕೊಳ್ಳಲಿಕ್ಕೆ ಏರ್ಪಾಟು ಮಾಡಬೇಕು' ಎಂದು ಸುದ್ದಿ ಕಳಿಸಿದ.

ಕೆರೆಸಂತೆಹಳ್ಳಿಗೆ ಪಾಪಣ್ಣ ಪಟೇಲನಷ್ಟೇ ಅಲ್ಲ, ಪಾಳಯಗಾರ. ಆತನಿಗೆ ಹಳ್ಳಿಯ ಸುತ್ತಮುತ್ತ ಬೇಕಾದಷ್ಟು ಆಸ್ತಿ ಇತ್ತು; ಕೈಯಲ್ಲಿ ಹಣವಿತ್ತು. ಅದರೊಂದಿಗೆ ಹತ್ತು ಜನರನ್ನು ತನ್ನ ಮಾತಿನಂತೆ ನಡೆಸಿಕೊಂಡು ಹೋಗುವ ಛಾತಿಯೂ ಇತ್ತು. ಎಂತಲೇ ಕೆರೆಸಂತೆಹಳ್ಳಿಯಲ್ಲಿ ಪಾಪಣ್ಣನ ಮಾತಿಗೆ ಸುಗ್ರೀವಾಜ್ಞೆಯ ಬಲವಿತ್ತು. ಎಂತಲೇ ಪಟೇಲ ಗಿರಿಯಪ್ಪನಿಂದ ಸುದ್ದಿ ಬಂದಕೂಡಲೇ ಪಾಪಣ್ಣ ಆತನ ಮಾತನ್ನು ನಡೆಸಲು ಸಿದ್ಧನಾದ.

ಲಕ್ಷ್ಮಣರಾಯನ ಮನೋವೃತ್ತಿ ಆತ ಅವಲಂಬಿಸಿದ ವೃತ್ತಿಗೆ ಅನುಗುಣವಾಗಿಯೇ ಇತ್ತು. ಹುಟ್ಟು ಸಾತ್ವಿಕ ಸ್ವಭಾವಿ. ಯಾವುದಕ್ಕೂ ಯಾರೊಬ್ಬರ ಗೊಡವೆಗೂ ಹೋಗದೆ, ತನ್ನ ಬಡತನವನ್ನಾಗಲಿ, ಕಷ್ಟವನ್ನಾಗಲಿ ನೆರೆಹೊರೆಯ ಹೆಗಲಮೇಲೆ ಹೇರಲು ಯತ್ನಿಸದೆ ತನ್ನ ಪಾಡಿಗೆ ತಾನು ಇದ್ದುಕೊಂಡು ಹೋಗುತ್ತಿದ್ದ. ಈ ಬಗೆಯ ಸ್ವಭಾವದಿಂದಾಗಿ ಲಕ್ಷ್ಮಣರಾಯನಿಗೆ ಹಳ್ಳಿಯಲ್ಲಿ ಎಲ್ಲರ ಪರಿಚಯವೂ ಇದ್ದರೂ, ಯಾರೊಬ್ಬರ ಸ್ನೇಹವೂ ಇರಲಿಲ್ಲ. ಯಾರ ವ್ಯವಹಾರಕ್ಕೂ ತಾನೇ ಮೇಲೆಬಿದ್ದು ಕೈಹಾಕದೆ, ತಾನಾಯಿತು, ತನ್ನ ಕೆಲಸವಾಯಿತು ಎಂದುಕೊಂಡು ಹೋಗುತ್ತಿದ್ದ ಲಕ್ಷ್ಮಣರಾಯನಿಗೆ, ತಳವಾರ ಬಂದು 'ಪಟೇಲರು ಕರೀತಾರೆ ಬರಬೇಕಂತೆ' ಎಂದದ್ದು ಕೇಳಿ ಆಶ್ಚರ್ಯವಾಯಿತು. ಹಾಗೇ ಪಟೇಲ ಕರೆಸ

ಬೇಕಾದರೆ ಏನೋ ಅವಸರದ ಕೆಲಸ ಇರಬೇಕು ಎಂದುಕೊಂಡು, ಇದ್ದ ಕೆಲಸವನ್ನು ಬಿಟ್ಟು ಪಟೇಲನನ್ನು ಕಾಣಲು ಹೊರಟ.

ತನ್ನ ಮನೆಯ ಮುಂದಿನ ವಿಶಾಲವಾದ ಜಗಲಿಯ ಮೇಲೆ ಕಂಭಕ್ಕೆ ಒರಗಿಕೊಂಡು, ಎಲೆಯಡಿಕೆ ಮೆಲ್ಲುತ್ತಾ ಯಾರೋ ರೈತನೊಂದಿಗೆ ಮಾತನಾಡುತ್ತಾ ಕುಳಿತಿದ್ದ ಪಾಪಣ್ಣ, ಲಕ್ಷ್ಮಣರಾಯ ಬಂದುದನ್ನು ಕಂಡು ಆಳಿಗೆ ಕಂಬಳಿಯನ್ನು ತಂದು ಹಾಸಲು ಹೇಳಿ, ಲಕ್ಷ್ಮಣರಾಯ ಕುಳಿತುಕೊಂಡ ಮೇಲೆ, ಜೊತೆಗಿದ್ದ ರೈತರ ಮಾತು ಮುಗಿಸಿ ಕಳಿಸಿ—

'ಏನು ಮೇಸ್ತ್ರು, ನೀವು ಹಿಂಗಾ ಮಾಡೋದು ?'

—ಎಂದು ಕೇಳಿದ, ಅಸಮಧಾನದ ಧ್ವನಿಯಲ್ಲಿ

ಪಟೇಲನ ಮಾತು ಲಕ್ಷ್ಮಣರಾಯನಿಗೆ ಅರ್ಥವಾಗಲಿಲ್ಲ.

'ಏಕೆ ಏನಾಯಿತು ಪಟೇಲರೇ ?'

—ಎಂದು ಕೇಳಿದ.

'ಅಲ್ಲಾ ಮೇಸ್ಟ್ರೆ, ಹಳ್ಳೀಲಿ ನಾವೂ ಜನ ಬದುಕಿದೀವಿ. ಏನಾರ ಒಂದು ಕೆಲಸ ಮಾಡಬೇಕೂಂದ್ರೆ ನಮ್ಮನ್ನು ಒಂದು ಮಾತು ಕೇಳಬೇಕು ಅನ್ನೋದು ಬ್ಯಾಡ್ವಾ ? ನೀವು ಇವತ್ತಿದ್ದು ನಾಳೆ ಹೋಗೋರು, ನಾವೆಲ್ಲಾ ಸದಾಕಾಲ ಇಲ್ಲಿರೋರು. ಮರ್ಯಾದೆ ಕಳಕೊಂಡು ನಾವಿಲ್ಲಿ ಬಾಳ್ವೆಮಾಡೋ ಕಾದಾತಾ ? ಮೇಸ್ಟ್ರು ಒಳ್ಳೇರು ಅಂತಿದ್ರೆ ಹಿಂಗಾ ಮಾಡೋದು ?'

ಪಟೇಲನಾಡಿದ ಮಾತುಗಳನ್ನು ಕೇಳ ಕೇಳುತ್ತ ಲಕ್ಷ್ಮಣರಾಯನಿಗೆ ದಿಗ್ಭ್ರಾಂತಿಯಾಯಿತು. ಹಾಗೇ ಹೆದರಿಕೆಯೂ ಆಯಿತು. ಇವನ ಮರ್ಯಾದೆಗೆ ಊನ ಬರುವಂಥ ಕೆಲಸ ತನ್ನಿಂದ ಏನಾಗಿರಬಹುದೆಂದು ಚಿಂತಿಸಿದ. ಎಷ್ಟು ಯೋಚಿಸಿದರೂ ಬಗೆಹರಿಯಲಿಲ್ಲ. ಕಡೆಗೆ ಬೇರೇನೂ ಮಾಡಲು ತೋಚದೆ,

'ನಿಮ್ಮ ಮರ್ಯಾದೆಗೆ ಕೊರೆ ಬರುವಂಥ ಕೆಲಸವನ್ನು ಯಾವುದನ್ನೂ ಮಾಡಿದ್ದು ನನಗೆ ಎಷ್ಟು ಯೋಚಿಸಿದರೂ ನೆನಪಾಗುತ್ತಿಲ್ಲ ಪಟೇಲರೇ. ನನ್ನಲ್ಲಿ ಅಂಥ ಆಲೋಚನೆಯೇ ಸುಳಿದಿಲ್ಲ. ಆದರೂ ನಮ್ಮ ಬೆನ್ನು ನಮಗೆ ಕಾಣುವುದಿಲ್ಲ. ಹಾಗೆ ನನ್ನಿಂದ ತಿಳಿಯದೆ ಏನಾದರೂ ಅಪಚಾರವಾಗಿದ್ದರೆ ಏನೆಂದು ತಿಳಿಸಿ, ಕ್ಷಮಿಸಬೇಕು.'

—ಎಂದ.

‘ ಹಂಗೆ ದಾರಿಗೆ ಬನ್ನಿ ಮತ್ತೆ. ನಿಮ್ಮ ಮಗಳ ಮದುವೆ ವಿಷಯ ನಮಗೆ ಹೇಳಬಾರ್ದಾಗಿತ್ತಾ ? ಹೊರಗಿನೋರು ನಮ್ಮ ಹಳ್ಳಿ ಸುದ್ದಿ ನಮಗೆ ಹೇಳಬೇಕಾ ? ’

‘ ನಿಜ. ನಾನೇ ಹೇಳಬೇಕಾಗಿತ್ತು. ಲಗ್ನ ನಿಶ್ಚಯವಾದದ್ದೇ ಮೊನ್ನೆ ಮೊನ್ನೆ. ಇವತ್ತು ನಾಳೆ ನಾನೇ ಬಂದು ಹೇಳಬೇಕು ಎಂದಿದ್ದೆ. ನಿಮಗೆ ಹೇಳದೆ, ನಿಮ್ಮ ಸಹಾಯ ಸಹಕಾರ ಇಲ್ಲದೆ ನಡೆಯುವ ಕೆಲಸವಲ್ಲ ಇದು. ಆದರೂ ಹೇಳೋದು ತಡವಾಯಿತು. ಕ್ಷಮಿಸಿ.’

‘ ಕ್ಷಮಿಸಿ ಅಂದ ಮಾತ್ರಕ್ಕೇ ಮುಗಿದು ಹೋಗಲಿಲ್ಲ. ಕ್ಷಮಿಸ ಬೇಕು ಅಂದ್ರೆ ನಾವು ಹೇಳಿದ ಹಾಗೆ ನೀವು ಕೇಳಬೇಕು.’

‘ ಏನು ಹೇಳಿ ? ’

‘ಸೋಮನಹಳ್ಳಿ ಶಾನುಭೋಗರಿಗಂತೆ ನೀವು ಹೆಣ್ಣು ಕೊಡೋದು. ಅಲ್ಲಿ ಪಟೇಲರು, ಪರಿವಾರದೋರು ಎಲ್ಲಾ ಲಗ್ನಕ್ಕೆ ಬರ್ತಾರೆ. ಬಂದೋರ ಮುಂದೆ ನಮ್ಮ ಹಳ್ಳಿ ಮರ್ಯಾದೆ ಕಡಮೆಯಾಗದಹಾಗೆ ಲಗ್ನ ಮಾಡಿ ಕೊಡಬೇಕು. ಇಲ್ಲಾಂದ್ರೆ ನಾವು ಸುಮ್ನಿರೋಕಿಲ್ಲ.’

‘ ಆಗಬಹುದು. ದೇವರು ನನಗೆ ಶಕ್ತಿ ಕೊಟ್ಟಷ್ಟು ಮಟ್ಟಿಗೆ ನಿಮ್ಮ ಮಾತು ನಡೆಸುತ್ತೇನೆ. ಆದರೂ....ಆದರೂ....ನಾನು ಬಡವ. ಸ್ವಲ್ಪ ಹೆಚ್ಚು ಕಡಮೆಯಾದರೆ ನನ್ನನ್ನು ಮನ್ನಿಸಬೇಕು.’

—ಎಂದ ಲಕ್ಷ್ಮಣರಾಯ ಪಟೇಲ ಹೇಳಿದುದನ್ನು ಕೇಳಿ ಗಾಬರಿ ಯಾಗಿ.

‘ ಹೆಚ್ಚು ಕಡಮೆ ಅಂದರೆ ನಾವು ಕೇಳೋದಿಲ್ಲ. ಹೆಂಗಾಗಬೇಕೋ ಹಂಗೇ ಆಗಬೇಕು. ನಾಳೆ ಅಲ್ಲಿನ ಜನ ಕೆರೆಸಂತೆಹಳ್ಳಿ ಮದುವೆಗೆ ಹೋಗಿದ್ವಿ, ಅಲ್ಲಿ ಹಿಂಗಾಯ್ತು ಹಂಗಾಯ್ತು ಅಂತ ನಗಾಡಿದ್ರೆ, ನೆರೆಹಳ್ಳಿ ಯೋರ ಮುಂದೆ ನಾವು ತಲೆ ತಗ್ಗಿಸಬೇಕಾಗ್ತದೆ. ದೊಡ್ಡ ನಂಟಸ್ತಿಕೆ ಮಾಡಿದೀರಿ. ಅದಕ್ಕೆ ತಕ್ಕಹಾಗೆ ತೂಗಿಸಿಕೊಂಡು ಹೋಗಬೇಕು. ಅದು ನಿಮ್ಮ ಕೈಯಲ್ಲಿ ಆಗ್ದೆ ಹೋದ್ರೆ ಆ ಕೆಲಸ ಬಿಟ್ಬುಬಿಡಿ.’

‘ ಅಂದರೆ....’

—ಪಟೀಲನ ಮಾತಿನ ಅರ್ಥ ತಿಳಿಯದೆ ಕೇಳಿದ ಲಕ್ಷ್ಮಣರಾಯ.

‘ ಅಂದರೆ....ರತ್ನಮ್ಮನ್ನ ಹಡೆದೋರು ನೀವು. ಆದ್ರೆ ಈ ಹಳ್ಳೀಲಿರೋ ವರೆಗೂ ಆಕೆ ಈ ಹಳ್ಳೀ ಮಗಳು. ಆಕೆ ಮದುವೆ ಹೆಂಗಾಗಬೇಕು, ಬಿಡ ಬೇಕು ಅನ್ನೋದು ನಮ್ಮ ಜವಾಬ್ದಾರಿ. ಹಂಗಲ್ದೆ ನನ್ನ ಮಗಳ ಮದುವೆ, ನನಗೆ ಬೇಕಾದ ಹಾಗೆ ಮಾಡ್ತೀನಿ ಅಂದ್ರೆ ಮದುವೇನೇ ನಡಿಯೋಕಿಲ್ಲ.’

‘ ಆಯ್ತು. ಏನು ಮಾಡಬೇಕೋ ಹೇಗೆ ಮಾಡಬೇಕೋ ಹೇಳಿ. ಹಾಗೇ ಮಾಡ್ತೀನಿ.’

—ಎಂದ ಲಕ್ಷ್ಮಣರಾಯ ಬೇರೆ ಹಾದಿ ಕಾಣದೆ.

‘ಅಷ್ಟಕ್ಕೆ ನೀವು ಒಪ್ಪಿಕೊಂಡರೆ ಸರಿ. ಬಾಕೀದೆಲ್ಲಾ ನಮಗಿರಲಿ. ಈಗ ನೀವು ಮಾಡಬೇಕಾದ್ದು ಇಷ್ಟು.’

‘ ಏನು ? ’

‘ಏನೂ ಮಾಡದೆ ಸುಮ್ಮನಿರೋದು. ನಾವು ಏನು ಮಾಡಿದ್ರೂ ಅಡ್ಡಿ ಬರಬಾರದು.’

‘ ಆಯಿತು ನಿಮ್ಮ ಚಿತ್ತ.’

‘ ಮದುವೆಗೆ ಚಪ್ಪರಾನೂ ನೀವು ಹಾಕಿಸಕೂಡದು; ಹೋಗಿ.’

‘ ಚಪ್ಪರಾನೂ ಹಾಕಿಸಬಾರದು ಎಂದರೆ ಹೇಗೆ ಪಟೀಲರೆ? ಮದುವೆ ದಿನ ಹತ್ತಿರ ಬಂತು....’

‘ ಅದೇ ಮತ್ತೆ ನಾನು ಬೇಡ ಅಂದಿದ್ದು. ನಾವು ಹೇಳಿದಂಗೆ ಕೇಳಿ ಕೊಂಡು ಸುಮ್ಮಿರಿ ಅನ್ನಿಲ್ವಾ ?’

—ಪಟೀಲ ಪಾಪಣ್ಣ ಅಬ್ಬರಿಸಿ ಕೇಳಿದ.

ಆ ಅಬ್ಬರದ ಇದಿರು ಲಕ್ಷ್ಮಣರಾಯ ನಿರುತ್ತರನಾಗಿ, ಏನು ಹೇಳು ವುದಕ್ಕೂ ತೋಚದೆ ಮನೆಗೆ ಹಿಂದಿರುಗಿದ. ಪಟೀಲನ ಮಾತು, ರೀತಿ, ಆಪ್ಪಣೆ ಯಾವುದೂ ಅರ್ಥವಾಗದೆ, ‘ ಭಗವಂತಾ ಈ ಮದುವೆ ಹೇಗೆ ನಡೆಸ್ತೀಯೋ ನಡೆಸು.’ ಎಂದು ದೇವರ ಮೇಲೆ ಭಾರ ಹಾಕಿದ.

ಆದರೆ ದೇವರಲ್ಲ ಪಟೀಲ ಪಾಪಣ್ಣ ಆ ಭಾರ ಹೊತ್ತಿದ್ದ. ಅದಕ್ಕೆ ಸಾಕ್ಷಿಯಾಗಿ, ಮರುದಿನ ಲಕ್ಷ್ಮಣರಾಯ ಏಳುವ ವೇಳೆಗೆ ಅವನ ಮನೆಯ ಮುಂದೆ ಹತ್ತುಗಾಡಿ ಚಪ್ಪರದ ಸಾಮಾನು ಬಂದು ಬಿದ್ದಿತ್ತು, ಹತ್ತಿಪ್ಪತ್ತು

ಜನ ಆಳುಗಳು ಚಪ್ಪರದ ಕಂಭಗಳನ್ನು ಹೂಳಲು ಗುಣಿಗಳನ್ನು ತೆಗೆಯುತ್ತಿದ್ದರು.

ಲಕ್ಷ್ಮಣರಾಯನ ಮನೆಯಿಂದ, ವರನನ್ನು ಇದಿರುಗೊಳ್ಳುವ, ಊರ ಮುಂದಲ ಹನುಮಂತರಾಯನ ಗುಡಿಯವರೆಗೂ ದೊಡ್ಡ ಚಪ್ಪರ ನಿರ್ಮಾಣವಾಯಿತು, ಎರಡುದಿನ ಕಳೆಯುವುದರೊಳಗೆ.

ಪಟೇಲ ಪಾಪಣ್ಣ ಇದು ಯಾರೋ ಬಡಮೇಸ್ಟರ ಮನೆಯ ಮದುವೆಯಲ್ಲ, ಊರಿನ ಮಗಳ ಮದುವೆ ಎಂಬಷ್ಟು ಸಂಭ್ರಮದಿಂದ ಸಿದ್ಧತೆಗಳನ್ನು ಮಾಡಿಸಿದ್ದ. ಪಾಪಣ್ಣನೇ ಮದುವೆಗೆ ಮುಂದಾಳಾಗಿ ನಿಂತುದರಿಂದ ಹಳ್ಳಿಯ ಉಳಿದ ರೈತರೂ ಹಿಂದೆ ಬೀಳಲಿಲ್ಲ. ಎಲ್ಲರೂ ತಮ್ಮ ಕೈಲಾದ ನೆರವು ನೀಡಿ, ಬೆಂಬಲವಾದರು.

ಊರಿನಲ್ಲಿ ವರನ ಕಡೆಯ ದಿಬ್ಬಣಕ್ಕೆ ಇಳಿದುಕೊಳ್ಳುವುದಕ್ಕೆ, ಊಟೋಪಚಾರಕ್ಕೆ ಅಚ್ಚುಕಟ್ಟಾದ ವ್ಯವಸ್ಥೆಯಾದುದೇ ಅಲ್ಲದೆ, ಕೆರೆಸಂತೆಹಳ್ಳಿಯಿಂದ ಸೋಮನಹಳ್ಳಿಯವರೆಗಿನ ಹನ್ನೆರಡು ಮೈಲಿ ಮಾರ್ಗದಲ್ಲಿ, ದಾರಿಯಲ್ಲಿ, ವರನ ಕಡೆಯ ದಿಬ್ಬಣದವರ ವಿಶ್ರಾಂತಿಗೆಂದು ಅಲ್ಲಲ್ಲಿ ಚಪ್ಪರಗಳನ್ನು ಹಾಕಿಸಿ, ಪಾನಕ, ನೀರುಮಜ್ಜಿಗೆಯ ಶೈತ್ಯೋಪಚಾರಕ್ಕೆ ಏರ್ಪಾಟಾಯಿತು. ನಾಲ್ಕಾರು ಜೊತೆ ಓಲಗಗಳು ವರನ ದಿಬ್ಬಣವನ್ನು ಎದುರುಗೊಂಡು ಕರೆತಂದುವು. ಲಕ್ಷ್ಮಣರಾಯ ಹೇಗೋಹಾಗೆ ಮೂರು ದಿನದಲ್ಲಿ ಮುಗಿಸಬೇಕೆಂದಿದ್ದ ಮದುವೆ, ಏಳು ದಿನಗಳ ಕಾಲನಡೆದು, ಸುತ್ತಲ ಹತ್ತು ಹಳ್ಳಿಯ ಜನ ಬಂದು, ಉಂಡು ತಣಿದು ವಧೂವರರನ್ನು ಹರಸಿ ಹೋದರು.

ತನ್ನ ಮಾವನ ಕಡೆಯವರು ಬಡವರು, ಮದುವೆ ಹೇಗೆ ಮಾಡುತ್ತಾರೋ ಏನೋ ಎಂದು ಹೆದರಿದ್ದ ಸೀತಾರಾಮಯ್ಯ ಈ ವಿಜೃಂಭಣೆಯನ್ನೆಲ್ಲಾ ಕಂಡು ತನ್ನ ಕಣ್ಣನ್ನೇ ನಂಬಲಾಗದವನಂತಾಗಿದ್ದ. ಎಲ್ಲಕ್ಕಿಂತ ಹೆಚ್ಚಾಗಿ, ಕಮಲಮ್ಮ ಹುಡುಗಿಯನ್ನು ನೋಡಿಕೊಂಡು ಬಂದಾಗಲಿಂದ ಅವನ ಮನಸ್ಸಿನಲ್ಲಿ ಕೊರೆಯುತ್ತಿದ್ದ ಸಣ್ಣ ಕೊರಗು ನಿವಾರಣೆಯಾಗಿ, ಅವನ ಹೃದಯದಲ್ಲಿ ಹರ್ಷ ನಿರಾತಂಕವಾಗಿ ತುಳುಕಾಡುತ್ತಿತ್ತು.

ಲಗ್ನ ನಿಶ್ಚಯವಾದ ಗಳಿಗೆಯಿಂದ, ಹುಡುಗಿ ಹೇಗಿದಾಳೊ ಎಂಬ ಮಾನವ ಸಹಜವಾದ ಬಯಕೆ, ಕಾತರ ಅವನ ಎದೆಯಲ್ಲಿ ಕೊರೆಯುತ್ತಿತ್ತು.

ಆ ಕಾತರವನ್ನು ತೀರಿಸಬಹುದಾಗಿದ್ದ ಕಮಲಮ್ಮ, ಅದನ್ನು ತೀರಿಸದೆ,ಸೀತಾ ರಾಮಯ್ಯನೇ ಬಾಯಿಬಿಟ್ಟು ಕೇಳಿದಾಗಲೂ 'ಚಂದನದ ಗೊಂಬೆ' ಹಾಗಿದ್ದಾಳೆ ಎಂದು ನಗೆ ಮಾತಿನಲ್ಲಿ ಅವನ ಪ್ರಶ್ನೆಯನ್ನು ಹಾರಿಸಿದ್ದಳು. ಸೀತಾ ರಾಮಯ್ಯ ಆ ವರ್ಣನೆಯನ್ನು ನಂಬಿರಲಿಲ್ಲ. ಆದರೂ ಅದು ಪೂರಾ ಸುಳ್ಳೆಂಬ ಭರವಸೆಯೂ ಅವನಿಗಿರಲಿಲ್ಲ. ಒಮ್ಮೊಮ್ಮೆ ಕಮಲಮ್ಮನ ಮಾತು ಬರೀ ನಗೆಚಾಟಿಕೆಯ ಮಾತೇ ಆಗದೆ ವಾಸ್ತವವೇ ಆದರೆ ಏನು ಎಂಬ ಭಯ ಅವನನ್ನು ಪೀಡಿಸುತ್ತಿತ್ತು. ಆ ಭಯಕ್ಕೆ ಸಿಲುಕಿಯೂ ಎಷ್ಟೋ ಸಲ 'ಹೇಗಾದರಾಗಲಿ, ನಾನೇ ಒಮ್ಮೆ ಹೋಗಿ ಕಣ್ಣಾರೆ ನೋಡಿಕೊಂಡು ಬಂದಿದ್ದರೆ ಚನ್ನಾಗಿತ್ತು. ಎಲ್ಲವನ್ನೂ ಅತ್ತೆಗೇ ಬಿಟ್ಟು ಬೇಸ್ತು ಬಿದ್ದಹಾಗಾಯಿತೇನೊ' ಎನಿಸಿತ್ತು.

ಆದರೆ ಹಸೆಯ ಮೇಲೆ ಕುಳಿತ ರತ್ನಳನ್ನು ನೋಡಿದ ಮೇಲೆ ಅವನ ಮನಸ್ಸನ್ನು ಕವಿದ ಸಂಶಯದ ಮೋಡ, ಸೊಳೆಗೆ ಸಿಕ್ಕ ಹುಲ್ಲಿನ ಹಾಗೆ ಕೊಚ್ಚಿ ಹೋಯಿತು.

ರತ್ನ ಕಮಲಮ್ಮ ಹೇಳಿದ ಹಾಗೆ 'ಚಂದನದ ಗೊಂಬೆ' ಯಾಗಿರಲಿಲ್ಲ. ಅದಕ್ಕೆ ಪ್ರತಿಯಾಗಿ ಕೈತೊಳೆದುಕೊಂಡು ಮುಟ್ಟುವಂತಹ ಗಾಜಿನ ಗೊಂಬೆಯಾಗಿದ್ದಳು. ಮೋಡದ ಮರೆಯಲ್ಲಿ ಅಡಗಿ ಅಲ್ಪಸ್ವಲ್ಪ ಕಾಣಿಸುವ ಚಂದ್ರನಂತೆ ಮುಂಡಿಗಾಲಿನ ಮರೆಯಲ್ಲಿ ಅಷ್ಟಿಷ್ಟು ಕಾಣಿಸುತ್ತಿದ್ದ ರತ್ನಳ ಸೌಂದರ್ಯಕ್ಕೆ ಅವನ ಹೃದಯ ಮಾರು ಹೋಯಿತು. ಹೆಸರಿಗೆ ತಕ್ಕ ಹುಡುಗಿ ಇವಳು ಎಂದುಕೊಂಡು, ತನ್ನ ಭಾಗ್ಯವನ್ನೇ ಮೆಚ್ಚಿಕೊಳ್ಳುತ್ತಿದ್ದ ಸೀತಾ ರಾಮಯ್ಯನನ್ನು ಕಂಡು ಕಮಲಮ್ಮ ನಗುತ್ತಾ,—

"ಹುಡುಗೀನ ನೋಡಿದೆಯೇನೊ ಸೀತಾರಾಮು ? ನಾನು ಹೇಳಿದ್ದು ಸುಳ್ಳೇ ? ಥೇಟ್ ಚಂದನದ ಗೊಂಬೆ ಅಲ್ವೇನೊ ?"

— ಎಂದು ಕೇಳಿದಳು.

" ಹೂ. ಹಾಗೇ. ಸಾವಿರಸುಳ್ಳು ಹೇಳಿ ಒಂದು ಮದುವೆ ಮಾಡಿಸು ಅನ್ನೋ ಗಾದೆ ಮಾತು ನಿಜ ಮಾಡಿಬಿಟ್ಟೆ ನೀನು ಕಮಲತ್ತೆ ? '

—ಎಂದ ಸೀತಾರಾಮಯ್ಯ ನಗುತ್ತಾ.

'ಈಗ ನನ್ನ ಹೊಗಳೇ ಎಲ್ಲಾ ಸೂ ತೀರಿಸಿಬಿಡಬೇಡ. ನಾಳೆ ಆ ಹುಡುಗಿ

ಸದಾಕಾಲವೂ ನಗುತ್ತಾ ಸಂಸಾರ ಮಾಡೋಹಾಗಿಟ್ಟುಕೊಂಡರೆ ಇಂಥಾ ಹುಡುಗೀನ ಕೈಹಿಡಿದದ್ದಕ್ಕೆ ಸಾರ್ಥಕವಾಗುತ್ತೆ. ಚಿಕ್ಕ ವಯಸ್ಸಿನಲ್ಲಿ ಹುಡುಗಿ ತುಂಬಾ ಕಷ್ಟಪಟ್ಟಿದೆ ಕಣೋ ಸೀತಾರಾಮು, ಚೆನ್ನಾಗಿ ಬಾಳಿಸಬೇಕು.'

'ನಿನ್ನ ಸೊಸೆ. ಮೆಚ್ಚಿಕೊಂಡು ತಂದು ಕೊಂಡಿದೀಯ. ಹೇಗೆ ಬೇಕೊ ಹಾಗೆ ಬಾಳಿಸು. ನಿನ್ನ ಕೈಗೆ ಬಾಯಿಗೆ ನಾನು ಎಂದಾದರು ಅಡ್ಡ ಬಂದಿದೇ ನೆಯೇ ? ನೀನುಂಟು ಅವಳುಂಟು.'

—ಎಂದ ಸೀತಾರಾಮಯ್ಯ ಎಲ್ಲ ಜವಾಬ್ದಾರಿಯನ್ನೂ ಕಮಲಮ್ಮನ ಮೇಲೆ ಹಾಕಿ.

'ಯಾರ ಕೈಯೊ ಯಾರ ಬಾಯೊ ಹೇಗಾದರೂ ಆಗಲಿ–ಸಂಸಾರ ಮಾತ್ರ ಕ್ಷೀರಸಾಗರದ ಹಾಗಿರಲಿ'

—ಎಂದು ಕಮಲಮ್ಮ ಹೃತ್ಪೂರ್ವಕವಾಗಿ ಹರಸಿದರು.

ಸೀತಮ್ಮನೂ ರತ್ನನಿಗೆ ಅದೇ ಮಾತು ಹೇಳಿದಳು:

'ನಿನ್ನ ಅದೃಷ್ಟ ತುಂಬಾ ಒಳ್ಳೇದು ಕಣೇ ರತ್ನ. ಹೋದ ಜನ್ಮದಲ್ಲಿ ಗೌರೀ ಪೂಜೆ ಚೆನ್ನಾಗಿ ಮಾಡಿದ್ದಿ ಅಂತ ಕಾಣುತ್ತೆ. ಒಳ್ಳೆ ದಿವ್ಯಾ ನಂಥ ಗಂಡ ಸಿಕ್ಕ. ಆತನ ಮನಸ್ಸಿಗೆ ಕೊಂಚವೂ ನೋವಾಗದಹಾಗೆ ನಡುಕೊ ಬೇಕು. ಕಮಲಮ್ಮನೂ ಅಷ್ಟೆ–ಆಕೆ ನಿನ್ನ ಪಾಲಿಗೆ ಅತ್ತೆ ಅಲ್ಲ,ತಾಯಿ. ಹಾಗೇ ನಡಕೊಬೇಕು ನಮ್ಮಮ್ಮ.'

—ಎಂದಳು ಕಾಲಿಗೆರಗಿದ ಮ ಗ ಳಿ ಗೆ ಆಶೀರ್ವಾದ ಮಾಡಿ.

ಲಕ್ಷ್ಮಣರಾಯನಿಗಂತೂ ಮಾತಾಡಲು ಬಾಯೇ ಇರಲಿಲ್ಲ. ಕನಸಿನ ಲೋಕದಲ್ಲಿದ್ದ ಹಾಗಿದ್ದ. ಶಶಿರೇಖಾಪರಿಣಯದಲ್ಲಿ ಘಟೋತ್ಕಜ ನಿರ್ಮಾಣ ಮಾಡಿದ ಮಾಯಾಬಜಾರಿನ ಕಥೆಯನ್ನಾತ ಕೇಳಿದ್ದ. ಈಗ ಅದೇ ಕಣ್ಣೊ ಮುಂದೆ ನಡೆದ ಹಾಗಿತ್ತು. ತಾನೆಲ್ಲಿ, ತನ್ನ ಅಂತಸ್ತು ಏನು, ಗಂಡೇ ಸಿಗದೆ ಕಡೆಗೆ ಕುಂಟನಿಗೊ ಕುರುಡನಿಗೊ ಮಗಳನ್ನು ಮದುವೆ ಮಾಡಿಕೊಡ ಬೇಕೇನೊ ಎಂದಿದ್ದ ಭೀತಿ ತೊಲಗಿ, ರತ್ನಳಿಗೆ ಚೊಕ್ಕ ಚಿನ್ನದ ಕುಂದಣ ದಂಥ ಗಂಡು ದೊರೆತದ್ದಷ್ಟೇ ಅಲ್ಲ, ಹತ್ತು ಹಳ್ಳಿಯವರೂ ಹೊಗಳುವ ಹಾಗೆ ಮದುವೆ ನಡೆದ ವೈಭವವೇನು – ಊಹೂ–ಹೀಗಾಗಬಹುದೆಂದು ಲಕ್ಷ್ಮಣ ರಾಯ ಕನಸುಮನಸಿನಲ್ಲಿಯೂ ಊಹಿಸಿರಲಿಲ್ಲ. ಚಪ್ಪರದ ಕಂಭಕ್ಕೆ ಒರಗಿ

ಕುಳಿತು ಚಿಂತಿಸಿದ–ಇದು ಯಾರ ಅದೃಷ್ಟ? ಇವಕ್ಕೆಲ್ಲಾ ಯಾರನ್ನು ವಂದಿಸ ಬೇಕು? ಒಂದೂ ಬಗೆಹರಿಯಲಿಲ್ಲ. ಪವಾಡ ಕಂಡ ಮಗುವಿನಂತೆ ಮುಗ್ಧನಾಗಿ, ಮೂಕನಾಗಿ ಕುಳಿತುಬಿಟ್ಟಿದ್ದ ಲಕ್ಷ್ಮಣರಾಯ. ಮಗಳು ನಮಸ್ಕರಿಸಿದಾಗ, ಗಂಟಲುಕಟ್ಟಿ ಗದ್ಗದವಾದ ಧ್ವನಿಯಲ್ಲಿ–

'ರತ್ನಾ........ರತ್ನಾ........ಅದೃಷ್ಟವಂತೆ ಕಣಮ್ಮ ನೀನು ........ ನಮ್ಮ ಮನೆ ಲಕ್ಷ್ಮಿ........ಹೋದ ಮನೆಗೂ ಇದೇ ವೈಭವ, ಕೀರ್ತಿ ತಾ.'

—ಎಂದು ಹೇಳಿ, ಅಶ್ರು ಆಶೀರ್ವಾದವನ್ನು ಮಾಡಿದ್ದ.

ರತ್ನಳ ಹೃದಯದಲ್ಲೂ ಅದೇ ಮಾತು ಮಿಡಿಯುತ್ತಿತ್ತು–

'ನನ್ನಬಾಳು ಅವರ ಸೇವೆಗೆ ಮೀಸಲು, ಅವರ ಅದೃಷ್ಟದಿಂದ ಬಡವರ ಹುಡುಗಿ ಭಾಗ್ಯಲಕ್ಷ್ಮಿ ಅಂತ ಅನ್ನಿಸಿಕೊಳ್ಳೋ ಹಾಗಾಯಿತು. ದೇವರೇ ಅವರಿಗೆ ತಕ್ಕ ಹೆಂಡತಿಯಾಗೋ ವರ ನನಗೆ ಕರುಣಿಸು'

—ಎಂದು ಬೇಡಿದಳು.

# ೮

ಹೀಗೆ—

ಎರಡೂ ಹಳ್ಳಿಯ ಹಿರಿಯರ ಹರಕೆ, ಶುಭಾಶಯಗಳ ತಳಹದಿಯ ಮೇಲೆ ಸೋಮನಹಳ್ಳಿಯಲ್ಲಿ ಸೀತಾರಾಮಯ್ಯನ ಸಂಸಾರ ಆರಂಭವಾಯಿತು.

ಸೀತಾರಾಮಯ್ಯ ಸಂಸಾರ ಹೂಡುವ ಮೊದಲು ಕಮಲಮ್ಮ ಶುದ್ಧ ಬೇಜವಾಬದಾರಿ ಸ್ವಭಾವದ ಸೀತಾರಾಮಯ್ಯ ಹೇಗೆ ಸಂಸಾರ ನಡೆಸು ವನೋ, ಇವನನ್ನು ಕಟ್ಟಿಕೊಂಡ ರತ್ನಮ್ಮ ಏನು ಪಡಿಪಾಟಲು ಪಡಬೇಕಾ ಗುವುದೋ ಎಂದು ಹೆದರಿದ್ದಳು.

ಆದರೆ ಅಂದು ಕಮಲಮ್ಮನ ಭೀತಿ ಯಾವುದೂ ನಿಜವಾಗಲಿಲ್ಲ.

ಹಾಗೆಂದು ಸೀತಾರಾಮಯ್ಯ ಮದುವೆಯಾದ ಮೇಲೆ ತನ್ನ ಸ್ವಭಾ ವವನ್ನು ಬದಲಾಯಿಸಲಿಲ್ಲ.

ಮದುವೆಯಾಗುವ ಮೊದಲು ಹೇಗಿದ್ದನೋ ಹಾಗೇ ಇದ್ದ.

ಆಗಲೂ ಮನೆಬಿಟ್ಟರೆ ಮನೆಯನ್ನು ಮರತೇ ಬಿಡುತ್ತಿದ್ದ. ಶಾನು ಭೋಕಿ ಕೆಲಸದಲ್ಲೋ, ಇಸ್ಪೇಟು ಗುಂಪಿನಲ್ಲೋ, ಬಯಲು ನಾಟಕದ ಗುಂಪಿ ನಲ್ಲೋ ಎಲ್ಲಾದರೂ ಕುಳಿತರೆ, ಊಟ ತಿಂಡಿಗೆ ಮನೆಗೆ ಹೋಗಬೇಕು, ಮನೆಯಲ್ಲಿ ಹೆಂಡತಿ ಕಾದಿರುತ್ತಾಳೆ ಎನ್ನುವುದೂ ಮರೆತುಹೋಗುತ್ತಿತ್ತು.

ರತ್ನಮ್ಮನಲ್ಲದೆ ಬೇರೆ ಹೆಂಗಸರಾಗಿದ್ದರೆ, ಸೀತಾರಾಮಯ್ಯನ ಸ್ವಭಾವ ದಿಂದಾಗಿ ಆ ಸಂಸಾರದಲ್ಲಿ ಬಹು ಬೇಗ ವಿರಸ ಮೂಡುತ್ತಿತ್ತು.

ಆದರೆ ರತ್ನಮ್ಮ ಬಹುಬೇಗ ಗಂಡನ ಸ್ವಭಾವವನ್ನು ಅರ್ಥಮಾಡಿ ಕೊಂಡಳು.

ಸೀತಾರಾಮಯ್ಯನ ಮೈಮರೆವುತನಕ್ಕೆ ಸಂಸಾರದ ಬಗ್ಗೆ, ಹೆಂಡತಿಯ ವಿಷಯದಲ್ಲಿ ಅನಾದರಣೆ ಕಾರಣವಲ್ಲ; ಕುಳಿತಲ್ಲಿ ಮೈ ಮರೆಯುವುದು ಅವನ ಹುಟ್ಟುಗುಣ ಎಂಬುದನ್ನು ಅರ್ಥಮಾಡಿಕೊಂಡು, ಒಮ್ಮೊಮ್ಮೆ ದುಃಖ ಸುಳಿದಾಗ, ಅವನ್ನು ಸೀತಾರಾಮಯ್ಯ ಮನೆಗೆ ಬಂದಾಗ, ಮನೆಯಲ್ಲಿ ಇದ್ದಾಗ ತನ್ನಲ್ಲಿ ತೋರುತ್ತಿದ್ದ ಪ್ರೀತಿಯನ್ನು ನೆನೆದು ನಕ್ಕು ಮರೆತುಬಿಡುತ್ತಿದ್ದಳು.

ಸೀತಾರಾಮಯ್ಯ ಹಳ್ಳಿಯವರೆಲ್ಲರ ವಿಶ್ವಾಸಕ್ಕೆ ಪಾತ್ರನಾಗಿದ್ದುದು ಇದಕ್ಕೆ ಅನುಕೂಲವಾಯಿತು. ಅವನ ಸಂಸಾರಕ್ಕೆ ಬೇಕಾದುದನ್ನು ಅವನ ರೈತರು ತಂದು ಒದಗಿಸುತ್ತಿದ್ದುದರಿಂದ ರತ್ನಮ್ಮ ಯಾವ ತೊಂದರೆಯನ್ನೂ ಅನುಭವಿಸಬೇಕಾಗಿರಲಿಲ್ಲ.

ರೈತರು ಬೇಕಾದುದನ್ನು ತಂದುಹಾಕುತ್ತಿದ್ದರು, ಅವರು ತಂದು ಹಾಕಿದುದನ್ನು ಮಾಡಲು ಮನೆಯಲ್ಲಿ ರತ್ನಮ್ಮ ಇದ್ದಳು—ಇದರಿಂದ ಸೀತಾರಾಮಯ್ಯನ ಔದಾರ್ಯಕ್ಕೆ ಮತ್ತಷ್ಟು ಪ್ರೋತ್ಸಾಹ ದೊರೆಯಿತು.

ಮನೆಗೆ ಬರುವಾಗ ಯಾರು ಜೊತೆಯಲ್ಲಿ ಬಂದರೆ ಅವರನ್ನು ಹೊತ್ತುಗೊತ್ತು ನೋಡದೆ ಊಟಕ್ಕೆ ಎಬ್ಬಿಸುತ್ತಿದ್ದ, ತಿಂಡಿ ತಿನ್ನಲು ಜೊತೆಗೆ ಕರೆಯುತ್ತಿದ್ದ.

ಹೊತ್ತಲ್ಲದ ಹೊತ್ತಿನಲ್ಲಿ ಮನೆಗೆ ಅಥಿತಿಗಳನ್ನು ಕರೆತಂದರೂ ರತ್ನಮ್ಮ ಗಂಡನನ್ನು ಆಕ್ಷೇಪಿಸುತ್ತಿರಲಿಲ್ಲ. ಯಾವ ಹೊತ್ತಿನಲ್ಲಿ ಏನು ಕೇಳಿದರೂ ಅದನ್ನು ಮಾಡಿ ಹಾಕುತ್ತಿದ್ದಳು.

ಇದನ್ನು ಕಂಡ ಕಮಲಮ್ಮನೇ ಎಷ್ಟೋ ಬಾರಿ ಬೇಸರಗೊಂಡು—

‘ ಇದೇನು ಮನೇನೊ ಛತ್ರವೋ, ಎಷ್ಟು ಹೊತ್ತಿಗಂದರೆ ಅಷ್ಟುಹೊತ್ತಿನಲ್ಲಿ ಊಟಕ್ಕೆ ಕರೆದುಕೊಂಡು ಬರಲಿಕ್ಕೆ. ನಿನಗೆ ಸ್ವಲ್ಪವೂ ಬುದ್ಧಿ ಇಲ್ಲ. ಅವನಿಗಂತೂ ಸಂಸಾರ ಮಾಡಿ ಅಭ್ಯಾಸವಿಲ್ಲ. ಹೆಂಗಸು ನೀನಾದರೂ ಬುದ್ಧಿ ಹೇಳಬೇಕೋ ಬೇಡವೋ ? ನೀನೂ ಅವನು ಹಾಕಿದ ತಾಳಕ್ಕೇ ಕುಣಿದರೆ ನಾಳೆ ಮನೆ ಉಳಿಯಬೇಕೊ ಬೇಡವೋ ? ಇಬ್ಬರೂ ಬುದ್ಧಿ ಹುಡುಗು.’

—ಎಂದು ಗದರಿಕೊಳ್ಳುತ್ತಿದ್ದಳು.

‘ತಂದು ಹಾಕೋದಕ್ಕೆ ಅವರು ಗಟ್ಟಿಯಾಗಿರುವಾಗ, ಹೆಂಗಸಾಗಿ ಹುಟ್ಟಿ

ಕೆಲಸಮಾಡುವುದಕ್ಕೆ ನಾನು ಹಿಂಜರಿಯಬೇಕೇ ಅತ್ತೆ ? ಮನೇಲಿ ನಾನು ಇದೀನಿ ಅನ್ನೋ ಧೈರ್ಯದ ಮೇಲೆ ತಾನೇ ಅವರು ಯಾರನ್ನಾದರೂ ಕರೆದು ಕೊಂಡು ಬರೋದು. ಹಾಗಿರುವಾಗ ನಾನೇ ಮುನಿಸಿಕೊಂಡರೆ, ಅವರ ಕೈ ಹಿಡಿದದ್ದಕ್ಕೆ ಏನು ಸಾರ್ಥಕವಾಯಿತು ? ಮಹರಾಯರು–ಒಂದು ದಿನ ವಾದರೂ ನನ್ನ ಕೈ ಬಾಯಿ ಅವರು ತ ಡೆ ದಿ ಲ್ಲ . ಏನು ಬಂತು ಏನು ಹೋಯಿತು ಅಂತ ಒಂದು ದಿನವಾದರೂ ಕೇಳಲಿಲ್ಲ. ಹಾಗಿರೋವಾಗ ನಾನು ಅವರಿಗೆ ಅಡ್ಡಿ ಬಂದರೆ ದೇವರು ಮೆಚ್ಚುತ್ತಾನೆಯೇ ಕಮಲತ್ತೆ ? ಅವರ ಮನೆ ಇದು. ಅವರಿಗೆ ಹೇಗೆ ಬೇಕೋ ಹಾಗಿರಲಿ. '

—ಎನ್ನುತ್ತಿದ್ದಳು ರತ್ನಮ್ಮ ನಗುತ್ತಾ.

' ಚೆನ್ನಾಯಿತು ಬಿಡು. ಕಂತೆಗೆ ತಕ್ಕ ಬೊಂತೆ ಸಿಕ್ಕಿದೆ. ಹೀಗಾದರೆ ನಿಮ್ಮದು ಸಂಸಾರ ಆದಹಾಗೇ ಆಯಿತು. ಇಬ್ಬರಲ್ಲಿ ಒಬ್ಬರಿಗಾದರೂ ವ್ಯವಹಾರ ಜ್ಞಾನ ಇರಬೇಕು. ಇಬ್ಬರದೂ ಒಂದೇ ಹಾಡಾದರೆ, ಸಂಸಾರ ಮೂರಾಬಟ್ಟೆಯಾಗಿ ಹೋಗುತ್ತೆ. ಇವತ್ತೇನೋ ನೀವು ಇಬ್ಬರೇ ಇಬ್ಬರು. ಹೇಗೆ ಆಡಿದರೂ ಚೆನ್ನಾಗಿರುತ್ತೆ. ಆದರೆ ನಾಳಿನ ಯೋಚನೆ ಮಾಡಬೇಡವೇ?'

' ನಾಳೆ–ಏನಾಗುತ್ತೆ ಅತ್ತೆ ? '

' ಏನಾಗುತ್ತೆ ? ಮಕ್ಕಳು ಮರಿ ಆದರೆ ಹೀಗೇ ನಡೆಯುತ್ತೆಯೇ ? ಇವತ್ತೇನೊ ದೇವರದಯದಿಂದ ಎಲ್ಲಾ ಚೆನ್ನಾಗಿದೆ. ನಾಳೆ ಒಂದು ವೇಳೆ ಕೈ ಕುಂಟಿತು–ಆಗ ?'

' ಹಾಗೇನಾದರೂ ಆದರೆ ನೀವಿದಿರಲ್ಲಾ ಅತ್ತೆ–ನಾವು ಉಪವಾಸ ಸಾಯೋಕೆ ಬಿಡ್ತಿರಾ ? '

' ಹೂ. ಹೂ. ನಾನಿದೇನೆ. ತಾಯಿ ಸತ್ತದಿನದಿಂದ ನಿನ್ನ ಗಂಡನ್ನ ನಾಕಿದ್ದಾಯಿತು. ನಾಳೆ ಅವನ ಸಂಸಾರಾನೂ ಸಾಕು ಅನ್ತೀಯೆನೊ ಅಲ್ವೆ? ' ಚೆನ್ನಾಯ್ತು. ಅವನ ಸಂಸಾರದ ಹೊಣೆ ಹೊತ್ತೀನಿ ಅಂತ ನಾನೇನಾದರೂ ಅವನಪ್ಪನಿಗೆ ಪತ್ರ ಬರೆದು ಕೊಟ್ಟಿದೀನಿ ಅಂತ ತಿಳಿದುಕೊಂಡಿದೀಯಾ ? ಇದ್ದರೆ ನೀವೇ ಸುಖಪಡ್ತೀರಿ. ಇಲ್ದೆ ಹೋದರೆ ನೀವೇ ಕಷ್ಟ ಅನುಭವಿ ಸ್ತೀರಿ. ಇದ್ದಾಗ ತಿಂದು ಹೋಗೊಕೆ ಬರೋರು ಸಾವಿರ ಜನ. ಇಂದು ತಿಂದುಹೋದೋರೆಲ್ಲಾ ನಾಳೆ ನಿನ್ನ ಅನುವು ಆಪತ್ತಿಗೆ ಆಗೋದಿಲ್ಲ. ಸಂಸಾರ

ದಲ್ಲಿ ಮೈಯೆಲ್ಲಾ ಕಣ್ಣಾಗಿದ್ದರೂ ಸಾಲದು. ಆದರೆ ನಿಮಗೊ–ದೇವರು ಕೊಟ್ಟ ಕಣ್ಣೂ ಇಂಗಿ ಹೋಗಿದೆ.'

—ಎಂದು ಎಚ್ಚರಿಸುತ್ತಿದ್ದಳು ಕಮಲಮ್ಮ.

' ಹೌದು ಅತ್ತೆ, ನೀವು ಹೇಳೊ ಮಾತು ನಿಜ. ಆದರೆ ಈ ಮಾತು ನಾನು ಹೇಗೆ ಹೇಳಲಿ ಅವರಿಗೆ. ಇಬ್ಬರಿಗೂ ನೀವು ದೊಡ್ಡೋರು. ನೀವೇ ಹೇಳಿ.'

' ನಾನೇ ! ನಾನು ಹೇಳಿ ಹೇಳಿ ನನ್ನ ನಾಲಗೆ ತೂತು ಬಿದ್ದು ಹೋಯಿತು.'

'ಮತ್ತೆ ನಿಮ್ಮ ಮಾತೇ ಕೇಳದವರು ನನ್ನ ಮಾತು ಕೇಳುತ್ತಾರೆಯೇ?'

' ಹೂ. ಗಂಡಸಿಗೆ ಹಡೆದ ತಾಯಿಗಿಂತ, ಕೈ ಹಿಡಿದ ಹೆಂಡತೀನೇ ಹೆಚ್ಚು. ಹೇಳೋ ಹಾಗೆ ಹೇಳಿದರೆ ನಿನ್ನ ಮಾತೇ ಕೇಳುತ್ತಾನೆ.'

' ಅಂದರೆ ಹೇಗೆ ಹೇಳಬೇಕು ಅತ್ತೆ ? '

' ನೀನು ಹೆಂಗಸಾಗಿ ಹುಟ್ಟಿದ್ದು ಸಾರ್ಥಕವಾಯಿತು. ಗಂಡನ ಕಿವಿ ಹೇಗೆ ತಿರುವಬೇಕು ಅನ್ನೋದನ್ನ ನಾನು ಹೇಳಿಕೊಡಬೇಕೇ ? '

—ಕಮಲಮ್ಮ ರತ್ನಮ್ಮನ ಮಾತು ಕೇಳಿ ನಗುತ್ತಾ ಹೇಳುವಳು.

' ನನಗೇನು ತಿಳಿಯುತ್ತೆ ಅಂತ ತಿಳಿಮುಕೊಂಡಿದೀರ ಅತ್ತೆ. ಎಲ್ಲಾ ನೀವು ಹೇಳಿಕೊಟ್ಟರೆ ಉಂಟು. ಇಲ್ದೆ ಹೊದ್ರೆ ನಾನು ಬರೀ ಮಣ್ಣು ಗೊಂಬೆ. ನೀನು ಹೀಗೆ ಮಾಡಬೇಕೂಂತ ಹೇಳಿದರೆ ಹಾಗೆ ಮಾಡ್ತೀನಿ. ಅವರ ಕಿವಿ ಹಿಂಡಬೇಕೂ ಅಂದರೆ ಕಿವಿ ಹಿಂಡ್ತೀನಿ, ಮೂಗುದಾರ ಹಾಕ ಬೇಕೂಂದರೆ ಮೂ ಗು ದಾ ರ ಹಾಕ್ತೀನಿ. ಏನು ಮಾಡಲಿ ಹೇಳು ? ಬ್ಯಾಡಾಂದರೆ ನಿಮ್ಮ ಮುಂದೆ ಎಳೆದುಕೊಂಡು ಬಂದು ನಿಲ್ಲಿಸ್ತೀನಿ. ನೀವೇ ಏನು ಬೇಕೊ ಮಾಡಿ. ನನಗಂತೂ ಅವರನ್ನು ಅಂಕೇಲಿಡೋದು ಸಾಧ್ಯ ವಿಲ್ಲ.'

' ನಿನ್ನ ಸಂಸಾರ ತಿದ್ದಿಕೊಳ್ಳೋದು ನಿನ್ನ ಹಣೇಬರಹ. ನನಗೇನು?'

' ನನಗೇನು ಅಂತ ಈಗ ಕೈಯಾಡಿಸಿದರೆ ಹೇಗೆ ಅತ್ತೆ ? ಎಷ್ಟಾದರೂ ಅವರು ನೀವು ಸಾಕಿದ ಮಗ. ಅವರು ಕೆಟ್ಟವರೊ ಒಳ್ಳೆಯವರೊ, ಏನಿದ್ದರೂ ನಿಮ್ಮದೇ ಜವಾಬ್ದಾರಿ. ನಾಳೆ ನೀವೇ ನನ್ನ ಮಗನ್ನ ಅಂಕೇಲಿಡೋಕೆ

ನೀನು ಯಾರು ಅಂತ ಕೇಳಿದರೆ ನಾನೆಲ್ಲಿಗೆ ಹೋಗಲಿ. ನೀವುಂಟು ನಿಮ್ಮ ಮಗ ಉಂಟು–ಏನಾದರೂ ಮಾಡಿಕೊಳ್ಳಿ.'

—ಎಂದು ನಕ್ಕು ಮಾತು ಮುಗಿಸುತ್ತಿದ್ದಳು ರತ್ನಮ್ಮ.

ಕಮಲಮ್ಮ ರತ್ನಮ್ಮನಿಗೆ ಬುದ್ಧಿವಾದ ಹೇಳಿದ ಹಾಗೆಯೇ, ಕಮಲಮ್ಮನ ಮಗ ರಾಘವೇಂದ್ರ ಸೀತಾರಾಮಯ್ಯನಿಗೆ ಬುದ್ಧಿವಾದ ಹೇಳುತ್ತಿದ್ದ.

ಸೋಮನಹಳ್ಳಿಯಲ್ಲಿ ಸೀತಾರಾಮಯ್ಯನಿಗೆ ಸ್ನೇಹಿತರು ಎಷ್ಟೋ ಜನ ಇದ್ದರೂ, ಸೋದರನಂತಿದ್ದವನು ರಾಘವೇಂದ್ರ ಒಬ್ಬನೇ.

ರಾಘವೇಂದ್ರ ವಯಸ್ಸಿನಲ್ಲಿ ಸೀತಾರಾಮಯ್ಯನಿಗಿಂತ ಕಿರಿಯನಾದರೂ, ಶ್ರೀನಿವಾಸರಾಯರ ನೇತೃತ್ವದಲ್ಲಿ ಚೆನ್ನಾಗಿ ನುರುಪಡಿಯಾಗಿದ್ದುದರಿಂದ ವ್ಯವಹಾರದಲ್ಲಿ ದಕ್ಷನಾಗಿದ್ದ. ಸೀತಾರಾಮಯ್ಯನ ಹಾಗೆ ಅವನಮೇಲೂ ವಯಸ್ಸಿಗೆ ಬಂದ ಮೇಲೆ ತಂದೆಯ ಶಾನುಭೋಕಿಯನ್ನು ನಡೆಸುವ ಜವಾಬ್ದಾರಿ ಬಿದ್ದಿತ್ತು. ರೈತರ ನಡುವೆ ಜೀವನ ಮಾಡುವುದು ಅಭ್ಯಾಸವಾದ ಮೇಲೆ ಅವರೊಂದಿಗೆ ಹೇಗಿರಬೇಕು, ಹೇಗೆ ವ್ಯವಹಾರ ಮಾಡಬೇಕು, ಆ ಬಗೆಯ ಜೀವನದಲ್ಲಿ ಒಳ್ಳೆಯತನದ ಅತಿ–ಮಿತಿ ಏನು ಎನ್ನುವುದನ್ನೆಲ್ಲಾ ಕಂಡುಕೊಂಡಿದ್ದ.

ಎಂತಲೇ ಅವನಿಗೆ ಸೀತಾರಾಮಯ್ಯನಲ್ಲಿ ಎಷ್ಟೇ ವಿಶ್ವಾಸವಿದ್ದರೂ, ಸೀತಾರಾಮಯ್ಯ ವ್ಯವಹಾರ ನಡೆಸುವ ರೀತಿ ಸರಿಬೀಳುತ್ತಿರಲಿಲ್ಲ. ತನ್ನ ಹೊಲ–ಮನೆಗಳ ವಿಷಯಗಳಲ್ಲಿ ಸೀತಾರಾಮಯ್ಯ ಬೇಜವಾಬ್ದಾರಿಯಾಗಿ ನಡೆದುಕೊಳ್ಳುವುದನ್ನು ಕಂಡಾಗ ಕಿಡಿ ಕಿಡಿಯಾಗುತ್ತಿದ್ದ. ಹಾಗೇ ತನಗೆ ತಪ್ಪು ಎಂದು ಕಂಡುದನ್ನು ತಪ್ಪು ಎಂದು ಸೀತಾರಾಮಯ್ಯನ ಮುಖಕ್ಕೆ ಹೇಳಲೂ ರಾಘವೇಂದ್ರ ಹಿಂಜರಿಯುತ್ತಿರಲಿಲ್ಲ. ಸೀತಾರಾಮಯ್ಯ ಬಯಲು ನಾಟಕದ ಗುಂಪಿನಲ್ಲೋ, ಇಸ್ಪೇಟು ಗ್ಯಾಂಗಿನಲ್ಲೋ ಮೈಮರೆತು ಕುಳಿತಿದ್ದಾಗ,

'ಕೆಲಸ ಎಲ್ಲಾ ಮರೆತು ಇಲ್ಲಿ ಕೂತರೆ ಹೇಗೆ ಸೀತಾರಾಮು?'

—ಎಂದು ಸೀತಾರಾಮಯ್ಯ ಮರೆತ ಕೆಲಸವನ್ನು ನೆನೆಸುತ್ತಿದ್ದ.

'ಮರೆತರೆ ಏನು ಮನೆ ಎಲ್ಲಿಯಾದರೂ ಓಡಿಹೋಗುತ್ತೇನೋ? ದಿನಾ ಇದ್ದದ್ದೇ ಅದು.'

—ಎಂದು ಸೀತಾರಾಮಯ್ಯ ರಾಘವೇಂದ್ರನ ಮಾತಿನ ಪಟ್ಟಿಗೇ

ಸಿಕ್ಕದೆ ಜಾರಿಕೊಳ್ಳುತ್ತಿದ್ದ.

'ನೀನು ಹೀಗೆ ಇದ್ದರೆ ಒಂದು ದಿನ ಮನೆ ಮಠ ಒಂದೂ ಉಳಿಯೋಲ್ಲ, ಅದಕ್ಕೆ ಸ್ವಲ್ಪ ಗಮನ ಕೊಟ್ಟು ಆಮೇಲೆ ಏನು ಬೇಕಾದ್ದು ಮಾಡು.'

'ನಾನು ಏನು ಕೆಲಸ ಮಾಡಬೇಕು ಹೇಳು ?'

'ಏನೂ ಕೆಲಸವೇ ಇಲ್ಲವೇ ನಿನಗೆ ?'

'ಏನಿದೆ ಹೇಳು. ಆಮೇಲೆ ಮುಂದಿನ ಮಾತು.'

'ಸಾಕು ಸುಮ್ಮನಿರೋ, ಮನೆ ಮಠ ಯಾವುದೂ ಇಲ್ಲದ ಸನ್ಯಾಸಿ ಹಾಗೆ ಮಾತಾಡಬೇಡ.'

'ಮನೆ ಮಠ ಇದೆ ಅನ್ನೋದು ನನಗೂ ಗೊತ್ತು.'

'ಗೊತ್ತಿದ್ದರೆ ಮತ್ತೆ ಅಲ್ಲಿ ಮಾಡೋ ಕೆಲಸ ಇಲ್ಲವೆ ?'

'ಏನಿದೆ ? ಮನೆ ನೋಡಿಕೊಳ್ಳೋಕೆ ಹೆಂಡತಿ ಇದಾಳೆ, ಹೊಲ ನೋಡಿಕೊಳ್ಳೋಕೆ ಕೃಿತ ಇದಾನೆ. ಅಲ್ಲಿ ನಾನು ಕಡಿಯೋದೇನಿದೆ ?'

'ಏನೂ ಇಲ್ಲ. ಹಾಗಿದ್ದದ್ದಕ್ಕೇ ಹೋದವರ್ಷ ಮನೆತುಂಬುವಷ್ಟು ಭತ್ತ ಬೆಳೆದೂ, ಹಸುವಿಗೆ ಹುಲ್ಲಿಲ್ಲ ಅಂತ ತಿರುಪೆ ಬೇಡಿದ್ದು.'

'ಯಾವಾಗಲಾದರೂ ಒಂದುಸಲ ಹಾಗಾಗುತ್ತೆ. ಅದಕ್ಕೆ ಏನು ಮಾಡಲಿಕ್ಕಾಗುತ್ತೆ ಹೇಳು. ಏನೋ ಕಷ್ಟ ಬಂತು ಅಂತ ಹುಲ್ಲು ಮಾರಿ ಕೊಂಡು ಬಿಟ್ಟ.'

'ಕಷ್ಟ ಬಂತಂತೆ ಕಷ್ಟ. ಹುಲ್ಲುಮಾರಿಕೊಳ್ಳಲಿಕ್ಕೆ ಅದೇನು ಅವನಪ್ಪನ ಮನೆಗಂಟೆ. ಇವತ್ತು ಹುಲ್ಲು ಮಾರಿಕೊಂಡ ನಾಳೆ ಹೊಲಾನೂ ಮಾರಿ ಕೊಳ್ತಾನೆ.'

'ಛೆ, ಛೆ, ಕಾಟಯ್ಯ ಅಂಥ ಮನುಷ್ಯನಲ್ಲ ರಾಘಣ್ಣ.'

'ನೀನು ಸ್ವಲ್ಪ ಸುಮ್ಮನಿರು ಸೀತಾರಾಮು, ಎಲ್ಲಾರ ಹಣೆಬರಹಾನೂ ನನಗೆ ಗೊತ್ತಿದೆ. ಹುಲ್ಲು ಹೋಗಲಿ, ಕಾಳಾದ್ರೂ ಎಷ್ಟು ಬೆಳೀತು, ಎಷ್ಟು ತಂದು ಹಾಕಿದ ಅಂತ ಎಂದಾದರೂ ಕೇಳಿದೀಯ ನೀನು ? ಅವರು ಕೊಟ್ಟಿದ್ದೇ ಲೆಕ್ಕ.'

'ಬೆಳೆದಷ್ಟಕ್ಕೆ ಸರಿಯಾಗಿ ತಂದುಕೊಡ್ತಾನೆ ?'

'ಆದರೆ ಎಷ್ಟು ಬೆಳೀತೂಂತ ಎಂದಾದರೂ ನೀನು ಕೇಳಿದೀಯಾ ?'

'ಕೇಳೋದೇನು ಬಂತು. ನನ್ನ ಪಾಲಿಗೆ ಎಷ್ಟು ಬರಬೇಕೋ

ಅಷ್ಟು ತಂದು ಕೊಡ್ತಾನೆ. ಹಾಗೂ ಒಂದು ವೇಳೆ ಅವನೇ ನಾಲ್ಕುಕಾಳು ಹೆಚ್ಚಿಗೆ ತಿಂದ ಅನ್ನು, ಬೆಳೆದೋನು ತಿಂದರೆ ಏನು ತಪ್ಪು ?'

'ಅದೇ ನಾನು ಬೇಡ ಅಂತ ಹೇಳಿದ್ದು. ನೀನು ಹೀಗೇ ಉಡಾಫೆ ಮಾಡ್ತಾ ಇದ್ದರೆ, ನಾಳೆ ಮನೆ ಮಸೀದಿಯಾಗಿ ಹೋಗುತ್ತೆ. ಅದೆಲ್ಲಾ ಸಂಸಾರಿ ಲಕ್ಷಣವಲ್ಲ ಸೀತಾರಾಮು. ನೀನು ನೋಡಿಕೊಳ್ಳದೆ ಹೋದರೆ ನಾಳೆ ಏನೂ ದಕ್ಕೋಲ್ಲ.'

'ಹಾಗಾದರೆ ರೈತರನ್ನು ನಂಬಬಾರದು ಅಂತೀಯ.'

'ನಂಬಬಾರದು ಅಂತ ನಾನು ಹೇಳೊಲ್ಲ. ನಂಬು. ಆದರೆ ಅದಕ್ಕೂ ಒಂದು ಮಿತಿ ಇರಲಿ. ಅತಿ ನಂಬಿಕೆಯಾಗಿ ತಲೆ ಮೇಲೆ ತಂದುಕೋ ಬೇಡ.'

'ಈಗ ನಾನೇನು ಅಂಥಾದ್ದು ಮಾಡಿದ್ದು ರಾಘಣ್ಣ?'

'ಒಂದರಲ್ಲಿ 'ಅಲ್ಲ, ಎಲ್ಲಾದರಲ್ಲೂ ಅಷ್ಟೇ. ಏನು ಮಾಡಿದರೂ ಅತೀನೇ. ನಿನ್ನ ಸ್ವಭಾವಾನೇ ಹಾಗೆ. ಮನೇನ ಛತ್ರ ಮಾಡಿದೀಯ. ಹೊತ್ತಿಲ್ಲ ಗೊತ್ತಿಲ್ಲ—ಕೈಗೆ ಸಿಕ್ಕೋರನ್ನ ಊಟ ತಿಂಡಿಗೆ ಕರೆದುಕೊಂಡು ಹೋಗ್ತೀಯ. ಮನೆಲೇನು ಆಳೇ ಕಾಳೇ. ರತ್ನಕ್ಕ ಒಬ್ಬಳೇ ಎಷ್ಟೂಂತ ದುಡಿಯೋದು? ಅಲ್ದೆ ಯಾರು ಏನು ಅಂತ ನೋಡ್ದೆ ಎಲ್ಲಾರ್ನೂ ಮನೆ ಸೇರಸ್ತೀಯ. ಎಲ್ಲಾರ ಸ್ವಭಾವಾನೂ ಒಂದೇ ತರಹ ಇರುತ್ತೆಯೇ. ಯಾರಿಗೆ ಯಾವ ಕಾಲಕ್ಕೆ ಏನು ಬುದ್ಧಿಯೋ ?'

'ನೀನು ಆಡೋದು ಕೇಳಿದರೆ ನನಗೆ ಬುದ್ಧೀನೇ ಇಲ್ಲ ಅನ್ನೋ ಹಾಗಿದೆ ರಾಘಣ್ಣ.'

'ನೀನು ಸಿಟ್ಟಾದ್ರೂ ಆಗು. ಖಂಡಿತ ನಿನಗೆ ಬುದ್ಧಿ ಇಲ್ಲ. ವಯಸ್ಸಿನಲ್ಲಿ ನೀನು ನನಗಿಂತ ದೊಡ್ಡವನು ನಿಜ. ಆದರೆ ಹೇಗೆ ಹುಟ್ಟಿದೆಯೋ ಹಾಗೇ ಬೆಳದಿದೀಯ. ನಿನ್ನನ್ನು ಕಟ್ಟಿಕೊಂಡ ರತ್ನಕ್ಕ ಏನೇನು ಪಡಿಪಾಟಲು ಪಡಬೇಕೋ ಅಂತ ನನಗೆ ಗಾಬರಿಯಾಗುತ್ತೆ. ನಿಮ್ಮಿಬ್ಬರಿಗೂ ನಾಳಿನ ಯೋಚನೆಯೇ ಇಲ್ಲ'

—ಎಂದ ರಾಘವೇಂದ್ರ ಕಟುವಾಗಿ. ಆ ಮಾತು ಕೇಳಿ ಸೀತಾರಾಮಯ್ಯ ರಾಘವೇಂದ್ರ ಊಹಿಸದಂತೆ ಸಿಟ್ಟಾಗಲಿಲ್ಲ. ಅದಕ್ಕೆ ಪ್ರತಿಯಾಗಿ ನಕ್ಕುಬಿಟ್ಟ.

'ನಿನಾಡೋ ಮಾತು ನಿಜ ರಾಘು. ನಾನು ಹೀಗೆ ಏಕೆ ಇದ್ದೇನೆ ಗೊತ್ತೆ?'

'ಏಕೆ'

'ಏನಾದ್ರೂ ಬಲಭುಜದ ಹಾಗೆ ನೀನಿದ್ದೀಯ ಅಂತ. ನೀನಿರೋ ವರೆಗೂ ನನಗೇನೂ ಭಯ ಇಲ್ಲ. ಅವಳಿಗೂ ಅಷ್ಟೆ. ನಿನ್ನಂಥ ಅಣ್ಣ ಇರೋವರೆಗೂ ಏನು ಚಿಂತೆ?'

'ಸಾಕು ಸುಮ್ಮನಿರು. ಏನು ಮಾತೂಂತ ಆಡ್ತೀಯ. ನಿನ್ನ ಸಂಸಾರಕ್ಕೆ ನಾನು ಹೊಣೇನೆ?'

'ಮತ್ತೆ ನಿಮ್ಮಮ್ಮ ಕಟ್ಟಿದ ಸಂಸಾರಕ್ಕೆ ನೀನು ಹೊಣೆಯಾಗದೆ ನಾನು ಹೊಣೆಯಾಗಲೇ? ಹೊರಗಿನ ಸಂಸಾರಕ್ಕೆ ನೀನು, ಒಳಗಿನ ಸಂಸಾರಕ್ಕೆ ಅವಳು.'

'ನೀನು—'

'ನನಗೇನು–ಇರೋದೆಲ್ಲಾ ನಿಮ್ಮಿಬ್ಬರಿಗೂ ಒಪ್ಪಿಸಿ ಜೈಶಂಕರ ಅಂತ ಇದ್ದುಬಿಡ್ತೀನಿ.'

'ಇರು, ಇರು, ಎಷ್ಟು ದಿನ ಹಾಗಿರ್ತೀಯೋ ನಾನೂ ನೋಡ್ತೀನಿ'

—ಎಂದು ರಾಘವೇಂದ್ರ ಸೀತಾರಾಮಯ್ಯನೊಂದಿಗೆ ವಾದಿಸಲಾರದೆ ಸೋತು ಸುಮ್ಮನಾಗುತ್ತಿದ್ದ.

ಹೀಗೆ ತಾಯಿಮಕ್ಕಳ ಬುದ್ಧಿವಾದ ಆ ಗಂಡಹೆಂಡರ ಮೇಲೆ ಏನೂ ಪರಿಣಾಮಮಾಡದೆ ಹಾಗೇ ನಡೆದಿತ್ತು ಸಂಸಾರ. ಅವರಿಬ್ಬರಿಗೂ ಇದ್ದ ಆಸೆ ಒಂದೇ—

'ಇಲ್ಲೀವರೆಗೂ ಹೀಗೆ ಆಯಿತು. ನಾಳೆ ಒಂದು ಮಗುವಾದರೆ ಇಬ್ಬರಿಗೂ ಹೊಣೆಗಾರಿಕೆ ಅರಿವಾಗಿ ದಾರಿಗೆ ಬರಬಹುದು' ಎಂಬುದು.

ಅವರ ಬಯಕೆ ಫಲಿಸಿದಂತೆ ಸೀತಾರಾಮಯ್ಯ–ರತ್ನಮ್ಮನಿಗೆ ಮಗುವಾಯಿತು–ಗಂಡುಮಗು.

ಮಗುವಿಗೆ ನಾಲ್ಕು ವರ್ಷ ವಯಸ್ಸೂ ಆಯಿತು.

ಆದರೆ ಸೀತಾರಾಮಯ್ಯ ಮಾತ್ರ ತನ್ನದಾರಿ ಬದಲಿಸಲಿಲ್ಲ.

ಗಂಡ ತನ್ನ ಬುದ್ಧಿ ಬದಲಾಯಿಸಲಿಲ್ಲವೆಂದು ರತ್ನಮ್ಮನೂ ಗೋಣಗಲಿಲ್ಲ.

ಹಾಗೇ ಇದ್ದು, ಒಂದು ದಿನ ಮಳೆಯಲ್ಲಿ ನೆನೆದು ಬಂದದ್ದೇ ನೆಪವಾಗಿ, ವಿಷಮಶೀತಜ್ವರಕ್ಕೆ ತಿರುಗಿ ಸೀತಾರಾಮಯ್ಯ ಹೇಗೆ ಬದುಕಿದ್ದನೋ ಹಾಗೇ ಕಣ್ಣು ಮುಚ್ಚಿಕೊಂಡ.

ಸಾವಿನ ಸಿಡಿಲು ಜಡಿದಾಗ ರತ್ನಮ್ಮನ ಕಣ್ಣು ತೆರೆಯಿತು.

## ೯

ಸೀತಾರಾಮಯ್ಯ ಇನ್ನಿಲ್ಲ !

ಯಾರಿಗೂ ಆ ಮಾತನ್ನು ನಂಬುವುದೇ ಕಷ್ಟವಾಯಿತು.

ಆಡಿದ ಮಾತು ಕಿವಿಯಲ್ಲಿ ಮಿಡಿಯುತ್ತಿದೆ; ಓಡಾಡಿದ ಮೈ ಎದುರಿಗೇ ಮಲಗಿದೆ—ಅದೇ ಮುಖ, ಕಣ್ಣು, ಮೂಗು, ಕೈಕಾಲು. ಆದರೂ ಸೀತಾ ರಾಮಯ್ಯ—ಇನ್ನಿಲ್ಲ.

ಸಾವಿನ ಈ ಭಯಂಕರ ಆಘಾತದಿಂದ ಎಲ್ಲರೂ ಗರಬಡಿದಂತಾದರು.

ದೊಡ್ಡವರ ಅಳು ಕೇಳಿ, ತಾನೂ ಗಟ್ಟಿಯಾಗಿ ಭಯದಿಂದ ಚೀರುತ್ತಿದ್ದ ಮಗುವಿನ ಪರಿವೆಯೂ ಇಲ್ಲದೆ, ಗಂಡನ ಮೈಯನ್ನು ತಬ್ಬಿ ಅಳುತ್ತಿದ್ದ ರತ್ನಮ್ಮನನ್ನು ಕಂಡು ರಾಘಣ್ಣನ ಹೃದಯ ಚೂರು ಚೂರಾಯಿತು.

ಅವಳಿಗೆ ಸಮಾಧಾನ ಹೇಳಬಹುದಾಗಿದ್ದ ಕಮಲಮ್ಮನೂ ದುಃಖದಲ್ಲಿ ಹುಚ್ಚಳಾಗಿದ್ದಳು.

ಎಲ್ಲರಿಗೂ ಹಿರಿಯರಾಗಿದ್ದ ಶ್ರೀನಿವಾಸರಾಯರೂ ದುಃಖದಲ್ಲಿ ಕೊಚ್ಚಿ ಹೋಗಿ—

' ರಾಘಣ್ಣ........ರಾಘಣ್ಣ........ಸೀತಾರಾಮು ಹೋಗಿಬಿಟ್ಟ ಕಣೋ ರಾಘಣ್ಣ.... ನಮ್ಮ ಸೀತಾರಾಮು ಹೋಗಿಬಿಟ್ಟ ಕಣೋ '

—ಎಂದು ತಬ್ಬಲಿಯ ಹಾಗೆ ಹಂಬಲಿಸಿ ಅಳುತ್ತಿದ್ದರು.

ರಾಘಣ್ಣನ ಹೃದಯವೂ, ಯಾರ ದುಃಖಕ್ಕೂ ಕರಗದೆ, ತಣ್ಣಗೆ ಕೊರಡಿನಂತೆ ಮಲಗಿದ್ದ ಸೀತಾರಾಮಯ್ಯನ ದೇಹವನ್ನು ಕಂಡು ಬೆಂದು

ಚೂರುಚೂರಾಗಿತ್ತು.

ಆದರೆ ಎಲ್ಲರೂ ಉನ್ಮತ್ತ ದುಃಖದ ಸೂತ್ರದಗೊಂಬೆಗಳಾದ ಆ ಹೊತ್ತಿನಲ್ಲಿ ಯಾರಾದರೊಬ್ಬರು ಧೈರ್ಯ ವಹಿಸದಿದ್ದರೆ ಮುಂದಿನ ಕೆಲಸಗಳು ನಡೆಯುವ ಹಾಗಿರಲಿಲ್ಲ.

ಅದನ್ನು ಅರಿತುಕೊಂಡ ರಾಘಣ್ಣ, ಗಂಟಲನ್ನು ಹಿಂಡಿ ಬರುತ್ತಿದ್ದ ದುಃಖವನ್ನು ತುಟಿ ಕಚ್ಚಿ ತಡೆಹಿಡಿದು—

'ಎಲ್ಲಾರಿಗೂ ಧೈರ್ಯ ಹೇಳಬೇಕಾದೋರು, ನೀನೇ ಹೀಗೆ ಅತ್ತು ಕೂತುಬಿಟ್ಟರೆ, ರತ್ನಕ್ಕನಿಗೆ ಸಮಾಧಾನ ಹೇಳೋರು ಯಾರು? ಸಾಕು ಸುಮ್ಮನಿರು; ನಾರಾಯಣ ಅತ್ತಾ ಇದಾನೆ. ಅವನ್ನ ಎತ್ತಿಕೋ'

—ಎಂದು ತಾಯಿಯನ್ನು ಗದರಿಕೊಂಡು—

'ಅಣ್ಣಾ, ನೀವೂ ಅತ್ತು ಕೂತರೆ ಏನಾದಹಾಗಾಯಿತು. ಈಗ ಮುಂದೇನು ಮಾಡಬೇಕೊ ಹೇಳಿ. ಆಮೇಲೆ ಅಳೋದು ಇದ್ದೇಇದೆ.'

—ಎಂದು ಶ್ರೀನಿವಾಸರಾಯರಿಗೆ ಹೇಳಿದ.

'ಮುಂದೆ....ಮುಂದೆ....ಏನು ಮಾಡಬೇಕು?.... ಏನು ಮಾಡ ಬೇಕೋ ರಾಘು?'

—ಎಂದರು ಶ್ರೀನಿವಾಸರಾಯರು ಮತಿಯೇ ಮಸಣಿಸಿ ಹೋದಂತೆ.

ಆ ಮಾತು ಕೇಳಿ ದುಃಖದಲ್ಲಿ ಮತಿವಿಕಲರಾದ ಅವರನ್ನು ಮಾತಾಡಿಸಿ ಉಪಯೋಗವಿಲ್ಲೆಂದು ಅರಿತುಕೊಂಡು ರಾಘಣ್ಣ ಹೊರಗೆ ಬಂದು ಜಗಲಿಯ ಮೇಲೆ ನೆತ್ತಿಯ ಮೇಲೆ ಕೈ ಹೊತ್ತು ಕುಳಿತಿದ್ದ ಗಂಗಯ್ಯನನ್ನು ಕರೆದು—

'ಗಂಗಯ್ಯ ಇದು ಅಳೋಕೆ ಹೊತ್ತಲ್ಲ ಏಳು. ಮಾಡೋ ಕೆಲಸ ಬೇಕಾದಷ್ಟಿದೆ'

—ಎಂದ.

'ಏನು ಮಾಡಬೇಕು ರಾಘಣ್ಣ?'

—ಗಂಗಯ್ಯ ಕೇಳಿದ.

'ಎಲ್ಲಕ್ಕೂ ಮೊದಲು ಕೆರೆಸಂತೆಪಕ್ಕಿಗೆ ಯಾರನ್ನಾದರೂ ಗಾಡಿ ಕೊಟ್ಟು ಕಳಿಸಿ ಲಕ್ಷ್ಮಣರಾಯರನ್ನು ಸೀತಮ್ಮನನ್ನೂ ಕರೆಸಬೇಕು. ಚಿನ್ನೋ ಬಯ್ಯನ ಗಾಡಿ ಕಳಿಸು. ಹಾಗೇ ಅವರಿಗೆ ಮೊದಲೇ ಸಾವಿನ ಸುದ್ದಿ ಹೇಳ

ಬೇಡಿ. ಸಖತ್ ಕಾಯಿಲೆಯಾಗಿವೆ, ಕೂಡಲೇ ಬರಬೇಕಂತೆ ಎಂದು ಹೇಳಿ ಕರೆದುಕೊಂಡು ಬರಲಿ. ನೀನು ಅಷ್ಟು ಮಾಡು ಹೋಗು.'

—ಎಂದು ಗಂಗಯ್ಯನನ್ನು ಬಲವಂತವಾಗಿ ಆ ಕೆಲಸಕ್ಕೆ ಕಳಿಸಿ, ಅಲ್ಲೇ ಕುಳಿತಿದ್ದ ರಾಮಾಜೋಯಿಸರನ್ನು ಕಂಡು—

' ಏನು ಜೋಯಿಸರೇ, ಅಂತ್ಯಕ್ರಿಯೆಗಳಿಗೆ ಲಕ್ಷ್ಮಣರಾಯರು ಬರುವ ವರೆಗೂ ಕಾಯಬೇಕೇ ? '

—ಎಂದು ಕೇಳಿದ. ಆ ಮಾತನ್ನು ಕೇಳುವಾಗ ಅವನ ಎದೆಯನ್ನು ಸಾವಿರ ಚೂರಿಗಳು ಇರಿದಂತಾಯಿತು.

' ಹೇಗೆ ಮಾಡಬೇಕೋ ನಿಮ್ಮ ತಂದೇನ ಕೇಳು. ಅವರೇ ಹಿರಿಯರು.'

—ಎಂದರು ಜೋಯಿಸರು.

' ಅವರು ಏನೂ ಹೇಳೋ ಸ್ಥಿತಿಯಲ್ಲಿಲ್ಲ ಜೋಯಿಸರೇ, ನೀವು ಎಲ್ಲಾ ವಿಚಾರ ತಿಳಿದೋರು. ನೀವು ಹೀಗೆ ಮಾಡಬಹುದು ಅಂದರೆ ಮಾಡೋಣ.'

' ಕೆರೆಸಂತೆಹಳ್ಳಿಯಿಂದ ಅವನು ಬರೊಹೊತ್ತಿಗೆ ನಾಳೆ ಮಧ್ಯಾಹ್ನ ವಾಗುತ್ತೆ. ಈಗ ಗಾಡಿ ಹೋಗಿ ಗಾಡೀಲಿ ಅವರು ಬರಬೇಕು. ಅಷ್ಟುಹೊತ್ತಿನ ವರೆಗೂ ಹೆಣ ಇಟ್ಟುಕೊಂಡಿರೋದು ಒಳ್ಳೇದಲ್ಲ. ಜೀವಕ್ಕೆ ಸುಮ್ಮನೆ ನರಕದಲ್ಲಿ ಹಿಂಸೆ. ಅಲ್ಲದೆ–ಇದು ಕಣ್ಣೆದುರಿಗೆ ಇರೋವರೆಗೂ ಆ ಹುಡುಗಿಗೂ ಮಹಾ ದುಃಖ. ಆದ್ದರಿಂದ ಈಕೆಲಸ ಮುಗಿಸಿಬಿಡುವುದೇ ಮೇಲು ಅನ್ನಿಸುತ್ತೆ ನನಗೆ.'

' ಅದೂ ನಿಜವೇ. ಅವರು ಬಂದರೆ ತಾನೇ ಏನು ಮಾಡುತ್ತಾರೆ. '

' ಅವರೂ ಮುಖ ನೋಡೋದಕ್ಕೂ ಇಲ್ಲದಹಾಗೆ ಮಾಡಿದರು ಎಂದು ನೊಂದುಕೊಂಡರೆ........'

'ಮುಖ ನೋಡಿದರೆ ಹೋದ ಜೀವ ವಾಪಸು ಬರುತ್ತದೆಯೇ? ಅಲ್ಲದೆ ಹೆಣ ಕಣ್ಣೆದುರಿಗೇ ಇದ್ದರೆ ರತ್ನಕ್ಕನಿಗೆ ಘಟ್ಟೇ ಹಿಡಿದುಹೋಗುತ್ತೆ. ಆದ್ದರಿಂದ ನೀವು ಹೇಳಿದ ಹಾಗೆ ಮಾಡೊದೇ ಸೂಕ್ತ. ವಿಠೋಬ ನಿಮಗೆ ಸಹಾಯವಾಗ್ತಾನೆ. ಏನು ಸಿದ್ಧತೆ ಬೇಕೊ ಮಾಡಿಕೊಳ್ಳಿ. ಏನು ಸಾಮಾನು ಬೇಕೋ ತರಿಸಿ '

—ಎಂದ ರಾಘಣ್ಣ ಜೋಯಿಸರ ಕೈಗೆ ಇಪ್ಪತ್ತು ರೂಪಾಯಿ ಹಾಕಿ

ದೀವಿಗೆಯಾಯಿತು. ಎದೆಯಲ್ಲಿ ಕಡಿಕಡಿದು ಬರುತ್ತಿದ್ದ ದುಃಖವನ್ನು ಹಾಗೇ ಹುಗಿದು ಮುಂದಿನ ಕೆಲಸಗಳನ್ನು ನಡೆಸಲು ಸಿದ್ಧನಾದ.

ಮಸಣದಿಂದ ಹಿಂದಿರುಗುವಾಗಲೇ ಜೋಯಿಸರಿಂದ ಮುಂದಿನ ಕೆಲಸ ಕಾರ್ಯಗಳಿಗೆ ಖರ್ಚು ವೆಚ್ಚವೆಷ್ಟಾಗುವುದು, ಏನೇನು ಮಾಡಬೇಕು ಎಂದು ತಿಳಿದುಕೊಂಡು, ಮನೆಗೆ ಬರುತ್ತಿದ್ದ ಹಾಗೇ, ಸೀತಾರಾಮಯ್ಯನ ಜನಿವಾರದಿಂದ ತೆಗೆದಿಟ್ಟುಕೊಂಡಿದ್ದ ಬೀಗದ ಕೈಯಿಂದ, ಸೀತಾರಾಮಯ್ಯ ಹಣ ಕಾಗದ ಪತ್ರಗಳನ್ನಿಡುತ್ತಿದ್ದ ಪೆಟ್ಟಿಗೆಯ ಬಾಗಿಲು ತೆಗೆದು, ದುಡ್ಡು ಎಷ್ಟಿದೆಯೊ ಎಂದು ನೋಡಿದ.

ಆದರೆ ಪೆಟ್ಟಿಗೆಯಲ್ಲಿ ಎರಡು ಮೂರು ರೂಪಾಯಿ ಚಿಲ್ಲರೆ ವಿನಾ ಬೇರೇನೂ ಹಣ ಕಾಣಲಿಲ್ಲ.

ಮುಂದೆ ಹನ್ನೆರಡು ಹದಿಮೂರು ದಿನಗಳಲ್ಲಿ ಆರನೂರು–ಏಳನೂರು ರೂಪಾಯಿನ ವೆಚ್ಚ ಕಾದಿತ್ತು. ಆದರೆ ಪೆಟ್ಟಿಗೆಯಲ್ಲಿದ್ದುದು ಬರೀ ಎರಡು ಮೂರು ರೂಪಾಯಿ ಚಿಲ್ಲರೆ.

ಸೀತಾರಾಮಯ್ಯನ ಸಾವಿನ ಪೆಟ್ಟಿನೊಂದಿಗೆ ಈ ಪೆಟ್ಟು ರಾಘಣ್ಣನ ತಲೆಯ ಮೇಲೆ ಬಿತ್ತು.

ಮನೆಗೆ ಹಿಂದಿರುಗಿದ ಮೇಲೆ ಎಲ್ಲಾದರೂ ಒಂಟಿಯಾಗಿ ಒಂದು ಗಳಿಗೆ ಕೂತು ತನ್ನ ಎದೆಯಲ್ಲಿ ಕುದಿಯುತ್ತಿದ್ದ ದುಃಖವನ್ನು ಅತ್ತು ಪರಿಹರಿಸಿಕೊಳ್ಳಬೇಕು ಎಂದು ಬಗೆದಿದ್ದ ರಾಘವೇಂದ್ರ. ಆದರೆ ಈಗ ಅದಕ್ಕೂ ಅವಕಾಶವಿರಲಿಲ್ಲ. ಹಣವನ್ನು ಜೋಡಿಸುವ ಚಿಂತೆ ಮಾಡಬೇಕಿತ್ತು.

ಹತ್ತೋ ಇಪ್ಪತ್ತೋ ಆಗಿದ್ದರೆ ರಾಘವೇಂದ್ರ ಯೋಚಿಸುತ್ತಿರಲಿಲ್ಲ. ಆದರೆ ಬೇಕಾಗಿದ್ದುದು ನೂರಾರು ರೂಪಾಯಿ. ತನ್ನ ಮನೆಯಲ್ಲೂ ಅಷ್ಟು ಹಣವಿರಲಿಲ್ಲವೆಂಬುದು ಅವನಿಗೇ ಗೊತ್ತಿದ್ದುದರಿಂದ ಶ್ರೀನಿವಾಸರಾಯರನ್ನು ಕೇಳಿಯೂ ಉಪಯೋಗವಿರಲಿಲ್ಲ.

ಮನೆಯಲ್ಲೇ ಬೇರೆಲ್ಲಿಯಾದರೂ ಸೀತಾರಾಮಯ್ಯ ಹಣವಿಟ್ಟಿದ್ದಾನೆಯೋ ಎಂದು ನೆಲಕಚ್ಚಿ ಮಲಗಿದ ರತ್ನಮ್ಮನನ್ನು ಕೇಳುವುದೂ ಸಾಧ್ಯವಿರಲಿಲ್ಲ. ಮುಂದೇನು ಮಾಡಬೇಕು ಎಂದು ಚಿಂತಿಸುತ್ತಾ, ಅಳುವವರೊಂದಿಗೆ ಅಳುವುದಕ್ಕೂ ಅವಕಾಶವಿಲ್ಲದ ತನ್ನ ವಿಧಿಯನ್ನು ಶಪಿಸುತ್ತಾ, ದುಃಖದೊಂದಿಗೆ

ಚಿಂತೆಯ ಹೊರೆಯನ್ನು ಹೊತ್ತು ಪಟೇಲ ಗಿರಿಯಣ್ಣನ ಮಗ ಗಂಗಯ್ಯನ ಬಳಿ ಹೊರಟ.

ರಾತ್ರಿ ಸಾಕಷ್ಟು ಹೊತ್ತಾಗಿದ್ದರೂ ಗಂಗಯ್ಯ ಇನ್ನೂ ಮಲಗಿರಲಿಲ್ಲ. ತನ್ನ ಅತ್ಯಂತ ಆಪ್ತ ಸ್ನೇಹಿತನಾದ ಸೀತಾರಾಮಯ್ಯನ ಸಾವಿಗೆ ಕುದಿಯುತ್ತಾ ಮನೆಯ ಮುಂದಿನ ಕಟ್ಟೆಯ ಮೇಲೇ ಕುಳಿತ್ತಿದ್ದವನು, ರಾಘಣ್ಣನನ್ನು ನೋಡಿ—

'ಎಲ್ಲಾ ಆಗ್ಹೋಯ್ತು ರಾಘಣ್ಣ .... ಶಿವ ಶಿವಾ .... ಹಿಂಗಾಗ್ಬಾರ್ದಾಗಿತ್ತು'

—ಎಂದು ಅಷ್ಟು ಹೊತ್ತು ಮರೆತಿದ್ದ ದುಃಖವನ್ನು ಮತ್ತೆ ನೆನಸಿಕೊಂಡು ಅಳತೊಡಗಿದ.

'ಹೂ. ಆಗ್ಹೋಯ್ತು ಗಂಗಯ್ಯ. ಆದರೆ ನನಗೂ ನಿನಗೂ ಅಳೋಕೂ ಪುರುಸೊತ್ತಿಲ್ಲ ಈಗ. ಮಾಡೋ ಕೆಲಸ ಬೇಕಾದಷ್ಟಿದೆ.

—ಎಂದ ರಾಘವೇಂದ್ರ ಜಡವಾದ ಧ್ವನಿಯಲ್ಲಿ.

'ಏನು ಹೇಳು? ಬದುಕಿದ್ದಾಗಂತೂ ಸೀತಾರಾಮಪ್ಪ ಇಂಥಾದು ಬೇಕು ಮಾಡು ಅಂತ ಕೇಳ್ಲಿಲ್ಲ. ಈಗಾದ್ರೂ ಆದಷ್ಟು ಮಾಡೋಣ'

—ಎಂದ ಗಂಗಯ್ಯ ಕಣ್ಣು ಒರೆಸಿಕೊಂಡು.

'ಕೆರೆಸಂತೆಹಳ್ಳಿಗೆ ಗಾಡಿ ಕಳಿಸಿದೆಯೇನು?'

'ಹೂ. ಆಗ್ಲೇ ಹೋಯ್ತು. ಆದಷ್ಟು ಬ್ಯಾಗ ಬನ್ನಿ ಅಂತ ಹೇಳಿ ಕಳಿಸಿದೇನೆ.'

'ಸರಿ. ಈಗ ಅದಕ್ಕಿಂತ ಒಂದು ದೊಡ್ಡ ಕೆಲಸ ಇದೆ.'

'ಏನು ಹೇಳು?'

'ಈಗ ಮೊದಲು ಎಲ್ಲಾದರೂ ಅಷ್ಟು ದುಡ್ಡಿಗೆ ಏರ್ಪಾಡು ಮಾಡಬೇಕು.'

'ಎಷ್ಟು?'

'ಸುಮಾರ ಐನೂರು–ಆರುನೂರು ರೂಪಾಯಿ.'

'ಅಷ್ಟೊಂದು ಹಣ ಬೇಕಾ?'

—ರಾಘವೇಂದ ಹೇಳಿದುದನ್ನು ಕೇಳಿ ಆಶ್ಚರ್ಯದಿಂದ ಕೇಳಿದ

ಗಂಗಯ್ಯ.

'ಹೂ.'

'ಆರುನೂರು ರೂಪಾಯಿ ಅಂದರೆ ಬಹಳ ದೊಡ್ಡ ರಖಮು ಅಷ್ಟೊಂದು ಯಾಕೆ ರಾಘಣ್ಣ ?'

'ವೈಕುಂಠ ಸಮಾರಾಧನೆಯವರೆಗಿನ ಕರ್ಮಾಂತರಗಳನ್ನೆಲ್ಲಾ ಮುಗಿಸುವುದಕ್ಕೆ ಕಡೆಯಪಕ್ಷ ಅಷ್ಟಾದರೂ ಬೇಕಾಗುತ್ತದೆ ಅಂದರು ಜೋಯಿಸರು.'

'ಅಲ್ಲ ಸ್ವಲ್ಪದಲ್ಲಿ ಮಾಡೋಕಾಗೋದಿಲ್ವಾ?'

'ಮಾಡಬಹುದೂ ಏನೋ, ಆದರೆ ಸೀತಾರಾಮು ಬದುಕಿದ್ದಾಗ ಥೊರೆ ಹಾಗೆ ಬದುಕಿದ್ದ. ಅವನಿಗೆ ತಿರುಪೆಯವನ ಹಾಗೆ ಕಾಟಾಚಾರದ ಕರ್ಮಾಂತರ ಮಾಡೋದು ನನಗೆ ಇಷ್ಟವಿಲ್ಲ.'

'ಅದೂ ನಿಜಾನೇ ಅನ್ನು. ಆದರೂ ನನ್ನ ಹತ್ತಿರ ಅಷ್ಟೊಂದು ಹಣ ಇಲ್ಲ. ಸೀತಾರಾಮಪ್ಪನ ಮನೇಲೇನು ಇಲ್ವಾ ?'

'ಊಹೂ. ಪೆಟ್ಟಿಗೆ ಎಲ್ಲಾ ಹುಡುಕಿ ನೋಡಿದೆ. ಬರೀ ಎರಡು ಮೂರು ರೂಪಾಯಿ ಚಿಲ್ಲರೆ ಇತ್ತು.'

'ಅಷ್ಟೇನಾ ?'

'ಹೂ.'

'ಮೊನ್ನೆ ತಾನೆ ಐವತ್ತು ರೂಪಾಯಿ ಪೋಟಗಿ ಬಂದಿತ್ತು.'

'ಯಾರಿಗೆ ಕೊಟ್ಟು ಕೈತೊಳೆದುಕೊಂಡನೊ. ಬದುಕಿದ್ದಾಗ ನಾಳಿನ ಯೋಚನೆ ಅನ್ನೋದು ಎಲ್ಲಿತ್ತು ಅವನಿಗೆ ?'

'ಹೌದ್ದಾದು. ಅವನ ಸ್ವಭಾವಾನೇ ಹಂಗೆ. ಇಲ್ಲಿ ಅವನಹತ್ತಿರ ದುಡ್ಡು ತಗೊಂಡೋರೂ ಎಷ್ಟೊ ಜನ ಇರಬೇಕು. ಆ ಲೆಕ್ಕಾಚಾರ ಸಿಕ್ಕರೆ ಏನಾದ್ರು ಮಾಡಬಹದು.'

'ಅವನು ಲೆಕ್ಕ ಬರೆದಿಟ್ಟಿದ್ರೆ–ಬರೆದಿಟ್ಟಿದಾನೆ ಅನ್ನೋದು ಯಾವ ನಂಬಿಕೆ. ಅಲ್ಲದೆ ಈಗ ಅದನ್ನೆಲ್ಲಾ ಕೆದಕಿಕೊಂಡು ಕೂಡುವುದಕ್ಕೆ ಹೊತ್ತೂ ಇಲ್ಲ. ಈ ಕೆಲಸ ಯಾವುದೂ ಒಂದು ದಿನಾನೂ ತಡ ಮಾಡೊಹಾಗಿಲ್ಲ. ಇದೆಲ್ಲಾಮುಗಿದ ಮೇಲೆ, ಅವನು ಏನು ಲೆಕ್ಕ ಬರೆದಿಟ್ಟಿದಾನೊ, ರತ್ನಕ್ಕನಿಗೆ ಏನಾದರೂ ಹೇಳಿದಾನೇನೊ ವಿಚಾರಿಸಬೇಕು.'

## (೬) ಶಂಖ-ನಾದ.

**ಸಂಜಯ ಉವಾಚ— ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥ ೧೨ ॥**
**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥ ೧೩ ॥**
**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥ ೧೪ ॥**

---

**ಅನ್ವಯ:—** ತಸ್ಯ ಹರ್ಷಂ ಸಂಜನಯನ್, ಪ್ರತಾಪವಾನ್ ಕುರುವೃದ್ಧಃ ಪಿತಾಮಹಃ, ಉಚ್ಚೈಃ ಸಿಂಹನಾದಂ ವಿನದ್ಯ, ಶಂಖಂ ದಧ್ಮೌ ॥ ೧೨ ॥ ತತಃ ಶಂಖಾಃ ಚ ಭೇರ್ಯಃ ಚ ಪಣವಾನಕಗೋಮುಖಾಃ ಸಹಸಾ ಏವ ಅಭ್ಯಹನ್ಯತ । ಸಃ ಶಬ್ದಃ ತುಮುಲಃ ಅಭವತ್ ॥ ೧೩ ॥ ತತಃ ಶ್ವೇತೈಃ ಹಯೈಃ ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ಮಾಧವಃ ಪಾಂಡವಃ ಚ ದಿವ್ಯೌ ಶಂಖೌ ಪ್ರದಧ್ಮತುಃ ॥ ೧೪ ॥

**ಸಂಜಯನು ನುಡಿದನು:— ಆತನು (ದುರ್ಯೋಧನನು) ಹಿಗ್ಗಲೆಂದು ಕೌರವರಲ್ಲಿ ಹಿರಿಯರೂ ಪ್ರತಾಪಶಾಲಿಗಳೂ ಆದ ಪಿತಾಮಹ (ಭೀಷ್ಮ)ರು ಸಿಂಹನಂತೆ ಗಜರಿ ಗರ್ಜಿಸಿ, ಶಂಖವನ್ನು ಊದಿದರು. ॥೧೨॥ ಬಳಿಕ ಪಲವು ಶಂಖಗಳು, ಭೇರಿಗಳು, ಢಕ್ಕೆಗಳು, ಮದ್ದಳೆಗಳು, ಗೋಮುಖಗಳು ಒಮ್ಮೆಲೆ ಬಾಜಿಸಿದುವು. ಆ ಮೊರೆತವು ಬಹಳ ದೊಡ್ಡದಾಗಿತ್ತು. ॥ ೧೩ ॥ ತರುವಾಯ ಬೆಳ್ಕುರೆಗಳ ಹೆದ್ದೇರಿನಲ್ಲಿ ಕುಳಿತ ಶ್ರೀಕೃಷ್ಣಾರ್ಜುನರೀರ್ವರು ತಮ್ಮ ತಮ್ಮ ಶಂಖಗಳನ್ನು ಬಾಜಿಸಿದರು. ॥ ೧೪ ॥**

---

ಮತ್ತು ಭೀಷ್ಮರು ದುರ್ಯೋಧನನ ರಾಜ್ಯದೊಳಗಿನ ಮಹಾ ಸೇನಾಪತಿಗಳಾಗಿದ್ದರು. ಆದುದರಿಂದ ಅರಸನ ಅಪ್ಪಣೆಯಾಗುತ್ತಲೆ ಅವರು ತಮ್ಮ ಅಧಿಕಾರ ಸೂತ್ರಗಳನ್ನು ಸ್ವೀಕರಿಸಿ ಯುದ್ಧಕ್ಕೆ ಅಣಿಯಾದರು. ವರಿಷ್ಠರು ಕೊಟ್ಟ ಅಪ್ಪಣೆಯನ್ನು ಪಾಲಿಸುವುದು ಸೈನಿಕವೃತ್ತಿಯ ಜೀವನದ ಮುಖ್ಯ ಧರ್ಮವೆ ಆಗಿದೆ. ಆ ದೃಷ್ಟಿಯಿಂದ ಭೀಷ್ಮ-ದ್ರೋಣರ ಈ ಕೃತಿಯು ಯೋಗ್ಯವೆ ಆಗಿದೆ. ಆದರೆ ಅವರು ದುರ್ಯೋಧನನಿಗೆ ಸಂತೋಷಪಡಿಸುವುದಕ್ಕಾಗಿ ಸೇನಾಪತಿ ಪದವಿಯನ್ನು ಸ್ವೀಕರಿಸಿದರು ಎಂಬುದು ಮಾತ್ರ ಸರಿಯಲ್ಲ. ಪ್ರವಾಹ ಪತಿತನಾಗಿ ಅಥವಾ ಅನಿವಾರ್ಯ ಕರ್ತವ್ಯವೆಂದು ಯಾವುದೊಂದು ಕೆಲಸವನ್ನು ಮಾಡುವುದು ಬೇರೆ; ಆ ಕೆಲಸವು ಮೆಚ್ಚಿಕೆಯಾಗಿ ಮನಸಾರೆ ಅದನ್ನು ಒಲಿದು ಕೈಕೊಂಬುದು ಬೇರೆ. ಭೀಷ್ಮ-ದ್ರೋಣರು ಈಗ ಯುದ್ಧಕ್ಕೆ ಸಿದ್ಧರಾದುದು ಕೇವಲ ಕರ್ತವ್ಯವೆಂದು. ಉಪ್ಪುಂಡುದಕ್ಕಾಗಿ (ಜೋಳದ ಪಾಳಿಯೆಂದು). ದುರ್ಯೋಧನನ ರಾಜನೀತಿಯು ಸಮ್ಮತವಿದ್ದು, ಇದು ಧರ್ಮಯುದ್ಧವೆಂಬ ಭಾವನೆಯಿಂದ ಅವರು ಅದರಲ್ಲಿ ಭಾಗವಹಿಸಿದ್ದಿಲ್ಲ.

(೧೨) ಭೀಷ್ಮ ಪಿತಾಮಹರ ಸಿಂಹಗರ್ಜನೆ ಮತ್ತು ಶಂಖನಾದವು ಕಿವಿಗೆ ಬೀಳುತ್ತಲೆ ಕೌರವ ಸೈನ್ಯದಲ್ಲಿ ರಣವಾದ್ಯಗಳು ಪ್ರಚಂಡವಾಗಿ ನಿನದಿಸಿದುವು. ಶಂಖನಾದವೂ ರಣವಾದ್ಯ ಘೋಷವೂ ಯುದ್ಧದೊಳಗಿನ ಉತ್ಸಾಹದ ದ್ಯೋತಕವಾಗಿದೆ. ರಣವಾದ್ಯಗಳ ಘೋಷವು ಸೈನಿಕರನ್ನು ಕಾಳಗಕ್ಕೆ ಹುರುದುಂಬಿಸಿ ಮೈಮರೆಯಿಸುವುದು. ಹುಮ್ಮಸವನ್ನು ಇಮ್ಮಡಿಸುವುದು. ಕೌರವ ಸೈನ್ಯದ ಈ ಕಹಳೆ ಕೊಂಬುಗಳ ಮೊರೆತವು, ಪಾಂಡವರಿಗೆ ಕಾಳಗದ ಔತಣವೆ ಆಗಿದ್ದಿತು. 'ನಾವು ಹೋರಟೆಗೆ ಅಣಿಯಾಗಿದ್ದೇವೆ. ನಿಮಗೆ ನಮ್ಮನ್ನು ಎದುರಿಸುವ ಎದೆಗಾರಿಕೆಯಿದ್ದರೆ ಮುಂದೆ ಬನ್ನಿ!' ಪಾಂಡವರಂತೂ ಮೊದಲೆ ಸಿದ್ಧರಾಗಿದ್ದರು. ಕೌರವರ ರಣವಾದ್ಯ ಘೋಷವನ್ನು ಕೇಳುತ್ತಲೆ, ಅವರೂ ಅದೇ ಬಗೆಯಾದ ಮಾರುತ್ತರವನ್ನಿತ್ತರು. ಅದರ ವಿವರವು ಮುಂದಿನ ಶ್ಲೋಕಗಳಲ್ಲಿದೆ:

(೧೪-೧೯) ಕೌರವರ ಸೈನ್ಯದಲ್ಲಿ ಭೀಷ್ಮ ಪಿತಾಮಹರ ಶಂಖನಾದದ ವರ್ಣನೆಯು ಮಾತ್ರ ಉಂಟು. ದ್ರೋಣರು ಶಂಖವನ್ನು ಊದಿದ ಸುದ್ದಿಯೆ ಇಲ್ಲ. ಕೌರವ ವೀರರಲ್ಲಿ ಪ್ರಮುಖರಾದವರು ಯಾರಾದರೂ ಹುಮ್ಮಸದ ಉಬ್ಬಿನಿಂದ ತಮ್ಮ ಶಂಖಗಳನ್ನು ನಿನದಿಸಿದ್ದರೆ ಅದರ ವರ್ಣನೆಯೂ ಇಲ್ಲಿ ಬರಬಹುದಾಗಿತ್ತು. ಆದರೆ ಕೌರವ ಸೇನೆಯಲ್ಲಿ, ಈ ಬಗೆಯ ಹುರುಪಿನಿಂದ

‘ ಅದೂ ನಿಜವೇ. ಹಾಗಾದರೆ ಈಗ ಹ್ಯಾಗೆ ಮಾಡೊದು ಅನ್ನೀಯ ರಾಘಣ್ಣಾ. ನನ್ನ ಹತ್ತಿರ ಅಷ್ಟು ದುಡ್ಡಿಲ್ಲ. ಎಲ್ಲಾ ಹುಡಕಿದ್ರೂ ನಲವತ್ತೋ ಐವತ್ತೋ ಸಿಗಬಹುದು. ’

—ಎಂದ ಗಂಗಯ್ಯ ಚಿಂತೆ ತುಂಬಿ ತುಳುಕುವ ಧ್ವನಿಯಲ್ಲಿ.

‘ ನನ್ನ ಹತ್ತಿರಾನೂ ಅದೇ ಹಣೇಬರಹ. ಈಗ ಎಲ್ಲಿ ಹೋದರೆ ಸಿಗಬಹುದು ಹೇಳು. ’

‘ಇದ್ದಿದ್ದರಲ್ಲಿ ನಮ್ಮಪೈಕಿ ಎಲ್ಲಾ ಚಿನ್ನೋಬಯ್ಯನೇ ಗಟ್ಟಿಕುಳ. ಆದ್ರೂ ಅವನ ಹತ್ತಿರಾನೂ ಅಷ್ಟು ಸಿಗಲಾರದು. ನೀನು ಮನೆಕಡೆ ಹೋಗು. ನಾನು ಏನಾಗ್ತದೊ ವಿಚಾರಿಸಿಕೊಂಡು ಬಂದು ಹೇಳುತ್ತೇನೆ. ಅಲ್ಲೆಷ್ಟು ಸಿಕ್ಕುತ್ತದೆಯೊ ನೊಡಿಕೊಂಡು ಮುಂದಿನ ವಿಚಾರ ಯೊಚನೆ ಮಾಡೋಣ ’

—ಎಂದು ಗಂಗಯ್ಯ ಹಣ ಹುಡುಕುವ ಜವಾಬ್ದಾರಿಯನ್ನು ತಾನು ಹೊತ್ತು ರಾಘವೇಂದ್ರರಾಯನನ್ನು ಮನೆಗೆ ಕಳಿಸಿದ.

# ೧೦

ಹೀಗೆ ನಾಲ್ಕಾರು ಜನ ಮಿತ್ರರ ಸಹಕಾರದಿಂದ ಸೀತಾರಾಮಯ್ಯನ ಅಂತ್ಯಕ್ರಿಯೆ ಮುಗಿಯಿತು. ಅದೆಲ್ಲವೂ ಮುಗಿಯುವ ವೇಳೆಗೆ ಸೀತಾರಾಮಯ್ಯನ ಒಳ್ಳೆಯತನ, ಬೇಜವಾಬ್ದಾರಿತನಗಳಿಂದ ಅವನ ಸಂಸಾರದ ದೋಣಿ ಎಷ್ಟುಕಡೆ ತೂತು ಬಿದ್ದಿತ್ತೆಂಬುದು ಎಲ್ಲರಿಗೂ ಅರಿವಾಗಿತ್ತು. ದುಂದುವೆಚ್ಚದ ಸಂಸಾರ ನಡೆಸಲಿಕ್ಕೋ, ಅಥವಾ ಮತ್ತಾರಿಗಾದರೂ ಸಹಾಯ ಮಾಡುವುದಕ್ಕೋ–ಯಾವುದಕ್ಕೋ ಅಂತೂ ಸೀತಾರಾಮಯ್ಯ ಹಳ್ಳಿಯಲ್ಲಿ ಎರಡು ಮೂರು ಕಡೆ ಸುಮಾರು ಇನ್ನೂರು ರೂಪಾಯಿಗಳವರೆಗೆ ಸಾಲ ತಂದಿದ್ದ. ಅದೇ ಸಾಲದು ಎನ್ನುವಂತೆ, ಎರಡು ಮೂರು ಜನ 'ಹೋಕು' ಕುಳಗಳಿಗೆ ಸಾಲಕ್ಕೆ 'ಜಂಟಿ'ಯಾಗಿದ್ದ. ಆ ಸುದ್ದಿ ಒಂದೊಂದಾಗಿ ತಿಳಿಯುತ್ತಾ, ಸೀತಾರಾಮಯ್ಯ ಹೆಂಡರು ಮಕ್ಕಳ ತಲೆಯ ಮೇಲೆ ಬರೀ ಸಾವಿನ ಹೊರೆಯನ್ನಷ್ಟೇ ಅಲ್ಲ ಆದರ ಜೊತೆಗೆ ಸಾಲದ ಉರಿ ಹೊರೆಯನ್ನೂ ಹೊರಿಸಿ ಹೋಗಿದಾನೆ ಎಂಬುದು ಅರಿವಾಗಿ, ರಾಘವೇಂದ್ರರಾಯ ದಿಗ್ಭ್ರಾಂತನಾದ. ರಾಘವೇಂದ್ರರಾಯನಿಂದ ಇದನ್ನು ತಿಳಿದ ಕಮಲಮ್ಮ—

'ಇಷ್ಟೆಲ್ಲಾ ಯಾಕೆ ಮಾಡಿಕೊಂಡನೋ ?'

—ಎಂದು ಕೇಳಿದಳು.

'ಯಾಕೆ ಅಂದರೆ ನನಗೇನು ಗೊತ್ತು ಹೇಳು ? ಅವನು ಬದುಕಿದ್ದಾಗ ಇಷ್ಟು ಮಾಡಿಕೊಂಡಿದಾನೆ ಅಂತ ನನಗೂ ಗೊತ್ತಿರಲಿಲ್ಲ. ಆಗಲೇ ಗೊತ್ತಾಗಿದ್ದರೆ ಕಪಾಳಕ್ಕಾದರೂ ಹೊಡೆದು ದಾರಿಗೆ ತರಬಹುದಾಗಿತ್ತು.

ಮನೆ ಸುಟ್ಟು ಊರಿಗೆ ಬೆಳಕು ತೋರಿಸಲಿಕ್ಕೆ ಹೋಗ್ತಾನೆ ಅಂತ ನಾನು ತಿಳಿದುಕೊಂಡಿರಲಿಲ್ಲ. ಅತಿ ಒಳ್ಳೇತನ ಬೇಡಾಂತ ಇದ್ದಷ್ಟು ದಿನ ಬಡಕೊಂಡೆ. ಆದರೆ ನನ್ನ ಮಾತು ಕೇಳಲಿಲ್ಲ.'

—ರಾಘವೇಂದ್ರರಾಯ ಕಹಿಯಾದ ಧ್ವನಿಯಲ್ಲಿ ಹೇಳಿದ.

' ಅವನ ಒಳ್ಳೇತನಕ್ಕಷ್ಟು ಬೆಂಕಿ ಹಾಕಿದರು. ಅವನೇನೋ ಸತ್ತು ಉದ್ಧಾರವಾದ. ಈಗ ಬದುಕಿರೋರ ಗತಿ ಏನು ಹೇಳು ?'

—ಎಂದಳು ಕಮಲಮ್ಮ ತಲೆಯ ಮೇಲೆ ಗುಡ್ಡ ಜರಿದು ಬಿದ್ದಂತೆ.

' ಏನು ಮಾಡೋದೋ ನನಗೂ ಅದೇ ಗೊತ್ತಾಗ್ತಾ ಇಲ್ಲ '

—ಎಂದ ರಾಘವೇಂದ್ರರಾಯ ಕತ್ತಲಲ್ಲಿ ದಾರಿಕಾಣದೆ ತಡವರಿಸುವವನಂತೆ.

ಈ ಪರಿಸ್ಥಿತಿಯನ್ನರಿತ ಎಲ್ಲರಿಗೂ ಅದೇ ಚಿಂತೆಯಾಯಿತು—ರತ್ನಮ್ಮ, ಅವಳ ನಾಲ್ಕುವರ್ಷದ ಮಗ ನಾರಾಯಣನಿಗೆ ಮುಂದೇನು ಗತಿ?

ಅಳಿಯನ ಅಂತ್ಯ ಸಂಸ್ಕಾರಗಳಿಗೆಂದು ಕೆರೆಸಂತೆಹಳ್ಳಿಯಿಂದ ಬಂದ ಲಕ್ಷ್ಮಣರಾಯ ಎಲ್ಲವನ್ನೂ ತಲೆತಗ್ಗಿಸಿ ಕೇಳಿ, ಅಷ್ಟು ಹೊತ್ತು ಚಿಂತಿಸಿ—

' ನನಗೇನೋ ಒಂದೇ ದಾರಿ ಕಾಣಿಸುತ್ತದೆ ರಾಘಣ್ಣಾ '

—ಎಂದ.

' ಏನು ಹೇಳಿ ?'

' ಈಗ ಸೀತಾರಾಮೂನ ಅಂದೇನೂ ಉಪಯೋಗವಿಲ್ಲ. ಅವನು ಬದುಕಿದ್ದರೆ ತನ್ನ ಹೆಂಡತಿ ಮಕ್ಕಳಿಗೆ ಹೀಗೆ ಅನ್ಯಾಯವಾಗಲಿಕ್ಕೆ ಬಿಡುತ್ತಿರಲಿಲ್ಲ. ಆದರೆ ಹೀಗೆ ಇದ್ದಕ್ಕಿದ್ದಹಾಗೇ ಸಾವು ಬರುತ್ತೇಂತ ಯಾರು ಕಂಡಿದ್ದರು. ಏನೋ ನಮ್ಮ ಅದೃಷ್ಟ ಕೆಟ್ಟದು. ಆಗಬಾರದ್ದು ಆಗಿಹೋಯಿತು. ಆದರೆ ನನಗೆ ಒಂದೇ ಸಮಾಧಾನ ರಾಘಣ್ಣಾ....'

' ಏನು ಸಮಾಧಾನ ?'

' ನೋಡು, ನಾವು ಇಷ್ಟು ಹಚ್ಚಿಕೊಂಡು ಒದ್ದಾಡೋ ಜೀವಾನೇ ಶಾಶ್ವತವಲ್ಲ. ಇನ್ನು ಈ ಆಸ್ತಿಪಾಸ್ತಿ ಶಾಶ್ವತವೇ ? ಹೋಗೋಕಾಲ ಬಂದರೆ ಬೆಟ್ಟದಂಥ ಆಸ್ತಿ ಇದ್ದರೂ ಉಳಿಯೊಲ್ಲ. ಕೈಲಿ ಹಿಡಿದುಕೊಂಡ ಮಂಜಿನ ಗಡ್ಡೆ ಹಾಗೆ, ನಮಗೆ ಅರ್ಥವಾಗದ ಹಾಗೇ ಕರಗಿ ಹೋಗುತ್ತೆ. ಅದೃಷ್ಟ

ಚೆನ್ನಾಗಿದ್ದರೆ, ನನ್ನ ಮೊಮ್ಮಗ ಇದರ ಹತ್ತರಷ್ಟು ಆಸ್ತಿ ಸಂಪಾದಿಸಬಹುದು. ನಾರಾಯಣನೇ ದೊಡ್ಡ ಆಸ್ತಿ. ಅದೇ ಸಮಾಧಾನಾನೇ ಹಚ್ಚಿಕೊಂಡ ರಾಯಿತು.'

'ಆದರೆ ಆ ಸಮಾಧಾನದಿಂದ ಏನು ಉಪಯೋಗ ಲಕ್ಷ್ಮಣರಾಯರೇ, ಸೀತಾರಾಮು ಸತ್ತ ಹೊಸಪರಿ ಈಗ. ಅದಕ್ಕೇ ಸಾಲ ಕೊಟ್ಟೋರಿಗೂ ಕೇಳೋ ಮನಸ್ಸಿಲ್ಲ. ಆದರೆ ಅವರು ಎಷ್ಟು ದಿನ ತಡೀತಾರೆ? ಅವರು ಮನೆ ಬಾಗಿಲಿಗೆ ಬಂದು ಕೂತುಕೊಂಡಾಗ ಈ ವೇದಾಂತ ಹೇಳಿದರೆ ಕೇಳ್ತಾರೆಯೇ—ಕೊಡಬೇಕಾದ ದುಡ್ಡು, ಬಡ್ಡಿ ಇಟ್ಟುಹೋಗಿ ಅನ್ತಾರೆ.'

'ನಿಜ.'

'ಅದಕ್ಕೇನು ಹೇಳ್ತೀರ?'

'ಹೇಳೋಬೇಕು ಬಂತು ರಾಘಣ್ಣ, ಅವರು ಮನೆ ಬಾಗಿಲಿಗೆ ಬರೋ ವರೆಗೂ ಬಿಡೋದೇ ತಪ್ಪು.'

'ಬರದ ಹಾಗೆ ಏನು ಮಂತ್ರ ಹಾಕಬೇಕೂ ಅಂತೀರಾ?'

'ಮಂತ್ರವೂ ಇಲ್ಲ, ಮಾಟವೂ ಇಲ್ಲ.'

'ಮತ್ತೆ?'

'ಈಗ ಸೀತಾರಾಮೂದು ಚೂರೊ ಚೂರೂ ಆಸ್ತಿ ಇದೆ. ಅದನ್ನಷ್ಟು ಮಾರಿಬಿಟ್ಟರೆ ಈ ಸಾಲ ತೀರಿಹೋಗುತ್ತೇಂತ ನನಗೆ ಅನಿಸುತ್ತೆ. ಅದನ್ನು ಮಾರಿಬಿಟ್ಟರೆ ಈ ಚಿಂತೆ ತೀರಿಹೋಗುತ್ತೆ.'

'ಬಹಳ ಒಳ್ಳೇ ಮಾತು ಹೇಳಿದಿರಿ ಲಕ್ಷ್ಮಣರಾಯರೇ!'

—ಎಂದ ರಾಘವೇಂದ್ರರಾಯ ವ್ಯಂಗ್ಯದ ಧ್ವನಿಯಲ್ಲಿ.

'ಏಕೆ–ಹಾಗೆ ಮಾಡಬಾರದೇ?'

'ಏಕೆ ಮಾಡಬಾರದು. ಅಗತ್ಯವಾಗಿ ಮಾಡಬಹುದು. ಇರೋ ಅಂಗೈ ಅಗಲದ ಆಸ್ತೀನ ಕಳೆದುಕೊಂಡು, ಆಮೇಲೆ ರತ್ನಕ್ಕ ಏನು ಮಾಡ ಬೇಕು. ತಿರುಪೆ ಎತ್ತಬೇಕೇ?

'ತಿರುಪೆ ಏಕೆ ಎತ್ತಬೇಕು?'

'ಮತ್ತೇನು ಮಾಡಬೇಕು?'

'ಏನೂ ಇಲ್ಲ ರಾಘಣ್ಣ, ರತ್ನಕ್ಕ ನನ್ನ ಹತ್ತಿರ ಇರ್ತಾಳೆ.'

—ನಿರ್ಧಾರದ ಧ್ವನಿಯಲ್ಲಿ ಹೇಳಿದ ಲಕ್ಷ್ಮಣರಾಯ.

'ಚೆನ್ನಾಗಿ ಹೇಳಿದಿರಿ ಲಕ್ಷ್ಮಣರಾಯರೇ, ನೀವೂ ಸೀತಾರಾಮು ಮಾತಾಡಿದ ಹಾಗೆ ಆಡ್ತಾ ಇದೀರ.'

'ಏಕೆ?'

'ಅದು ಅಂದುಕೊಂಡಷ್ಟು ಸುಲಭವೇ?

'ಕಷ್ಟವೋ ಸುಲಭವೋ—ಬಳ್ಳಿಗೆ ಕಾಯಿ ಹೊರೆಯೆ?'

'ಅಲ್ಲ. ಆವರೂ ಅವಸರದಲ್ಲಿ ಆಸ್ತಿ ಮಾರಲಿಕ್ಕೆ ಹೋದರೆ ಒಳ್ಳೆ ಬೆಲೆ ಸಿಗುತ್ತೆಯೆ?'

'ಏನು ಸಿಗುತ್ತದೊ. ಆದರೆ ಈ ಸಾಲದ ಹೊರೆನಾದರೂ ತೀರುತ್ತಲ್ಲ.'

'ಅಷ್ಟಾಗಬಹುದು.'

'ಅಷ್ಟಾದರೆ ಸಾಕು.'

'ಹಾಗಂತ ಆಸ್ತಿ ಕಳೆದುಬಿಡೋದೆ,'

'ಆಸ್ತಿ ಇರೋ ಹೊತ್ತಿಗೆ ತಾನೆ, ಅದು ಇರುತ್ತೆ, ಹೋಗುತ್ತೆ ಅನ್ನೋ ಚಿಂತೆ. ಅದೇ ಇಲ್ಲದಿದ್ದರೆ ಏನು ಮಾಡಬೇಕಾಗಿತ್ತು ಹೇಳು? ಮುಂದಕ್ಕೆ ಹೇಗೋ ದೇವರಿಟ್ಟ ಹಾಗಾಗುತ್ತೆ.'

'ಏನು ದೇವರಿಟ್ಟ ಹಾಗಾಗುತ್ತೋ, ನ ನ ಗ ಂ ತೂ ಇದು ಸರಿ ಕಾಣೋಲ್ಲ.'

'ಇರಬಹುದು. ಈಗ ಅದು ಬಿಟ್ಟು ಬೇರೆ ಏನಾದರೂ ದಾರಿ ಇದ್ದರೆ ಹೇಳು'

—ಎಂದು ಲಕ್ಷ್ಮಣರಾಯ ರಾಘವೇಂದ್ರರಾಯನಿಗೇ ಸವಾಲು ಹಾಕಿದ. ಆ ಪ್ರಶ್ನೆಯನ್ನು ಕೇಳಿ ರಾಘವೇಂದ್ರರಾಯನೂ ಯೋಚನೆ ಮಾಡಿದ. ಎಷ್ಟು ಯೋಚಿಸಿದರೂ ಅವನಿಗೂ ಬೇರೆ ದಾರಿತೋರಲಿಲ್ಲ.

'ನೀವು ಹೇಳೊದು ನಿಜ, ಲಕ್ಷ್ಮಣರಾಯರೇ. ಆದರೆ ರತ್ನಕ್ಕ ಇದಕೆ ಒಪ್ಪಬೇಕಲ್ಲ?'

—ಎಂದು ಮರುಪ್ರಶ್ನೆ ಹಾಕಿದ.

'ಆವಳನ್ನು ಒಪ್ಪಿಸೋ ಜವಾಬ್ದಾರಿ ನನಗಿರಲಿ.'

—ಎಂದು ಲಕ್ಷ್ಮಣರಾಯಆ ಭಾರವನ್ನು ತನ್ನ ಮೇಲೆ ಹೊತ್ತು

ಕೊಂಡ.

'ಆಗಲಿ. ರತ್ನಕ್ಕನ್ನ ಕೇಳಿ, ಅವಳು ಏನು ಹೇಳುತ್ತಾಳೊ ತಿಳಿದು ಕೊಂಡು ಆಮೇಲೆ ಮುಂದಿನ ಮಾತು.'

—ಎಂದ ರಾಘವೇಂದ್ರರಾಯ.

ಮಗಳೊಂದಿಗೆ ಈ ವಿಷಯ ಮಾತಾಡುತ್ತೇನೆ ಎಂದು ಲಕ್ಷ್ಮಣರಾಯ ರಾಘವೇಂದ್ರರಾಯನಿಗೆ ಹೇಳಿದರೂ, ಪತಿಯ ಸಾವಿನ ಶೋಕದಿಂದ ನೆಲ ಹಿಡಿದಿದ್ದ ಮಗಳೆದುರಿಗೆ, ತಾನೇ ಆ ಮಾತನ್ನಾಡಲು ಮನಸ್ಸು ಬರಲಿಲ್ಲ. ತನ್ನ ಹೆಂಡತಿ ಸೀತಮ್ಮನೊಂದಿಗೆ ರಾಘವೇಂದ್ರರಾಯ ಹೇಳಿದ ವಿಷಯ ವನ್ನೆಲ್ಲಾ ಹೇಳಿ—

'ನೀನೇ ಈ ವಿಷಯವನ್ನೆಲ್ಲಾ ರತ್ನಕ್ಕನ ಮುಂದೆ ಮಾತಾಡಿ, ಅವ ಳನ್ನು ಒಪ್ಪಿಸಬೇಕು.'

—ಎಂದ.

'ಅವಳ ಮುಖ ನೋಡಿದರೆ ನನಗೆ ಏನು ಮಾತಾಡೋಕೂ ಬಾಯೇ ಬರೋಲ್ಲ. ಇದೆಲ್ಲಾ ಹೇಗೆ ಹೇಳಲಿ. ಅಂತೂ ಹಾಳು ದೇವರು ಅವಳ ಬಾಳಿಗೆ ಕೊಟ್ಟ ದುಃಖ ಒಂದೊಂದಲ್ಲ.'

—ಎಂದಳು ಸೀತಮ್ಮ ಕಂಬನಿಗರೆಯುತ್ತಾ.

'ನೋಡು ಅದೆಲ್ಲಾ ಮಾತಾಡೊಕ್ಕೆ ಇದು ಹೊತ್ತಲ್ಲ. ಸೀತಾರಾಮು ಇರೋವರೆಗೂ ಒಳ್ಳೇನು ಅನ್ನಿಸಿಕೊಂಡು ಹೋದ. ಅವನ ಜೊತೇಗೇ ಅವನ ಒಳ್ಳೆತನಾನೂ ಸತ್ತು ಹೋಯಿತು ಅಂತ ಅವನಿಗೆ ಸಾಲಕೊಟ್ಟೋರು, ಅಂದು ಕೊಳ್ಳೋಹಾಗೆ ಮಾಡೋದು ನಮಗೂ ಶ್ರೇಯಸ್ಸಲ್ಲ. ಆದ್ದರಿಂದ ಈ ವಿಚಾರ ಎಲ್ಲಾ ರತ್ನನಿಗೆ ಹೇಳು. ಅವಳಿಗೂ ಅರ್ಥವಾಗುತ್ತೆ.'

'ಏನು ಅರ್ಥವಾಗುತ್ತೋ ಬಿಡುತ್ತೋ—ಏನಾದರಾಗಲಿ, ನೀವೇ ಏಕೆ ಹೇಳಬಾರದು ಇದನ್ನು'

'ಎಷ್ಟಾದರೂ ನೀನು ರತ್ನನ್ನ ಹಡೆದ ತಾಯಿ. ಅವಳಿಗೆ ನನ್ನಮೇಲಿ ರೋದಕ್ಕಿಂತ ನಿನ್ನಮೇಲೆ ಪ್ರೀತಿ ಹೆಚ್ಚು. ಇಂಥ ಹೊತ್ತಿನಲ್ಲಂತೂ ನಿನ್ನ ಮಾತಿಗೇ ಹೆಚ್ಚು ಬೆಲೆ. ಆದ್ದರಿಂದ ಹೊತ್ತುಗೊತ್ತು ನೋಡಿಕೊಂಡು, ಅವಳ ಮನಸ್ಸಿಗೆ ನೋವಾಗದ ಹಾಗೆ ಈ ವಿಷಯ ಎಲ್ಲಾ ಹೇಳು.'

‘ ಈಗಲೇ ಅವಳು ಪಾತಾಳಕ್ಕೆ ಇಳಿದು ಹೋಗಿದಾಳೆ. ಅಂಥಾದ್ದರಲ್ಲಿ ಇದೆಲ್ಲಾ ಅವಳ ಮುಂದೆ ಹೇಗೆ ಹೇಳಲಿ ? ’

‘ ಈಗ ಹೇಳದೆ ಬೇರೆ ದಾರೀನೇ ಇಲ್ಲ. ಆ ಮಾತೆಲ್ಲಾ ಹೇಳೋಕೆ ನಿನ್ನ ಮನಸ್ಸಿಗೆ ಎಷ್ಟು ಹಿಂಸೆ ಆಗುತ್ತೆ ಅಂತ ನನಗೂ ಗೊತ್ತು. ಆದರೇನು ಮಾಡೋದು ಹೇಳು. ನಮ್ಮ ಹಣೇಲಿ ಏನೇನು ಬರೆದಿದೆಯೋ ಅದೆಲ್ಲಾ ಅನು ಭವಿಸಿಯೇ ತೀರಬೇಕು. ರತ್ನ ಕಷ್ಟಪಡೋಕೇ ಹುಟ್ಟಿದಾಳೆ. ಇಲ್ದಿಹೋದ್ರೆ ಈ ವಯಸ್ಸಿನಲ್ಲಿ ಅಂಥಾ ಗಂಡನ್ನ ಕಳೆದುಕೊಳ್ಳಬೇಕಾಗಿತ್ತೆ ? ಏನೇನು ಆಗಬೇಕೋ ಎಲ್ಲಾ ಆಗಲಿ.’

—ಎಂದ ಲಕ್ಷ್ಮಣರಾಯ ಜಡವಾದ ಸ್ವರದಲ್ಲಿ.

ಆ ಮಾತಿನ ಇದಿರು ಸೀತಮ್ಮ ಸೋತು, ಬೇರೆದಾರಿ ಕಾಣದೆ, ಗಂಡ ಹೇಳಿದುದನ್ನು ಮಗಳಿಗೆ ಹೇಳುವ ಹೊಣೆಗಾರಿಕೆಯನ್ನು ಹೊತ್ತುಕೊಂಡಳು.

ಸೀತಾರಾಮಯ್ಯ ಸತ್ತು ಹದಿನೈದುದಿನ ಕಳೆದಿದ್ದರೂ, ಆಗಲೇ ಗಂಡ ನನ್ನು ಕಳೆದುಕೊಂಡಂತೆ ದುಃಖದಲ್ಲಿ ಬೇಯುತ್ತಿದ್ದ ರತ್ನಮ್ಮನ ಮುಖ ನೋಡಿ ದರೆ, ಯಾರಿಗೂ ಅವಳ ಮುಂದೆ ಏನು ಮಾತಾಡುವುದಕ್ಕೂ ಮನಸ್ಸು ಬರು ತ್ತಿರಲಿಲ್ಲ. ವ್ಯವಹಾರದ ವಿಷಯ ಮಾತಾಡುವುದಿರಲಿ, ಸಮಾಧಾನ ಹೇಳ ಬಂದವರೂ ಅವಳ ದುಃಖದ ಬೇಗೆಯಲ್ಲಿ ಕರಗಿ ಕಣ್ಣೀರಿನ ಚಿಲುಮೆಯಾ ಗುತ್ತಿದ್ದರು. ಹಾಗಿರುವಾಗ ‘ ನಿನ್ನ ಪಾಲಿಗೆ ಗಂಡನೊಬ್ಬನೇ ಅಲ್ಲ ಇಲ್ಲವಾ ದದ್ದು. ಅವನ ಹೆಸರಿರುವ ಆಸ್ತಿಯೂ ನಿನಗೆ ಉಳಿಯುವುದಿಲ್ಲ. ವಿಧಿ ಗಂಡ ನನ್ನು ಕಿತ್ತುಕೊಂಡ. ಆಸ್ತಿಯನ್ನು ನೀನೇ ಬಿಟ್ಟುಬಿಡಬೇಕು ’ ಎನ್ನುವ ಉರಿಮಾತನ್ನು ಅವಳಿಗೆ ಹೇಗೆ ಹೇಳುವುದು ಎಂದು ಚಿಂತಿಸಿ, ಚಿಂತಿಸಿ, ಆ ಚಿಂತೆಯಲ್ಲೇ ಹಣ್ಣಾಗಿ, ತನ್ನ ಮಾತಿಗೆ ತಾನೇ ಹೆದರುತ್ತಾ, ಹೇಸುತ್ತಾ, ಮೂರು ದಿಕ್ಕಿನಲ್ಲೂ ಬೆಂಕಿಯಾವರಿಸಿಕೊಂಡು ಬಂದ ಪಶು, ಬೇರೆ ದಾರಿಯೇ ಕಾಣದೆ, ಕುರುಡಾಗಿ, ಬೇಟೆಯಗಾರರು ಕಾದಿರುವ ದಾರಿಯಲ್ಲೇ ನುಗ್ಗುವಂತೆ, ಆ ವಿಷಯ ತನ್ನ ಮಗಳ ಮುಂದೆ ಪ್ರಸ್ತಾಪ ಮಾಡಿದಳು—ಬೇರೆ ಏನೋ ಮಾತು ಎತ್ತಿಕೊಂಡು.

‘ ಏಳು ರತ್ನಕ್ಕ—ಸುಮ್ಮನೆ ಹೀಗೆ ಮಲಗಿಬಿಟ್ಟರೆ ಹೇಗೆ ? ’

—ಎದೆಯ ಕಂಬನಿಯಲ್ಲಿ ತೊಯ್ದು ಮೃದುವಾದ ಧ್ವನಿಯಲ್ಲಿ, ಬರೀ

ನೆಲದ ಮೇಲೆ ಮಲಗಿದ ಮಗಳನ್ನು ನೇವರಿಸಿ ಹೇಳಿದಳು ಸೀತಮ್ಮ. ಆದರೆ ರತ್ನಮ್ಮ ತಾಯಿಯ ಮಾತಿಗೆ ಏನೂ ಉತ್ತರ ಕೊಡಲಿಲ್ಲ. ಆದರೆ ಮಾತೃಹಸ್ತಸ್ಪರ್ಶದಿಂದ, ಜಡವಾಗಿದ್ದ ದುಃಖ ಮತ್ತೆ ಸಚೇತವಾಗಿ, ರತ್ನಮ್ಮ ಪುನಃ ಅಳಲಾರಂಭಿಸಿದಳು.

'ಸುಮ್ಮನೆ ಎಷ್ಟುದಿನಾಂತ ಹೀಗೆ ಅಳ್ತೀಯ ರತ್ನಕ್ಕ. ಅದೃಷ್ಟದಲ್ಲಿದ್ದದ್ದಾಯಿತು. ಈ ದುಃಖಾನೆಲ್ಲಾ ಮರೀಬೇಕಮ್ಮ.'

'ಹೇಗೆ........ಹೇಗೆ........ಮರೀಲಮ್ಮ........'

—ಬಿಕ್ಕಿ ಬಿಕ್ಕಿ ಅಳುತ್ತಾ ಕೇಳಿದಳು ರತ್ನಮ್ಮ.

'ಹೇಗೆ ಅಂದರೆ........ಏನು ಹೇಳಲಿ ರತ್ನಕ್ಕ. ಹೇಗಾದರೂ ಮರೀಬೇಕಮ್ಮ. ಲೋಕದಲ್ಲಿ ನಿನ್ನಹಾಗೆ ದುಃಖಕ್ಕೆ ಸಿಕ್ಕಿದೋರು ಎಷ್ಟು ಜನ ಇಲ್ಲಾ ಹೇಳು. ಅವರನ್ನೆಲ್ಲಾ ನೋಡಿಕೊಂಡು ನಮ್ಮ ದುಃಖ ಮರೀಬೇಕು. ನೀನು ಹೀಗೆ ಅಳ್ತಾ ಮಲಗಿಬಿಟ್ಟರೆ, ಆ ಮಗೂನ ನೋಡಿಕೊಳ್ಳೋರು ಯಾರು ಹೇಳು. ನೀನಾದರೂ ನಿನ್ನ ದುಃಖವಾದರೂ ಹೇಳಿಕೊಳ್ತೀಯ. ಮಾತು ಬರದ ಮಗು ಯಾರ ಮುಂದೆ ಹೇಳಿಕೊಳ್ಳಬೇಕು? ಅದರ ಗೋಳು ಕೇಳೋರು ಯಾರು? ನೀನು ಒಂದು ಗಳಿಗೆ ಅದನ್ನ ಎತ್ತಿಕೊಂಡು ಸಮಾಧಾನ ಮಾಡಿದರೆ, ಆ ಜೀವಕ್ಕೂ ತಂಪಾಗುತ್ತೆ. ಅದರ ಮುಖನೋಡಿ ನೀನು ಆ ದುಃಖ ಮರೀಬೇಕು. ನೀನು ಇಪ್ಪತ್ತನಾಲ್ಕು ಗಂಟೆಯೂ ಅಳುತ್ತಾ ಕೂತರೆ, ಅದೂ ಅತ್ತು ಅತ್ತು ಬಡವಾಗುತ್ತೆ. ಹಾಗೆ ಮಾಡಿದರೆ ಸ್ವರ್ಗದಲ್ಲಿರೊ ನಿನ್ನ ಗಂಡನಿಗೂ ನೋವಾಗುತ್ತೆ. ಎಲ್ಲಾ ತಿಳಿದೊಳು, ನಿನಗೆ ನಾನು ಹೇಳಬೇಕೇ ರತ್ನಾ, ಏಳು. ಎಷ್ಟು ದಿನ ಅತ್ತರೆ ತಾನೇ ಈ ದುಃಖ ತೀರುತ್ತೆ? ಇದು ಜೀವಕ್ಕಂಟಿದ ಬೆಂಕಿ. ನೀನಿರೋವರೆಗೂ ಈ ದುಃಖ ತಪ್ಪಿದ್ದಲ್ಲ ಹಾಗಂತ ಆ ಕೂಸನ್ನು ಬಳಲಿಸಬಹುದೇ? ಅದನ್ನು ನೋಡಿಕೊಂಡು ಈ ದುಃಖ ಮರೀಬೇಕು. ಅವನಿಗೋಸ್ಕರ ನಿನ್ನ ದುಃಖ ಮರೆತು, ನಗುನಗುತ್ತಾ ಇರಬೇಕು.'

'ಹೊಟ್ಟೇಲಿ ಈ ಬೆಂಕಿ ಇಟ್ಟುಕೊಂಡು ಹೇಗಮ್ಮಾ ನಗಲಿ?'

'ಅದೇ ಪ್ರಪಂಚ ಕಣೇ ಹುಚ್ಚಿ. ನಮ್ಮ ಹೊಟ್ಟೇಲಿ ಕೆಂಡ ಹುಯ್ದುಕೊಂಡೂ, ಇತರರಿಗೆ ಯಾಕೆ ನಮ್ಮ ದುಃಖದ ಬೆಂಕಿ ಹಚ್ಚಬೇಕು ಅಂತ

ನಗುನಗ್ತಾ ಇರಬೇಕು. ಅದು ಬಿಟ್ಟು, ನಾವೂ ಅತ್ತು, ಸುತ್ತಲಿರೋರೂ ಅಳೋ ಹಾಗೆ ಮಾಡಿದರೆ ಹೋದ ವಸ್ತು ಬರುತ್ತದೆಯೇ? ಎಲ್ಲಾ ಭ್ರಾಂತಿ ಈ ಸಂಸಾರವೇ ಅಷ್ಟು. ಮೂರು ದಿನದ ಕನಸು. ಇಲ್ಲದ ಕಷ್ಟ, ಸುಖ, ದುಃಖ, ಯಾವುದನ್ನೂ ಅಷ್ಟು ಹಚ್ಚಿಕೊಂಡು ನವೆಯಬಾರದು. ನಾವೆಲ್ಲಾ ಸಂತೆಗೆ ಬಂದು ಹೋಗುವವರಹಾಗೆ.'

—ಎಂದು ಮಗಳ ಕುದಿವ ದುಃಖಕ್ಕೆ ತಂಪೆರೆಯಲು ಯತ್ನಿಸಿದಳು. ಆದರೆ ಆ ಮಾತು ಪರಿಣಾಮಕಾರಿಯಾಗಬಹುದು ಎಂಬ ನಂಬಿಕೆ ಸೀತಮ್ಮ ನಿಗೇ ಇರಲಿಲ್ಲ. ಹಾಗೇ ಮಾತನ್ನು ಮುಂದವರಿಸಿ—

'ಈಗ ನೀನು ಅವನ್ನೆಲ್ಲಾ ಹಚ್ಚಿಕೊಂಡು ಕೊರಗುವ ಕಾಲ ಅಲ್ಲ ರತ್ನ, ನೀನು ಒಬ್ಬಳೇ ಆಗಿದ್ದರೆ ಏನು ಮಾಡಿದ್ದರೂ ಆಗುತ್ತಿತ್ತು. ನೀನು ಒಂಟಿಯಲ್ಲ, ಮಗುವಿನ ತಾಯಿ. ಅದರ ಯೋಗಕ್ಷೇಮ, ಭವಿಷ್ಯದ ಯೋಚನೆ ಮಾಡಬೇಕು. ಮುಂದೆ ಏನು ಮಾಡಬೇಕು, ಎಲ್ಲಿರಬೇಕು ಅನ್ನೋ ಆಲೋಚನೆ ಮಾಡಬೇಕು. ಅದೆಲ್ಲಾ ಮುಂದಿಟ್ಟುಕೊಂಡು ಹೀಗೆ ಮಲ ಗಿದರೆ ಏನಾದಹಾಗೆ ಹೇಳು ? '

—ಎಂದಳು ಸೀತಮ್ಮ.

'ನಾವು ಅಂದುಕೊಂಡ ಕೆಲಸ ಯಾವುದಾಗುತ್ತೆ ಹೇಳು. ಯಾವುದು ಹೇಗಾಗಬೇಕೋ ಹಾಗಾಗಲಿ. ಹೀಗಾಗಲಿ, ಹಾಗಾಗಲಿ ಅಂದುಕೊಂಡು ಏನಾಗಬೇಕಾಗಿದೆ.'

'ಆದರೂ ಯೋಚನೆ ಮಾಡೋದು ನಮ್ಮ ಕರ್ತವ್ಯ.'

'ನನಗೇನೂ ತೋಚಲ್ಲ ಅಮ್ಮ. ಹೇಗೂ ನೀನಿದೀಯ, ಅಪ್ಪ ಇದಾನೆ. ಕಮಲತ್ತೆ, ಮಾವಯ್ಯ, ರಾಘಣ್ಣ ಎಲ್ಲರೂ ನನಗೆ ಹಿರಿಯ ರಾಗಿದಾರೆ. ನಿಮಗೆ ಏನು ಬೇಕೋ ಮಾಡಿಕೊಳ್ಳಿ.'

'ರಾಘಣ್ಣ ಅವರು ಎಲ್ಲಾ ಕೂತುಕೊಂಡು ಏನೋ ಒಂದು ನಿರ್ಧಾ ರಕ್ಕೆ ಬಂದಿದಾರೆ. ನೀನೂ ಅದಕ್ಕೆ ಒಪ್ಪಿದರೆ ಸಂತೋಷ.'

'ಯಾವ ವಿಷಯದಲ್ಲಿ ?'

'ಮುಂದೆ ನೀನು ಎಲ್ಲಿರಬೇಕು ಎಂಬ ವಿಷಯದಲ್ಲಿ'

'ಅಂದರೆ....'

—ತಾಯಿಯ ಮಾತು ಅರ್ಥವಾಗದೆ ಕೇಳಿದಳು ರತ್ನಮ್ಮ.

' ಈಗ ಹೀಗಾಗಿಹೋಯಿತು. ಕಣ್ಣಿಲ್ಲದ ದೇವರು ನಿನ್ನ ತಲೇ ಮೇಲೆ ಚಪ್ಪಡಿ ಎಳೆದುಬಿಟ್ಟ. ಮುಂದೆ ನೀನು ಇಲ್ಲಿರಬೇಕೇ ಅಥವಾ ನಮ್ಮ ಜೊತೇಲಿರಬೇಕೇ ಅನ್ನೋ ವಿಷಯವಲ್ಲಿ....'

'ಆ ವಿಷಯದಲ್ಲಿ ಚರ್ಚೆ ಏನು ಬಂತು. ಅದು ಯಾವತ್ತೋ ನಿರ್ಧಾರ ವಾಗಿ ಹೋಗಿದೆಯಲ್ಲ.'

' ಹಾಗಂದರೆ ಏನೇ....'

—ರತ್ನಮ್ಮ ಆಡಿದ ಮಾತು ಕೇಳಿ ಸೀತಮ್ಮ ಚಕಿತಳಾಗಿ ಕೇಳಿದಳು.

' ದೇವರೇ ನನ್ನ ತಂದು ಈ ಮನೇಲಿಟ್ಟ. ಇನ್ನು ಬೇರೆ ಕಡೆ ಹೋಗೋ ಮಾತೆಲ್ಲಿ ಬಂತು.'

—ರತ್ನಮ್ಮ ನಿರ್ಧಾರದ ಧ್ವನಿಯಲ್ಲಿ ಹೇಳಿದಳು.

' ಆದರೆ ಅದಕ್ಕೆ ನೂರೆಂಟು ತೊಂದರೆ ಇದೆಯಲ್ಲ.'

' ಏನು ತೊಂದರೆ....'

' ಎಲ್ಲಕ್ಕಿಂತ ಹೆಚ್ಚಾಗಿ ನೀನು ಆ ಮಗೂನೂ ಕಟ್ಟಿಕೊಂಡು ಒಂಟಿ ಯಾಗಿರೋದು ಸಾಧ್ಯವೇ?'

' ದೇವರೇ ಒಂಟಿಯಾಗಿರಬೇಕು ಅಂತ ಹೇಳಿದ ಮೇಲೆ ಬೇರೇನು ದಾರಿ? ನಾನು ಹೀಗಿರಬೇಕೂಂತ ಅವನ ಮನಸ್ಸಿನಲ್ಲಿತ್ತು. ಅದನ್ನು ಹಾಗೇ ನಡಸಿಕೊಂಡ.'

' ಅಂದರೆ ಇಲ್ಲೇ ಇರೋದು ಅಂತೀಯ....'

' ಹೂ. ಅಲ್ಲದೆ ನನಗಿಲ್ಲಿರೋಕೆ ಬಂದಿರೋ ಭಯ ಏನು? ಏನಾ ದರೂ ಆದರೆ ಕಮಲತ್ತೆ ಇದಾಳೆ, ರಾಘಣ್ಣ ಇದಾನೆ.'

' ಅವರೆಲ್ಲರೂ ಇದಾರೆ. ನಿಜ. ಆದರೂ....'

' ಏನು ಆದರೂ....'

ಮಗಳ ಪ್ರಶ್ನೆ ಕೇಳಿ ತುಂಬಾ ಕಹಿಯಾದ ಗಂಡನ ಸಾಲದ ಮಾತನ್ನು ಮಗಳ ಮುಂದೆ ಹೇಗೆ ಹೇಳುವುದು ಎಂದು ಚಿಂತಿಸಿ, ಚಿಂತಿಸಿ, ಕಡೆಗೆ ಅದನ್ನು ಹೇಳದೆ ಇರಲು ಬೇರೆ ದಾರಿಯೇ ಕಾಣದೆ—

' ಆದರೂ ಅದಕ್ಕೆ ತೊಂದರೆ ಇದೆ ರತ್ನ.'

—ಎಂದಳು, ಆ ಮಾತು ಹೇಳುವಾಗ ಮಗಳ ಮೋರೆ ನೋಡಲಾಗದೆ ಬೇರೆ ಎತ್ತಲೋ ನೋಡುತ್ತಾ.

'ಮತ್ತೇನು ತೊಂದರೆ?'

—ರತ್ನಮ್ಮ ಕೇಳಿದಳು.

ನಿಧಾನವಾಗಿ, ತಡೆತಡೆದು, ಸೀತಮ್ಮ, ಸೀತಾರಾಮಯ್ಯನ ಸಾಲಗಳ ವಿಷಯ, ಅದಕ್ಕಾಗಿ ಆತನ ಇದ್ದಬದ್ದ ಆಸ್ತಿಯನ್ನು ಮಾರಿ ಸಾಲ ತೀರಿಸಿ, ರತ್ನಮ್ಮನನ್ನು ತನ್ನೊಂದಿಗೆ ಕೆರೆಸಂತೆಹಳ್ಳಿಗೆ ಕರೆದೊಯ್ಯಲು ಲಕ್ಷ್ಮಣರಾಯ ನಿರ್ಧರಿಸಿದುದು ಎಲ್ಲವನ್ನೂ ಹೇಳಿದಳು. ಆ ಮಾತನ್ನು ಕೇಳಿ ಗರ ಬಡಿದಂತಾದಳು ರತ್ನಮ್ಮ. ಅಷ್ಟುಹೊತ್ತು ಅವಳಿಗೆ ಏನೂ ಮಾತಾಡಲು ತೋಚಲಿಲ್ಲ. ಹೆಜ್ಜೆ ಹೆಜ್ಜೆಗೆ ಒಳಗೆ ಎಳೆದುಕೊಳ್ಳುವ ಕಳ್ಳ ಉಸುಗಿನಮೇಲೆ ನಡೆಯುವವಳಂತಿತ್ತು ಅವಳಸ್ಥಿತಿ. ಪತಿಯ ಸಾವಿನ ಭಯಂಕರ ಆಘಾತದಿಂದ ಚೇತರಿಸಿಕೊಳ್ಳುವ ಮುನ್ನವೇ ಸಾಲದ ಸಿಡಿಲು ತನ್ನ ನೆತ್ತಿಯಮೇಲೆ ಎರಗಬಹುದು ಎಂದು ರತ್ನಮ್ಮ ಕನಸುಮನಸಿನಲ್ಲಿಯೂ ನಿರೀಕ್ಷಿಸಿರಲಿಲ್ಲ. ಗಂಡನ ಔದಾರ್ಯ ತನ್ನ ಕತ್ತಿಗೆ ಈ ಬಗೆಯ ಉರುಲಾಗಬಹುದೆಂದು ಎಂದೂ ಊಹಿಸಿರಲಿಲ್ಲ ರತ್ನಮ್ಮ. ಎಂತಲೇ ತಾಯಿ ಹೇಳಿದುವನ್ನೆಲ್ಲಾ ಯಾವುದೋ ಕನಸಿನಲ್ಲಿದ್ದಂತೆ ಕೇಳಿದಳು. ಆಕೆ ಹೇಳಿದುದೆಲ್ಲವನ್ನು ಕೇಳಿಯಾದಮೇಲೆ, ಅಷ್ಟು ಹೊತ್ತು ಸುಮ್ಮನಿದ್ದು, ಬಳಿಕ—

'ಅಪ್ಪ ರಾಘಣ್ಣನ ಮುಂದೆ ಈ ವಿಚಾರ ಹೇಳಿದನೇ?'

—ಎಂದು ಕೇಳಿದಳು.

'ಹೂ. ಹೇಳಿದರು.'

'ರಾಘಣ್ಣ ಏನು ಹೇಳಿದ?'

'ಇನ್ನೇನು ತಾನೆ ಹೇಳೋಕೆ ಸಾಧ್ಯ?'

'ಅಂದರೆ....ಅಂದರೆ....ರಾಘಣ್ಣನೂ ಇದಕ್ಕೆ ಒಪ್ಪಿದನೆ?'

—ಸೀತಮ್ಮ ಹೇಳಿದುದನ್ನು ನಂಬಲಾಗದವಳಂತೆ ಕೇಳಿದಳು ರತ್ನಮ್ಮ.

'ಹೂ., ರಾಘಣ್ಣ ಒಪ್ಪಿದ ಮೇಲೇ ಅವರು ನನ್ನನ್ನು ನಿನ್ನ ಹತ್ತಿರ ಕಳಿಸಿದ್ದು.'

'ಅಂದರೆ....ನಾನು ಈ ಊರಿನ ಋಣ ಪೂರಾ ಹರಿಸಿಕೊಂಡು ಹೋಗಬೇಕು ಅಂತಲೇ ನಿಮ್ಮ ಅಭಿಪ್ರಾಯವೇ ?'

'ಸದ್ಯಕ್ಕೆ ಅದಲ್ಲದೆ ಬೇರೆ ದಾರೀನೇ ಇಲ್ಲವಲ್ಲೇ ರತ್ನಾ. ಆ ಮಾತು ಹೇಳೋಕೆ ನನಗೂ ಗಂಟಲು ಹಿಡಿಯುತ್ತೆ. ಆದರೆ ಏನು ಮಾಡೋದು ಹೇಳು ? ದೇವರು ನಮಗಾದರೂ ದುಡ್ಡು ಕೊಟ್ಟಿದ್ದರೆ, ಇದನ್ನು ತೀರಿಸಿ, ಅಳಿಯನ ಆಸ್ತಿ ಇರಲಿ ಅಂತ ಉಳಿಸಿಕೊಳ್ಳಬಹುದಾಗಿತ್ತು. ಆದರೆ ದೇವರು ನಮಗೆ ಆ ಚೈತನ್ಯ ಕೊಡಲಿಲ್ಲ. ಈಗಲೇ ರಾಘಣ್ಣನಿಗೆ ಸಾಕಷ್ಟು ಖರ್ಚಾಗಿದೆ. ಅವನ್ನೂ ಹಿಂದಿರುಗಿಸಿ ಕೊಡುವ ಶಕ್ತಿಯು ನಮಗಿಲ್ಲ. ಇನ್ನು ಈ ಭಾರಾನೂ ನೀನೇ ಹೊತ್ತುಕೋ ಅಂತ ಹೇಗೆ ಹೇಳೋದು? ಹೀಗಿರೋವಾಗ, ಇದ್ದದ್ದರಲ್ಲೇ ಮರ್ಯಾದೆಯಾಗಿ ಸಾಲಸೋಲ ತೀರಿಸಿಕೊಂಡು ನಮ್ಮ ಪಾಡಿಗೆ ನಾವಿರೋದು ಮೇಲಲ್ಲವೇ? ಮಹಾರಾಯ ಇರೋ ಅಷ್ಟು ದಿನ ಎಲ್ಲರ ಕೈಲೂ ಹೊಗಳಿಸಿಕೊಂಡು ಹೋದ. ಈಗ ಆತನ ಹೆಸರು ಬೀದಿಗೆ ಏಕೆ ಬರಬೇಕು ? '

ಬೆಟ್ಟದ ಭಾರವನ್ನು ನೆತ್ತಿಯ ಮೇಲೆ ಹೊತ್ತಂತೆ, ತಲೆ ತಗ್ಗಿಸಿ ರತ್ನಮ್ಮ ತಾಯಿ ಹೇಳಿದ ಮಾತೆಲ್ಲವನ್ನೂ ಕೇಳಿದಳು. ಏನೂ ಮಾತಾಡಲಿಲ್ಲ. ತನ್ನ ಮಾತು ಮುಗಿದ ಮೇಲೂ ಮಗಳು ಉತ್ತರ ಕೊಡದೆ ಸುಮ್ಮನಿದ್ದುದನ್ನು ಕಂಡು—

'ಏನು ರತ್ನ, ಅವರಿಗೆ ಏನು ಹೇಳಲಿ ? '

—ಎಂದು ಪುನಃ ತಾನೇ ಕೇಳಿದಳು ಸೀತಮ್ಮ.

'ನನಗೆ ಏನು ಹೇಳೋಕೂ ತೋಚ್ತಾ ಇಲ್ಲ ಅಮ್ಮ. ನನ್ನ ಬುದ್ಧಿಗೇಕೋ ಮಂಕುಹಿಡಿದು ಹೋಗಿದೆ. ರಾಘಣ್ಣ ಎಲ್ಲಿದ್ದಾನೆ....'

'ಅವನ ಮನೇಲಿರಬಹುದು. ಅಥವಾ ಎಲ್ಲಾದರೂ ಹೊರಗೆ ಕೆಲಸದ ಮೇಲೆ ಹೋಗಿರಬಹುದು. ಏಕೆ ? '

'ರಾಘಣ್ಣ ಬಂದರೆ ನಾನು ನೋಡಬೇಕು ಅಂದೇಂತ ಹೇಳು. ರಾಘಣ್ಣ ಬಂದಮೇಲೆ ಅವನ ಹತ್ತಿರ ಮಾತಾಡಿ ಮುಂದೆ ಏನು ಮಾಡೋದೂಂತ ಹೇಳ್ತೀನಿ.'

'ಹಾಗೇ ಮಾಡು. ಆದರೆ ರಾಘಣ್ಣನನ್ನು ಸುಮ್ಮನೆ ಯಾವ ಇರು

ಕಿಗೂ ಸಿಕ್ಕಿಸಬೇಡ. ಯಾರ ಒಳ್ಳೇತನಾಸೂ ಬಹಳ ಪರೀಕ್ಷೆ ಮಾಡ ಬಾರದು '

—ಎಂದು ಮಗಳಿಗೆ ಬುದ್ಧಿವಾದ ಹೇಳಿದಳು ಸೀತಮ್ಮ.

' ಹೂ. ರಾಘಣ್ಣ ಬಂದರೆ ಕಳಿಸಲಿಕ್ಕೆ ಮರೀಬೇಡ '

—ಎಂದು ಮಾತನ್ನು ಮುಗಿಸಿದಳು ರತ್ನಮ್ಮ.



‘ರತ್ನ ನಿನ್ನನ್ನು ನೋಡಿ ಏನೋ ಮಾತಾಡಬೇಕಂತೆ ರಾಘಣ್ಣ’

—ಎಂದು ಸೀತಮ್ಮ ಹೇಳಿದುದನ್ನು ಕೇಳಿ ರಾಘವೇಂದ್ರರಾಯ ಚಕಿತನಾದ.

‘ ಏಕಂತೆ?’

‘ ಏನೋಪ್ಪ ನನಗೆ ತಿಳಿಯದು. ಅವರು ನೀನು ಕೂತುಕೊಂಡು ಮಾತಾಡಿದ ವಿಚಾರ ಅವಳಿಗೆ ಹೇಳಿದೆ. ಅದಕ್ಕೇ ನಿನ್ನನ್ನು ನೋಡಬೇಕು ಎಂದಳು.’

‘ ನೀನು ಹೇಳಿದ್ದಕ್ಕೆ ಏನು ಹೇಳಿದಳು ? ’

‘ ನಿನ್ನ ಹತ್ತಿರ ಮೊದಲು ಮಾತಾಡ್ತೀನಿ ಅಂದಳು.’

‘ ಎಲ್ಲಿದಾಳೆ ? ’

‘ ಒಳಗಿನ ಕೋಣೇಲಿ.’

‘ ಸರಿ ಹಾಗಾದರೆ ನಾನು ಹೋಗಿ ನೋಡ್ತೀನಿ ’

‘ ನಮ್ಮ ಮಾತಿಗಂತೂ ಅವಳು ಒಪ್ಪೋಹಾಗೆ ಕಾಣೋಲ್ಲ. ನಿನ್ನ ಮಾತಿಗಾದರೂ ಒಪ್ಪಬಹುದೋ ಏನೊ ವಿಚಾರಿಸಿ ನೋಡು. ಈ ಹೊತ್ತಿನಲ್ಲಿ ನನಗಂತೂ ಅವಳಿಗೆ ಬಲವಂತವಾಗಿ ಏನು ಹೇಳುವುದಕ್ಕೂ ಇಷ್ಟವಿಲ್ಲ.’

‘ ಆಗಲಿ, ಮಾತಾಡಿ ನೋಡ್ತೀನಿ ’

—ಎಂದ ರಾಘವೇಂದ್ರರಾಯ. ಆದರೆ ನೆಲಕ್ಕೆ ಅಂಟಿದ ಕಾಲು ಅಲ್ಲಿಂದ ಏಳಲು ಒಪ್ಪಲಿಲ್ಲ.

ರಾಘವೇಂದ್ರರಾಯ ರತ್ನಮ್ಮನನ್ನು ಸೀತಾರಾಮಯ್ಯ ಸತ್ತದಿನದಿಂದ ಹೆಚ್ಚಾಗಿ ನೋಡಿರಲಿಲ್ಲ. ಹೆಚ್ಚಾಗಿ ಮಾತೂ ಆಡಿಸಿರಲಿಲ್ಲ. ಅವಳನ್ನು ನೋಡಬೇಕು ಮಾತಾಡಿಸಬೇಕು ಎಂದರೇ ಅವನ ಕರುಳು ಕಿತ್ತುಬರುವ ಹಾಗಾಗುತ್ತಿತ್ತು. ದೂರದಲ್ಲಿ ಅವಳು ಕಣ್ಣಿಗೆ ಬಿದ್ದಾಗಲೂ ಬೇಡ ಬೇಡ ವೆಂದರೂ ಅವನ ಕಣ್ಣು ತೇವವಾಗುತ್ತಿತ್ತು. ಮುತ್ತೈದೆಯ ಅಲಂಕಾರ ರಹಿತಳಾದ ರತ್ನಮ್ಮನನ್ನು ನೋಡಿದಾಗ ಅವನ ಕಣ್ಣಿಗೆ, ರೆಕ್ಕೆಪುಕ್ಕಗಳನ್ನು ಕತ್ತರಿಸಿ, ಧೂಳಿನಲ್ಲಿ ಒಗೆದ ಹಕ್ಕಿಯನ್ನು ಕಂಡಂತಾಗಿ, ಹೊಟ್ಟೆಯಲ್ಲಿ ಕತ್ತರಿ ಯಾಡಿಸಿದಂತಾಗುತ್ತಿತ್ತು. ನೋಡುವಾಗಲೇ ಹೀಗಾಗುವಾಗ, ಇನ್ನು ಮಾತನಾಡಿಸಬೇಕೆಂದರೆ—ಅಪಾರ ಪ್ರಯತ್ನದಿಂದ ಹತೋಟಿಯಲ್ಲಿಟ್ಟು ಕೊಂಡ ದುಃಖ, ಎಲ್ಲ ಹತೋಟಿಯನ್ನೂ ಮೀರಿ ಹೊರನುಗ್ಗುವುದೆಂದು ಅವನಿಗೇ ಗೊತ್ತಿತ್ತು. ಆದ್ದರಿಂದಲೇ ಅಂದಿನವರೆಗೂ ಆದಷ್ಟುಮಟ್ಟಿಗೆ ರತ್ನಮ್ಮನನ್ನು ನೋಡುವ, ಆಕೆಯೊಂದಿಗೆ ಮಾತನಾಡುವ ಅವಕಾಶವನ್ನು ತಪ್ಪಿಸಿಕೊಳ್ಳುತ್ತಿದ್ದ. ಆದರೆ ಈಗ ಅನಿವಾರ್ಯವಾಗಿ ನೋಡಲೇಬೇಕಾಗಿ ಬಂದಿತ್ತು. ಕಠೋರ ಕರ್ತವ್ಯದಿದಿರು ತಲೆ ಬಾಗಿಸಿ, ಹಿಂಜರಿಯುತ್ತಿದ್ದ ಕಾಲುಗಳನ್ನು ಬಲವಂತನಾಗಿ, ರತ್ನಮ್ಮ ಇದ್ದ ಕೋಣೆಯತ್ತ ನಡೆಸಿದ.

ಹೋಗುವಾಗ ರತ್ನಮ್ಮ ಹೇಗಿರಬಹುದು, ತನ್ನನ್ನು ಕಂಡ ಕೂಡಲೇ ದುಃಖದ ಉದ್ವೇಗದಿಂದ ಏನು ಹೇಳಬಹುದು, ಆ ಹೊತ್ತಿನಲ್ಲಿ ತಾನು ಏನು ಮಾತಾಡಬೇಕು, ಅವಳು ಕಂಬನಿಯ ಹೊಳೆಯಲ್ಲಿ ಕೊಚ್ಚಿಹೋಗುತ್ತಿರು ವಾಗ ತಾನು ಮಾತ್ರ ಅದರ ಸೆಳವಿಗೆ ಸಿಕ್ಕದೆ, ಅವಳಿಗೆ ಸಮಾಧಾನ ಹೇಳ ಬೇಕು, ಧೈರ್ಯಹೇಳಬೇಕು—ಎಂದೆಲ್ಲಾ ನೂರೆಂಟು ಲೆಕ್ಕಾಚಾರ ಹಾಕಿ ಕೊಂಡು ಹೋದ.

ಆದರೆ ಅಲ್ಲಿ ಹೋದಾಗ ಅದಾವುದೂ ಕೆಲಸಕ್ಕೆ ಬರಲಿಲ್ಲ.

ರಾಘವೇಂದ್ರರಾಯ ಕೋಣೆಯ ಬಳಿ ಬಂದಾಗ, ರತ್ನಮ್ಮ ಮಗನನ್ನು ಪಕ್ಕದಲ್ಲೇ ಮಲಗಿಸಿಕೊಂಡು, ಚಾಪೆಯ ಮೇಲೆ ಮಲಗಿದ್ದಳು. ನಿದ್ರೆ ಬಂದಿದೆಯೇನೊ, ನಿದ್ರೆಬಂದಿದ್ದರೆ ಅದನ್ನು ಕೆಡಸಬಾರದು ಎಂದುಕೊಂಡು, ಮೃದುವಾದ ಧ್ವನಿಯಲ್ಲಿ—

'ರತ್ನಕ್ಕಾ'

—ಎಂದು ಕೂಗಿದ.

' ಬಾ ರಾಘಣ್ಣ, ಕೂತುಕೊ ಬಾ '

—ಎಂದು ಅವನು ಕೂಗುತ್ತಿದ್ದ ಹಾಗೇ ಉತ್ತರ ಕೊಟ್ಟಳು ರತ್ನಮ್ಮ.

' ನಿದ್ರೆ ಬಂದಿತ್ತೇನೊ ಮಲಕ್ಕೊ ರತ್ನಕ್ಕ. ಇನ್ನೊಂದು ಸ್ವಲ್ಪ ಹೊತ್ತೂ ಬಿಟ್ಟುಕೊಂಡು ಬೇಕಾದರೆ ಬರುತ್ತೇನೆ.'

' ನನಗೆ ನಿದ್ರೇನೇ—ಆ ಕಾಲ ಇನ್ನೂ ಬಂದಿಲ್ಲ. ನಾರಾಯಣ ಇಷ್ಟು ಹೊತ್ತು ಹಟಮಾಡ್ತಾ ಇದ್ದ, ಅವನನ್ನು ಮಲಗಿಸಬೇಕೂಂತ ಹಾಗೇ ಪಕ್ಕ ದಲ್ಲಿ ಮಲಗಿಕೊಂಡೆ. ಕೂತುಕೊ ಬಾ. ಅಲ್ಲಿ ಚಾಪೆ ಇದೆ ನೋಡು, ಎಳದುಕೊ '

—ಎಂದು ಹೇಳಿ ತಾನೂ ಎದ್ದು, ಕೆದರಿದ ಬಟ್ಟೆಯನ್ನು ಸರಿಪಡಿಸಿ ಕೊಂಡು ಎದ್ದಾಗ ಕೊಂಚ ಅಲುಗಾಡಿದ ಮಗುವನ್ನು ತಟ್ಟುತ್ತಾ ಕುಳಿತು ಕೊಂಡಳು.

ರತ್ನಮ್ಮನ ಮುಖವನ್ನು ನೊಡಲಾಗದೆಯೇ ತಲೆತಗ್ಗಿಸಿ ಕುಳಿತು ಕೊಂಡಿದ್ದ ರಾಘವೇಂದ್ರರಾಯ, ರತ್ನಮ್ಮನೇ ಮಾತು ಆರಂಭಿಸಬಹುದೆಂದು ತಿಳಿದು ಸ್ವಲ್ಪ ಹೊತ್ತು ಕಾದ. ಆದರೆ ರತ್ನಮ್ಮ ಮಾತು ಆರಂಭಿಸದಿದ್ದು ದನ್ನು ಕಂಡು ತಾನೇ—

' ಏನು ರತ್ನಕ್ಕ ನೋಡಬೇಕೂಂದೆಯಂತೆ.'

—ಎಂದು ಮಾತಿಗೆ ಮೊದಲಿಟ್ಟ.

' ನಿನಗಂತೂ ನಾನಿರೋದೇ ಮರೆತು ಹೋಯಿತು. ಮತ್ತೇನು ಮಾಡಲಿ ರಾಘಣ್ಣ. ಅದಕ್ಕೇ ನಾನೇ ಹೇಳಿ ಕಳಿಸಿದೆ. ಹೋಗಲಿ. ಈಗಲಾ ದರೂ ಬಂದೆಯಲ್ಲ. ಅಷ್ಟೇ ಸಂತೋಷ '

—ಎಂದಳು ರತ್ನಮ್ಮ ನಿರ್ಜೀವವಾದ ಸ್ವರದಲ್ಲಿ. ಆ ಮಾತು ಕೇಳಿ ರಾಘವೇಂದ್ರರಾಯನಿಗೆ ಏಕೋ ತಟಕ್ಕನೆ ಕಪಾಳಕ್ಕೆ ಹೊಡೆದಹಾಗಾಗಿ, ಕಣ್ಣಿನಲ್ಲಿ ನೀರುತುಂಬಿತು.

' ಇ....ಇ.....ಇದೆಂಥ ಮಾತು ರತ್ನಕ್ಕ....ನಾನೇ....ನಿನ್ನ .... ಮರೆ ಯೋದು....'

—ದುಃಖಭಾರದಿಂದ ಬಿಗಿದ ಕಂಠದಲ್ಲಿ ಕೇಳಿದ ರಾಘವೇಂದ್ರರಾಯ.

'ಮರೆತರೆ ತಾನೇ ಏನು ತಪ್ಪು ಹೇಳು? ನಾನು ಯಾವ ಮೂಲೆ ಸೊಪ್ಪು'

—ಚಾಟಿಯ ಏಟಿನಂಥ ಆ ಮಾತನ್ನು ಕೇಳಿ ರಾಘವೇಂದ್ರರಾಯ ತತ್ತರಿಸಿ ಹೋದ.

'ರತ್ನಕ್ಕ....ರತ್ನಕ್ಕ....ಇನ್ನೊಂದುಸಲ ನೀನಂಥ ಮಾತಾಡಿದರೆ ನನ್ನಾಣೆ. ಖಂಡಿತ ನಿನ್ನ ನಾನು ಮರೆತಿರಲಿಲ್ಲ.'

'ಆ ಮಾತು ನಾನು ನಂಬೊಲ್ಲ ರಾಘಣ್ಣ. ಬರೀ ಮರೆಯೋದೇ ಆಗಿದ್ರೂ ನಾನು ಅಷ್ಟು ಯೋಚನೆ ಮಾಡ್ತಾ ಇರಲಿಲ್ಲ. ಅದಕ್ಕಿಂತ ದೂರ ಹೋಗಿದೆ ನಿಮ್ಮ ಯೋಚನೆ'

—ಈ ಬಾರಿಯ ಮಾತು ಮೊದಲ ಬಾರಿಗಿಂತಲೂ ಮತ್ತಷ್ಟು ಚುರುಕಾಗಿತ್ತು. ಎಂದೂ ಇಲ್ಲದೆ ಇಂದು, ಇಷ್ಟು ಕಟುವಾಗಿ ಏಕೆ ಮಾತಾಡುತ್ತಿದ್ದಾಳೋ ಎಂದು ಅರಿವಾಗದೆ ರಾಘವೇಂದ್ರರಾಯ, ಮಾತಿನ ಪೆಟ್ಟಿನಿಂದಾದ ನೋವು ತುಂಬಿದ ಕಣ್ಣುಗಳಿಂದ ರತ್ನಮ್ಮನ ಮುಖವನ್ನು ನೋಡಿ—

'ನಿನಗೆ ನಾನೇನು ಅಪರಾಧ ಮಾಡಿದೆ ಅಂತ ಇಂಥ ಮಾತಿನ ಶಿಕ್ಷೆ ಕೊಡುತ್ತಿದ್ದೀಯ ರತ್ನಕ್ಕ?'

—ಎಂದು ಕೇಳಿದ.

'ಶಿಕ್ಷೆ ನಾನು ಕೊಡುತ್ತಿದ್ದೇನೆಯೋ ರಾಘಣ್ಣ? ನೀವು ನನಗೆ ಶಿಕ್ಷೆ ಕೊಡುತ್ತಿದ್ದೀರಿ. ಮೊದಲು ನನ್ನ ಮಾತಿಗೆ ಉತ್ತರ ಕೊಡು. ನಾನು ಏನು ತಪ್ಪು ಮಾಡಿದೇಂತ, ಈ ಮನೆಯಿಂದ, ಈ ಊರಿನಿಂದ ಹೊರಗೆ ಹಾಕಲು ನಿಶ್ಚಯಿಸಿದಿರಿ? ಇಷ್ಟು ಬೇಗ ನಾನು ನಿಮಗೆ, ಈ ಊರಿಗೆ ಭಾರ ಆಗಿ ಹೋದೆನೆ. ನನ್ನಾಣೆಗೂ ನಾನು ಯಾರಿಗೂ ಭಾರವಾಗೊಲ್ಲ ರಾಘಣ್ಣ'

—ಕಂಬನಿಯಿಂದ ಭಾರವಾದ ಧ್ವನಿಯಲ್ಲಿ ಹೇಳಿದಳು ರತ್ನಮ್ಮ. ಅವಳು ಆ ಮಾತಾಡಿದಾಗ ರಾಘವೇಂದ್ರರಾಯನಿಗೆ, ರತ್ನಮ್ಮ ಇದುವರೆಗೆ ಆಡಿದ ಮಾತಿನ ಅರ್ಥವಾಯಿತು.

'ನೋಡು ರತ್ನಕ್ಕ, ನೀನು ವಿಷಯ ತಿಳಿಯದೆ ನನ್ನನ್ನು ವೃಥಾ ದೂಷಿಸುತ್ತಿದೀಯೆ. ಸೀತಕ್ಕ ನಿನಗೆ ಏನು ಹೇಳಿದಳೋ, ಆಕೆ ಹೇಳಿದು

ದನ್ನು ನೀನು ಏನು ಅರ್ಥ ಮಾಡಿಕೊಂಡೆಯೋ—ನನಗಂತೂ ತಿಳಿಯದು. ಆದರೆ ನಮ್ಮ ಮಾತನ್ನು ನೀನು ತಪ್ಪು ತಿಳಿದುಕೊಂಡಿದೀಯ. ಇಲ್ಲಿ ನಾನು ಯಾವ ಭಾಗ್ಯ ಸುರಿದುಕೊಳ್ಳಬೇಕು ಅಂತ ನಿನ್ನನ್ನು ಊರು ಬಿಟ್ಟು ಅಟ್ಟಲಿ ಹೇಳು. ನಮ್ಮಪ್ಪನಾಣೆ—ನನ್ನ ಮನಸ್ಸಿನಲ್ಲಿ ಅಂಥ ಭಾವನೆ ಯಿಲ್ಲ. ನಾವು ಹೇಳಿದ್ದೇ ಒಂದು, ನೀನು ತಿಳಿದುಕೊಂಡಿರೋದೇ ಒಂದು.'

'ಏನಾದರೂ ಹೇಳಿ—ಒಟ್ಟಿನಲ್ಲಿ ನಿಮ್ಮ ಮನಸ್ಸಿನಲ್ಲಿರೋದು ನಾನು ಇಲ್ಲಿ ಇರಬಾರದು ಅಂತ. ಅಲ್ವೇ?'

'ಊಹೂ, ಅಲ್ಲ.'

'ಮತ್ತೇನು?'

'ನೋಡು ರತ್ನಕ್ಕ, ದೇವರು ನನಗೆ ಅಣ್ಣಾತಮ್ಮ, ಅಕ್ಕತಂಗಿ ಕೊಡ ಲಿಲ್ಲ. ಒಂಟಿಯಾಗಿ ಹುಟ್ಟಿದೆ. ಇದ್ದಷ್ಟು ದಿನ ಸೀತಾರಾಮೂನೇ ನನಗೆ ಅಣ್ಣ ತಮ್ಮ ಎಲ್ಲಾ ಆಗಿದ್ದ. ನೀನೂ ನನಗೆ ಅಕ್ಕ ಇದ್ದಹಾಗೆ. ಅವ ಕ್ಕೋಸ್ಕರವೇ ನನಗೆ, ನೀನು ಇಲ್ಲಿದ್ದು ಕಷ್ಟಪಡುವುದು ಇಷ್ಟವಿಲ್ಲದೆ, ತವರು ಮನೆಯಲ್ಲೇ ಇರುವುದಕ್ಕೆ ಒಪ್ಪಿದೆ.'

'ಇಲ್ಲಿದ್ದರೆ ನನಗೆ ಕಷ್ಟ ಅಂತ ಯಾರು ಹೇಳಿದರು?'

'ಯಾರಾದರೂ ಏಕೆ ಹೇಳಬೇಕು ರತ್ನಕ್ಕ. ಅಂಗೈ ಹುಣ್ಣಿಗೆ ಕನ್ನಡಿ ಏಕೆ? ನೀನು ನೊಂದುಕೊಳ್ಳೋದಿಲ್ಲಾಂದರೆ, ಇರೋ ವಿಷಯ ಹೇಳ್ತೀನಿ ಕೇಳು.'

'ಹೇಳು.'

'ಸೀತಾರಾಮು ನಿನ್ನನ್ನು ಎಂಥ ಕುದಿಯೋ ನೀರಿನಲ್ಲಿ ಅದ್ದಿ ಹೋಗಿ ದಾನೇಂತ ನಿನಗೆ....'

'ರಾಘಣ್ಣಾ....'

—ರಾಘವೇಂದ್ರರಾಯ ತನ್ನ ಮಾತು ಮುಗಿಸುವುದರೊಳಗೇ ಅದನ್ನು ಕತ್ತರಿಸುವಷ್ಟು ಚುರುಕಾದ ಧ್ವನಿಯಲ್ಲಿ ತಡೆದು ಹೇಳಿದಳು ರತ್ನಮ್ಮ. ಆಕೆಯ ಮಾತಿನ ಚುರುಕು ಅವನನ್ನು ಅಚ್ಚರಿಗೊಳಿಸಿತು.

'ಏನು ರತ್ನಕ್ಕ?'

—ಎಂದು ಕೇಳಿದ ಆಡುತ್ತಿದ್ದ ಮಾತನ್ನು ಅಲ್ಲಿಗೇ ನಿಲ್ಲಿಸಿ.

'ನೋಡು ರಾಘಣ್ಣ, ನಾನು ನಿನ್ನ ಅಕ್ಕ ಇದ್ದಹಾಗೆ ಎಂದೆ. ಆ ಮಾತು ನಿಜವಾಗಿದ್ದರೆ, ನನ್ನ ಕೊರಳಾಣೆ, ನನ್ನ ಎದುರಿಗೆ ಅವರನ್ನು ಬೈಯಬೇಡ. ಅವರು ಎಂಥವರೋ. ನನಗೇನು ಮಾಡಿದರೋ ಬಿಟ್ಟರೋ. ಏನಾದರೂ ಅವರು ನನ್ನ ಪಾಲಿನ ದೇವರು'

—ಎಂದಳು ರತ್ನಮ್ಮ ನಿರ್ಧಾರದ ಧ್ವನಿಯಲ್ಲಿ. ಆ ಮಾತು ಕೇಳಿ, ರತ್ನಮ್ಮನಿಗೆ ಗಂಡನ ವಿಷಯದಲ್ಲಿದ್ದ ಅಭಿಮಾನ ಅರಿವಾಗಿ ಅವನ ಹೊಟ್ಟೆಯಲ್ಲಿ ಕೆಂಡ ಕಲೆಸಿದಂತಾಯಿತು. ಬೇಡ ಬೇಡವೆಂದರೂ ಆಕ್ರೋಶ ಉಕ್ಕಿ ಬಂದಿತು. ಆ ಆಕ್ರೋಶದಿಂದ ಬಿರುಸಾದ ಧ್ವನಿಯಲ್ಲೇ ಹೇಳಿದ—

'ರತ್ನಕ್ಕ, ಸೀತಾರಾಮು ವಿಷಯದಲ್ಲಿ ನಿನಗಿರುವಷ್ಟು ಅಭಿಮಾನ ನನಗೂ ಇದೆ. ಅವನು ನನ್ನ ಅಣ್ಣ ಇದ್ದ ಹಾಗೆ. ಅದಕ್ಕೇ ಈ ದಿನ ನನಗಿಷ್ಟು ದುಃಖವಾಗಿರೋದು. ಇರುವಷ್ಟು ದಿನ ಯಾರು ಏನು ಕೇಳಿದರೂ ಅವನು ಇಲ್ಲ ಎನ್ನಲಿಲ್ಲ. ಯಾರಿಗೂ ಯಾವುದಕ್ಕೂ, ಕಡೆಗೆ ಬಿಡಿಗಾಸಿನ ಸಹಾಯಕ್ಕೂ ಕೈಚಾಚಲಿಲ್ಲ. ಆದರೆ ಅವನು ಹೋದ ಎಂದ ಕೂಡಲೇ, ಅವನ ಕರ್ಮಾಂತರಕ್ಕೆ ಹಣ ಜೋಡಿಸಲು ಹತ್ತುಮನೆ ಅಲೆಯಬೇಕಾಯಿತು. ಅದನ್ನು ನೆನಸಿಕೊಂಡರೆ ನನ್ನ ಹೊಟ್ಟೆ ಎಷ್ಟು ಉರಿಯುತ್ತಿದೆ ಗೊತ್ತೇ ನಿನಗೆ? ಸೀತಾರಾಮೂ ಒಳ್ಳೆಯವನು, ದೇವರಂಥವನು, ನಿಜ. ನನಗೂ ಗೊತ್ತು. ಆದರೆ ಇವತ್ತು ಆ ಒಳ್ಳೇತನ ನಿಮ್ಮ ಕತ್ತಿಗೆ ಉರುಲಾಗಿದೆ. ಇದ್ದಷ್ಟು ದಿನ ಇಂಥ ಒಳ್ಳೇತನ ಬೇಡ ಬೇಡ ಅಂತ ಬಡಿದುಕೊಂಡೆ; ಹಾಳಾದವನು ನನ್ನ ಮಾತು ಕೇಳಲಿಲ್ಲ. ನಿಮ್ಮ ತಲೇ ಮೇಲೆ ಚಪ್ಪಡಿ ಎಳೆದು ಹೋದ. ಒಂದು ದಿನಾನಾದರೂ, ನಾಳೆ ಏನಾದರೂ ಆದರೆ ನಿಮ್ಮ ಗತಿ ಏನು ಅಂತ ಯೋಚಿಸಲಿಲ್ಲ. ಅವನು ದುಷ್ಟನಾಗಿದ್ದರೆ ಹಾಳಾಗಿ ಹೋಗಲಿ. ನಿಮ್ಮ ಕತ್ತಿಗೆ ಈ ಸಾಲದ ಉರುಲು ಯಾಕೆ ಹಾಕಿಹೋಗಬೇಕಾಗಿತ್ತು ಹೇಳು? ಈ ಸಾಲ ಯಾರು ತೀರಿಸಬೇಕು, ಹೇಗೆ ತೀರಿಸಬೇಕು? ಸಾಲ ಕೇಳಿಕೊಂಡು ಬಂದವರ ಕೈಕಾಲು ಕಟ್ಟಿಕೊಂಡು ಬಾಳಬೇಕೇ ನೀನು? ನಿಜವಾಗಿಯೂ ರತ್ನಕ್ಕ—ಇವತ್ತೇನಾದರೂ ಸೀತಾರಾಮು ನನ್ನ ಕಣ್ಣೆದುರಿಗಿದ್ದಿದ್ದರೆ, ನಿಲ್ಲಿಸಿಕೊಂಡು ಕಪಾಳಕ್ಕೆ ಹೊಡೆಯುತ್ತಿದ್ದೆ.'

ರಾಘವೇಂದ್ರರಾಯ ಆಕ್ರೋಶದಿಂದ ಬಿಸಿಯಾಗಿ ಹೇಳಿದುದೆಲ್ಲವನ್ನೂ ರತ್ನಮ್ಮ ಶಾಂತವಾಗಿ ಕುಳಿತು ಕೇಳಿ ಅವನು ತನ್ನ ಮಾತು ನಿಲ್ಲಿಸಿದ ಬಳಿಕ ಒಣಧ್ವನಿಯಲ್ಲಿ ಹೇಳಿದಳು—

'ಆಯಿತೆ—ಅವರನ್ನು ಅಂದದ್ದೆಲ್ಲಾ ಮುಗಿಯಿತೆ ರಾಘಣ್ಣ ? ಅಥವಾ ಇನ್ನೂ ಅನ್ನಬೇಕು ಅಂತ ಇದ್ದರೆ ಇವತ್ತೇ ಅಂದು ತೀರಿಸಿಕೊಂಡು ಬಿಡು. ಇನ್ನೊಂದು ದಿನಕ್ಕೆ ಏನೂ ಬಾಕಿ ಉಳಿಸಬೇಡ.'

'ಈಗ ಏನಃ ಅಂದುಕೊಂಡು ಏನು ಉಪಯೋಗ ರತ್ನಕ್ಕ. ಅವನು ಪುಣ್ಯಾತ್ಮ, ನಾವೇ ನಿರ್ಭಾಗ್ಯರು.'

—ಬಹು ಕಹಿಯಾದ ಧ್ವನಿಯಲ್ಲಿ ಹೇಳಿದ ರಾಘವೇಂದ್ರರಾಯ.

'ಆ ಮಾತು ಮುಗಿಯಿತೋ ಇಲ್ಲವೋ ಹೇಳು. ಅದು ಮುಗಿದಿದ್ದರೆ ಬೇರೆ ಮಾತು ಹೇಳುತ್ತೇನೆ.'

'ಅದೇನು ಹೇಳು ರತ್ನಕ್ಕ ? '

'ಅವರು ಹೆಂಡರು ಮಕ್ಕಳಿಗೆ ಏನೂ ಇಡಲಿಲ್ಲ. ನಾನೂ ಒಪ್ಪಿಕೊಳ್ಳುತ್ತೇನೆ. ಸಾಲ ಬಿಟ್ಟುಹೋಗಿದಾರೆ–ಅದೂ ನಿಜ.'

'ಹೂ.'

'ಆ ಸಾಲಕ್ಕೆ ಹೆದರಿಕೊಂಡು ಇರೋ ಅಲ್ಪಸ್ವಲ್ಪ ಆಸ್ತೀನೂ ಮಾರಿ, ತೌರುಮನೇಲಿ ಹೋಗಿ ನಾನು ಹಾಯಾಗಿರಬೇಕು ಅಂತ ಅಲ್ಲವೇ ನಿನ್ನ ಅಭಿಲಾಷೆ?'

'ಹೂ. ಈಗ ಅದಲ್ಲದೆ ಬೇರೆ ದಾರಿ ಏನಿದೆ? '

—ನಿರಾಶೆಯ ಆಳದಲ್ಲಿ ಮುಳುಗಿ ಕೇಳಿದ ರಾಘವೇಂದ್ರರಾಯ.

'ಇದೆ.'

'ಏನು.'

'ಅವರು ನನಗೇನು ಆಸ್ತಿ ಬಿಟ್ಟು ಹೋದರು ಅಂತ ಅಲ್ಲವೇ ನೀನು ಕೇಳಿದ್ದು ರಾಘಣ್ಣ ? '

'ಹೂ.'

'ಇಲ್ಲಿ ನೋಡು. ಇಲ್ಲಿದೆ. ಅವರು ನನಗೆ ಬಿಟ್ಟುಹೋಗಿರೋ ಬಂಗಾರದ ಗಣಿ.'

—ರತ್ನಮ್ಮ ಪಕ್ಕದಲ್ಲಿ ಮಲಗಿ ನಿದ್ರಿಸುತ್ತಿದ್ದ ಮಗನನ್ನು ತಟ್ಟಿ ಹೇಳಿದಳು.

'ಇದಕ್ಕಿಂತ ಬೇರೆ ದೊಡ್ಡ ಆಸ್ತಿ ನನಗೆ ಬೇಕೇ ರಾಘಣ್ಣ? ಎಷ್ಟುಕೋಟಿ ವರಹ ಕೊಟ್ಟರೆ ಇಂಥ ಆಸ್ತಿ ಸಿಗುತ್ತದೆ ಹೇಳು. ಅವರು ಸಾಲ ಮಾಡಿಟ್ಟು ಹೋಗಿದಾರೆ ನಿಜ. ಆದರೆ ಅದನ್ನು ತೀರಿಸೋಕೆ ಮಗನನ್ನೂ ಕೊಟ್ಟು ಹೋಗಿದಾರೆ. ಈ ಗಣಿಯನ್ನಿಟ್ಟುಕೊಂಡು ನಾನು ಆ ಚಿಲ್ಲರೆ ಸಾಲಕ್ಕೆ ಹೆದರ ಬೇಕೆ?'

—ನಿಜವಾಗಿಯೂ ತನ್ನ ಪಕ್ಕದಲ್ಲಿ ವಜ್ರದ ಗಣಿಯೇ ಇದ್ದಷ್ಟು ಭರವಸೆಯಿಂದ ಮಾತಾಡಿದಳು ರತ್ನಮ್ಮ. ಅವಳ ಮಾತನ್ನು ಕೇಳಿ ರಾಘವೇಂದ್ರರಾಯನಿಗೆ ಆಕೆಯ ನಂಬಿಕೆಯನ್ನು ಕಂಡು ಅಭಿಮಾನವೆನಿಸಿದರೂ, ಹುಲ್ಲುಕಡ್ಡಿಯನ್ನೇ ಹರಿಗೋಲು ಎಂದು ನಂಬಿದ ಅವಳ ಮುಗ್ಧತೆಯನ್ನು ಕಂಡು ನಗು ಬಂತು. ನಿರಾಶೆಯ ನಗುನಗುತ್ತಾ—

' ರತ್ನಕ್ಕ, ನಿನಗೆ ಪ್ರಪಂಚಜ್ಞಾನ ಎಳ್ಳುಕಾಳು ಮುಳ್ಳುಮೊನೆಯಷ್ಟೂ ಇಲ್ಲ '

—ಎಂದ.

' ಏಕೆ '

'ನಿನ್ನ ಮಗ ಬೆಳೆದು, ದೊಡ್ಡವನಾಗಿ, ತಂದೆಯ ಸಾಲ ತೀರಿಸುವುದು ಇವತ್ತಿನ ಮಾತೇ ? ಅದು ಇನ್ನೂ ಇಪ್ಪತ್ತು ವರ್ಷದ ಮಾತು.'

'ಇರಬಹುದು.'

' ಆದರೆ ಸಾಲಗಾರರು ಅಲ್ಲಿಯವರಗೆ ನನ್ನ ಮುಖ, ನಿನ್ನ ಮುಖ ಅವನ ಮುಖ ನೋಡಿಕೊಂಡು ಸುಮ್ಮನೆ ಇರುತ್ತಾರೆಯೇ. ರತ್ನಕ್ಕ ಇದೆಲ್ಲಾ ನಮ್ಮ ಮನಸ್ಸಿನ ಸಮಾಧಾನಕ್ಕೆ ಹೇಳಿಕೊಳ್ಳುವ ಮಾತು. ಅದಕ್ಕೆಲ್ಲಾ ಏನು ಬೆಲೆ ಹೇಳು?'

' ಸಾಲಗಾರರು ಕಾಯೋದಿಲ್ಲ ಅಂತ ತಾನೇ ನೀನು ಹೇಳೋದು.'

' ಹೂ.'

' ಕಾಯದಿದ್ದರೆ ಬೇಡ. '

'ಕಾಯೋದು ಬೇಡಾ ಅಂದರೆ ಎಲ್ಲಿಂದು ತಂದು ತೀರಿಸುತ್ತೀ ಹೇಳು'

'ಅವರು ಬಹಳ ದಿನ ಕಾಯದಿರಬಹುದು. ಆದರೆ ಇವತ್ತೇ ಕೊಡಿ ಅಂತ ಯಾರೂ ಕತ್ತಿನ ಮೇಲೆ ಕೂತಿಲ್ಲವಲ್ಲ?'

'ಇಲ್ಲ.'

'ಸರಿ ಮತ್ತೆ, ಇವತ್ತಲ್ಲ ನಾಳೆ ತೀರಿಸೋದು.'

'ಹೇಗೆ ತೀರಿಸುತ್ತಿ ರತ್ನಕ್ಕ?'

'ಅವರಿದ್ದಿದ್ದರೆ ಹೇಗೆ ತೀರಿಸುತ್ತಿದ್ದರೋ ಹಾಗೆ.'

'ಆದರೆ ಅವನು ಗಂಡಸು, ನೀನು ಹೆಂಗಸು. ಅವನ ಹಾಗೆ ನೀನು ದುಡಿಯೋಕೆ ಸಾಧ್ಯವೇ?'

'ಸಾಧ್ಯಾಸಾಧ್ಯತೆಯ ಮಾತಲ್ಲ ಇದು ರಾಘಣ್ಣ, ಏನಾದರಾಗಲಿ ತೀರಿಸಬೇಕು'

—ನಿರ್ಧಾರದ ಧ್ವನಿಯಲ್ಲಿ ಹೇಳಿದಳು ರತ್ನಮ್ಮ.

'ತೀರಿಸಲಿಕ್ಕಾಗುವುದಿಲ್ಲ ಅಂತ ನಾನು ಹೇಳುವುದಿಲ್ಲ, ಆದರೆ ಅದು ತುಂಬಾ ಕಷ್ಟದ ಕೆಲಸ.'

'ಆದರೆ ಆಗಲಿ—ನಮ್ಮ ಪಾಲಿಗೆ ಬಂದದ್ದು ಅದು. ನಮಗೆ ಕಷ್ಟ ವಾಗುತ್ತದೆ ಅಂತ ಹೆದರಿ ಮಗನ ಪಾಲಿಗೆ ಅವನ ತಂದೆ ಆಸ್ತಿ ಚೂರು ಚೂರೂ ಉಳಿಯದಹಾಗೆ ತೊಳೆದುಬಿಟ್ಟು, ಪರದೇಶಿಹಾಗೆ ಎಲ್ಲೋ ಸೇರಿ ಕೊಂಡು ಸಾಕಲೇ?'

'ಎಲ್ಲಾದರೂ ಇರು ಅಂತ ಯಾರು ಹೇಳಿದರು ರತ್ನಕ್ಕ. ನಿನ್ನ ತಂದೆಯ ಮನೆಯಲ್ಲಿ ನೀನಿದ್ದರೆ ತಪ್ಪೆ?'

'ರಾಘಣ್ಣ, ನಿನಗೆ ವಯಸ್ಸಾಗಿದೆ, ಬುದ್ಧಿ ಬಂದಿದೆ ಅಂತ ಅಂದು ಕೊಂಡಿದ್ದೆ ನಾನು. ಊಹು. ನನ್ನದು ತಪ್ಪಾಯಿತು.'

'ಏಕೆ?'

'ಹೆಂಗಸು ತೌರುಮನೇಲಿ ಯಾವಕಾಲದಲ್ಲಿರಬೇಕೋ ಆ ಕಾಲದಲ್ಲಿ ದ್ದರೆ ಚೆಂದ. ಅದು ಬಿಟ್ಟು ಕಷ್ಟ ಬಂತು ಅಂತ, ನಮ್ಮ ಕಷ್ಟ ನಮಗೇಕೆ, ಹಡೆದ ತಪ್ಪಿಗೆ ನೀವೇ ಅದನ್ನೂ ಅನುಭವಿಸಿ ಅಂತ ಅವರ ಹೆಗಲಮೇಲೆ ಹೇರಿದರೆ ಏನಾದಹಾಗಾಯಿತು ಹೇಳು? ಸುಖ ಬಂದಾಗ ನನಗಿರಲಿ, ಕಷ್ಟ ಬಂದಾಗ ನನ್ನದನ್ನೂ ನೀವು ಅನುಭವಿಸಿ ಅನ್ನೋದು ಯಾವದೇವರು ಒಪ್ಪೋ

ಮಾತು ರಾಘಣ್ಣ ? ಊಹೂ. ಅದು ಕೂಡದು. ನನ್ನ ಕಷ್ಟವೋ ಸುಖವೋ ನನಗಿರಲಿ. ಅಷ್ಟೇ ಅಲ್ಲ ರಾಘಣ್ಣ—ಏನೋ ಕಷ್ಟಬಂತು ಅಂತ ಹೆದರಿ ಕೊಂಡು ಓಡಿಹೋಗು ಎನ್ನುತ್ತೀಯಲ್ಲ. ಆ ಮಾತು ಹೇಳೋಕೆ ಮುಂಚೆ ಒಂದು ವಿಚಾರ ಯೋಚನೆ ಮಾಡಿದೆಯಾ ?'

'ಏನು ರತ್ನಕ್ಕ '

'ನೋಡು—ಅವರು ಎಲ್ಲೋ ಬೆಳೆದ ನನ್ನ ಮದುವೆಮಾಡಿಕೊಂಡು, ಕರೆದುಕೊಂಡುಬಂದು, ಇಷ್ಟುದಿನ ಅನ್ನ, ಬಟ್ಟೆ, ಸುಖ ಎಲ್ಲಾ ಕೊಟ್ಟು ಸಾಕಿದ್ದು ಏಕೆ ?'

'ಏಕೋ—ನೀನೇ ಹೇಳು.'

'ಈ ಮನೆ ಕತ್ತಾಲಾಗಿರೋದು ಬೇಡ, ದೀಪ ಹಚ್ಚಿ ಬೆಳಕು ಮಾಡಿ ಕೊಂಡು ಇರು ಅಂತ. ಮದುವೇಂತ ಮಾಡಿಕೊಳ್ಳೋದೇ ಅದಕ್ಕೆ, ಅಲ್ಲವೇ ರಾಘಣ್ಣ. ಅಂಥೋಳು—ಅವರು ಕಣ್ಣುಮರೆಯಾದದ್ದೇ ಸಾಕು ಅಂತ ಈ ಮನೇನೂ ಮಾರಿ, ಬಾಗಿಲು ಬಡಿದುಕೊಂಡು, ನನಗೆ ಎಲ್ಲಿ ಹಿತವೋ ಅಲ್ಲಿಗೆ ಹೋಗಿಬಿಟ್ಟರೆ, ಸ್ವರ್ಗದಲ್ಲಿರೋ ಅವರು ನೊಂದುಕೊಳ್ಳೋದಿಲ್ಲವೇ ರಾಘಣ್ಣ. ಇದು ಅವರ ಮನೆ; ಅವರ ತಂದೆ, ತಾತ ಬೆಳೆದ ಮನೆ. ಈ ಮನೇನ ನಾನು ಕಂಡವರಿಗೆ ಒಪ್ಪಿಸಿ, ಅವರ ಮಗನ ಪಾಲಿಗೆ ಇಲ್ಲದಹಾಗೆ ಮಾಡಲೇ? ಹಾಗೆ ಮಾಡಿದರೆ ನಾನು ಅವರ ಕೈಹಿಡಿದು, ಹೆಂಡತಿ ಅಂತ ಅನ್ನಿಸಿ ಕೊಂಡದ್ದಕ್ಕೇನು ಸಾರ್ಥಕ ಹೇಳು?'

—ತನ್ನ ಕರುಳನ್ನೇ ಕಿತ್ತು ಈಡಾಡುವ ಧ್ವನಿಯಲ್ಲಿ ಕೇಳಿದಳು ರತ್ನಮ್ಮ.

'ನೀನು ಹೇಳೋ ಮಾತೆಲ್ಲಾ ನಿಜ ರತ್ನಕ್ಕ. ನಾನು ಇಲ್ಲಾನ್ನೋಲ್ಲ. ಆದರೆ ಇವತ್ತು ಇದನ್ನು ಮಾರಿಕೊಂಡು ಹೋಗಬೇಕು ಅನ್ನುವಂಥ ಸ್ಥಿತಿ ಬಂದಿದ್ದರೆ, ಅದಕ್ಕೆ ನೀನು ಕಾರಣವಲ್ಲ.'

'ಮತ್ತೆ ಯಾರು ?'

'ಸೀತಾರಾಮು.'

'ಅದೇ ನೀನು ಮಾಡುತ್ತಿರುವ ತಪ್ಪು ರಾಘಣ್ಣ. ಅವರೊಬ್ಬರೇ ಅಪ ರಾಧಿಗಳು, ನಾನು ದೇವತೆ ಅನ್ನೋ ರೀತೀಲಿ ಮಾತಾಡಬೇಡ. ಇವತ್ತು

ಇಂಥ ಪರಿಸ್ಥಿತಿ ಬಂದಿದ್ದರೆ, ಅದಕ್ಕೆ ಅವರು ಎಷ್ಟು ಕಾರಣರೋ, ಅವರಿಗಿಂತ ಹೆಚ್ಚಾಗಿ ನಾನು ಕಾರಣ?'

'ನಿನ್ನದೇನು ತಪ್ಪು?'

'ತಪ್ಪು ನನ್ನದೇ. ಹೊರಗೆ ಅವರು ಹೇಗಿದ್ದರೂ, ಮನೆಯೊಳಗೆ ನಾನು ಇರೋ ಜೋಪಾನದಿಂದ ಇದ್ದರೆ ಅವರು ಬೇಡ ಅನ್ನುತ್ತಾ ಇದ್ದರೆ? ಅವರು ಯಾವತ್ತು, ಯಾವುದಕ್ಕೆ ನನ್ನ ಕೈ ತಡೆದಿದ್ದರು ಹೇಳು? ನಾನು ಹೇಳಿದ ಹಾಗೆ ಅವರು ಕೇಳೋರು....'

'ಅವನು ಹೇಳಿದ ಹಾಗೆ ನೀನು ಕೇಳುತ್ತಿದ್ದೆ....'

'ಹೂ, ಸರಿಯೋ ತಪ್ಪೋ—ಇಬ್ಬರೂ ಒಂದೇ ದಾರೀಲಿ ಹೋದೆವು. ಹೀಗಾಗುತ್ತೇಂತ ಯಾರಿಗೂ ತಿಳೀಲಿಲ್ಲ. ಆಯಿತು. ಈಗ ಅದು ತಪ್ಪಾಗಿದ್ದರೆ ಅದಕ್ಕೆ ಇಬ್ಬರೂ ಹೊಣೆಗಾರರೇ. ಅವರು ಇಲ್ಲ ಅಂತ, ಸೂಳೆ ಪಾಪ ಸನ್ಯಾಸಿ ಜೋಳಿಗೆಗೆ ಹಾಕಿದಹಾಗೆ, ಎಲ್ಲಾ ಅವರ ಕತ್ತಿಗೆ ಸುತ್ತಿ ಬಿಡಲೇ? ಎಲ್ಲಕ್ಕಿಂತ ಹೆಚ್ಚಾಗಿ, ನಮ್ಮ ತಪ್ಪಿಗೆ, ಏನೂ ಕಾಣದ ಆ ಹಸು ಗೂಸಿನ ಪಾಲಿಗೆ ಅವನ ತಾತ ಮುತ್ತಾತಂದಿರ ಮನೆ ಇಲ್ಲದ ಹಾಗೆ ಮಾಡಲೇ ರಾಘಣ್ಣಾ? ನೀನು ನನ್ನ ಕತ್ತು ಕತ್ತರಿಸಿ ಬಿಟ್ಟರೂ ಸರಿಯೇ—ಅದು ನನ್ನಿಂದ ಆಗೋ ಕೆಲಸವಲ್ಲ.'

'ಅಂದರೆ....'

'ತಲೇ ಮೇಲೆ ಸಾವಿರ ಸಿಡಿಲು ಬಿದ್ದರೂ ಅವರಿದ್ದ ಈ ಮನೆ ಬಿಟ್ಟು ನಾನು ಕದಲೊಲ್ಲ ರಾಘಣ್ಣಾ. ಅಪ್ಪ ಮಗಳು ಕಷ್ಟಪಡ್ತಾಳಲ್ಲಾ ಅನ್ನೋ ಅಭಿಮಾನದಿಂದ ಬಾಂತ ಕರೀಬಹುದು. ಇದ್ದಷ್ಟು ದಿನ ಹಾಯಾಗಿರಲಿ ಅನ್ನೋ ಉದ್ದೇಶದಿಂದ ನೀನು ಹೋಗು ಅನ್ನಬಹುದು. ಆದರೆ ನನ್ನ ಪಾಲಿಗೆ ಮಾತ್ರ ಇದೇ ನೆಲೆ.'

ಅಚಲವಾದ ನಿರ್ಧಾರದ ಧ್ವನಿಯಲ್ಲಿ ಹೇಳಿದಳು ರತ್ನಮ್ಮ. ಆ ನಿರ್ಧಾರದ ಇದಿರು ತನ್ನ ಯಾವ ವಾದವೂ ಗೆಲ್ಲುವುದಿಲ್ಲ ಎನ್ನುವುದನ್ನು ಅರಿತೂ, ಮನಸ್ಸಿನಲ್ಲಿದ್ದ ಮಾತನ್ನು ತಡೆಯಲಾಗದೆ ಹೇಳಿದ ರಾಘವೇಂದ್ರ ರಾಯ—

'ಇನ್ನೂ ಸ್ವಲ್ಪ ಯೋಚನೆ ಮಾಡು ರತ್ನಕ್ಕ. ನಿನ್ನ ನಿರ್ಧಾರವೇನೊ

ಒಳ್ಳೆಯದೆ. ಆದರೆ ಅದನ್ನು ನಡೆಸುವುದು ಅಂದುಕೊಂಡಷ್ಟು ಸುಲಭವಲ್ಲ.'

'ನಾನೆಲ್ಲಾ ಯೋಚನೆ ಮಾಡಿದೀನಿ ರಾಘಣ್ಣ. ಕಷ್ಟವೋ, ನಿಷ್ಠುರವೋ ಏನಾದರಾಗಲಿ, ಇದೇ ನನಗೆ ಸ್ವರ್ಗ.'

'ಏನಾದರೂ ತಾಯಿತಂದೆ ಜೊತೇಲಿರೋದು ಮೇಲು.'

'ಏಕೆ ? ಇಲ್ಲಿದ್ದರೆ ನಾನೇನು ಪರದೇಶಿಯಾಗುತ್ತೇನೆಯೇ ? ಆಗಲೇ ನೀನೇ ಹೇಳಿದೆ–ನಿನಗೆ ನಾನು ಅಕ್ಕ ಅಂತ. ನಿನ್ನಂಥ ತಮ್ಮ, ಕಮಲತ್ತೆಯಂಥ ತಾಯಿ ಆಸರೆ ಇರೋವಾಗ ನನಗೇನು ಭಯ. ಒಂದು ಉಪಕಾರ ಮಾಡು ರಾಘಣ್ಣ........'

'ಏನು ?'

'ನೋಡು–ಅವರ ಸಾಲ ಎಷ್ಟಿದೆಯೊ ಎಲ್ಲಾ ವಿಚಾರಿಸಿ ಹೇಳು. ಮೊನ್ನೆ ಅವರ ಕರ್ಮಾಂತರಕ್ಕೆ ಯಾರು ಯಾರ ಹತ್ತಿರ ಎಷ್ಟೆಷ್ಟು ತೆಗೆದು ಕೊಂಡಿದಿಯೋ ಎಲ್ಲಾ ಹೇಳು. ಎಲ್ಲಾದರೂ ಏನಾದರೂ ಕಷ್ಟಪಟ್ಟು ತೀರಿಸೋಣ. ಯಾರೂ ಒಂದು ಕಾಸೂ ಬಿಡೋದು ಬೇಡ. ಅವರದು ಕೊಟ್ಟ ಕೈಯೇ ಹೊರತು, ತೆಗೆದುಕೊಂಡ ಕೈಯಲ್ಲ. ಸ್ವರ್ಗದಲ್ಲೂ ಹಾಗೆ ಇರಲಿ.'

ರತ್ನಮ್ಮ ಹೇಳಿದ ಮಾತನ್ನು ಕೇಳಕೇಳುತ್ತಾ ರಾಘವೇಂದ್ರರಾಯನ ಕಣ್ಣಲ್ಲಿ ನೀರುತುಂಬಿತು. ಉಕ್ಕಿಬರುವ ದುಃಖವನ್ನು ತಡೆಯುತ್ತಾ–

'ಅಂತೂ ಬಯಸಿ ಬಯಸಿ ಕಷ್ಟಾನೇ ಹೊತ್ತುಕೋ ಬೇಕು ಅನ್ತೀಯ'

—ಎಂದ.

'ಕಷ್ಟವೋ ಸುಖವೋ–ಇದು ಅವರು ಒಪ್ಪಿಸಿ ಹೋದ ಸಂಸಾರ ರಾಘಣ್ಣ. ನನ್ನ ಕಟ್ಟಿಕೊಂಡು ಅವರು ಕಷ್ಟಪಡಲಿಲ್ಲವೇ. ಆಗ ಅವರದಾಯಿತು. ಈಗ ನನ್ನ ಸರದಿ.'

'ಸೀತಾರಾಮು ನಿಜವಾಗಿಯೂ ಅದೃಷ್ಟವಂತ ರತ್ನಕ್ಕ. ಇದ್ದರೂ ಹೋದರೂ ಅವನು ಅದೃಷ್ಟವಂತ, ನಾವೇ ನಿರ್ಭಾಗ್ಯರು'

—ಎಂದ ರಾಘವೇಂದ್ರರಾಯ ದುಃಖವನ್ನು ತಡೆಯಲಾಗದೆ ಕಣ್ಣೀರು ಸುರಿಸುತ್ತಾ.

ಆಮಾತು ಕೇಳಿ, ಅವನ ಮಾತಿನ ಅರ್ಥ ಅರಿವಾಗಿ ರತ್ನಮ್ಮ ಒಂದು ಗಳಿಗೆ ಸುಮ್ಮನಿದ್ದು–

'ಹಾಗಾದರೆ ನನ್ನ ಮಾತು ನಿನಗೆ ಒಪ್ಪಿಗೆ ಆಯಿತೇ ರಾಘಣ್ಣ ?'

—ಎಂದು ಕೇಳಿದಳು.

'ಹೂ.'

'ಅವರು ಹೇಳ್ತಾಇದ್ದರು–ಏನಾದರೂ ರಾಘಣ್ಣ, ಇದಾನೆ ಅಂತ. ನೀನೊಬ್ಬ ನನ್ನ ಬೆಂಗಾವಲಾಗಿರು ರಾಘಣ್ಣ. ಏನು ಬಂದರೂ ಬರಲಿ,ನಾನು ನಿನ್ನ ಇನ್ನೇನೂ ಕೇಳೊಲ್ಲ ರಾಘಣ್ಣ, ಇವತ್ತಿರೋ ವಿಶ್ವಾಸ ಒಂದು ಕಡೇ ವರೆಗೂ ಉಳಿಸಿಕೊಡು. ಅಷ್ಟು ಸಾಕು. ಅದೊಂದು ನಡಸಿಕೊಡ್ತೀಯಾ ರಾಘಣ್ಣ ?'

—ತನ್ನ ಹೃದಯದ ಆಸೆಯನ್ನೆಲ್ಲಾ ಆ ಮಾತುಗಳಲ್ಲಿ ತುಂಬಿ ಕೇಳಿ ದಳು ರತ್ನಮ್ಮ.

'ಒಂದು ಗಳಿಗೆ ನಾನು ಗಂಡಸು, ಹೆದರಿದ್ದೆ. ಆ ಹೆದರಿಕೆಯಲ್ಲಿ ತಿಳಿ ಯದೆ ಏನೇನೋ ನಿನ್ನ ಮನಸ್ಸು ನೋಯಿಸುವಂಥ ಮಾತಾಡಿದೆ ರತ್ನಕ್ಕ. ನನ್ನನ್ನು ಮನ್ನಿಸು. ಇನ್ನೊಂದು ಸಲ ಅಂಥ ಮಾತು ಆಡೊಲ್ಲ.'

'ಏನೋ ರಾಘಣ್ಣ, ನಂದ್ಲಿಕ್ಕೆ ಬಂದಿರೊ ಈ ಮನೆ ದೀಪ ನಿನ್ನಿಂದ ಉರಿಯಬೇಕು.'

'ಛಿ. ಎಲ್ಲೀ ಮಾತು ರತ್ನಕ್ಕ. ನಿನ್ನ ಜೀವತ್ತೈಲ ಎರೆದು ಈ ದೀಪಾನ ಉರಿಸುತ್ತಿರುವಾಗ ಅದಕ್ಕೇನು ಭಯ ಬಂದಿದೆ ರತ್ನಕ್ಕ. ಈ ದೀಪ ಎಂದೆಂ ದಿಗೂ ಆರೋಲ್ಲ.'

'ನಿನ್ನ ಬಾಯಿ ಹರಕೆಯಿಂದ ಅಷ್ಟಾದರೆ ಸಾಕು'

—ಎಂದಳು ರತ್ನಮ್ಮ.

'ನನ್ನ ಹರಕೆಯೇ ರತ್ನಕ್ಕ. ಹರಸುವಷ್ಟು ಯೋಗ್ಯತೆ ನನಗಿಲ್ಲ. ನಿನ್ನ ಆಶೀರ್ವಾದವೊಂದು ನನಗಿರಲಿ. ರತ್ನಕ್ಕ....ನಿನ್ನಂಥ ಅಕ್ಕ ಸಿಕ್ಕಿದ್ದು ನನ್ನ ಭಾಗ್ಯ ಅಂದುಕೊಂಡಿದ್ದೆ. ಆದರೆ ಸಾಕ್ಷಾತ್ತು ದೇವತೆಯೇ ನನ್ನ ಅಕ್ಕನಾಗಿ ಬಂದಿದಾಳೆ ಅಂತ ನಾನು ತಿಳಿದುಕೊಂಡಿರಲಿಲ್ಲ. ಇವತ್ತು ನನ್ನ ಕಣ್ಣು ತೆರೆಯಿತು. ನನ್ನ ಮಾತು ನಂಬು ರತ್ನಕ್ಕ. ಇವತ್ತಿನಿಂದ ನನ್ನ ಬಾಳು ನಿನ್ನ ಸೇವೆಗೆ ಮೀಸಲು.'

—ಎಂದ ರಾಘವೇಂದ್ರರಾಯ ರತ್ನಮ್ಮನಿಗೆ ನಮಸ್ಕರಿಸಿ. ನಮಸ್ಕರಿಸಿ

ದವನು ಮೇಲೇಳುವಾಗ, ಅವನ ಮುಖ ನೆಲವನ್ನು ಸೋಕಿದೆಡೆ ಒದ್ದೆಯಾಗಿತ್ತು.

ಅವನ ಮಾತುಗಳನ್ನು ಕೇಳಿ ರತ್ನಮ್ಮನ ಕಣ್ಣುಗಳಿಂದಲೂ ಧಾರೆ ಧಾರೆಯಾಗಿ ನೀರು ಹರಿಯಿತು. ಅಷ್ಟುಹೊತ್ತು ತಡೆದ ದುಃಖ ಉಕ್ಕಿ ಬಂದು—

‘ ರಾಘಣ್ಣ........ರಾಘಣ್ಣ........ಇಂಥ ಮಾತು ಕೇಳೋಕೆ ಅವರಿಲ್ಲ. ಅವರು........ಇದ್ದಿದ್ದರೆ........ಇದ್ದಿದ್ದರೆ........ ’

—ಎಂದು ಮಾತು ಮುಗಿಸಲಾರದೆಯೇ ಅಳಲಾರಂಭಿಸಿದಳು.

‘ ರತ್ನಕ್ಕಾ........’

—ಎಂದು ವಿಹ್ವಲನಾಗಿ ಕೂಗಿದ ರಾಘವೇಂದ್ರರಾಯ. ನುಗ್ಗಿ ಬಂದ ಅಳು ಅವನ ಮಾತನ್ನು ಅಲ್ಲಿಗೇ ಕತ್ತರಿಸಿತು.

# ೧೨

'ಅಃ ! ರತ್ನ ಇಷ್ಟು ಮಾತಾಡಿದಳೇ !'

—ರಾಘವೇಂದ್ರರಾಯ ಹೇಳಿದುದೆಲ್ಲವನ್ನೂ ಕೇಳಿ ಕಮಲಮ್ಮ ಅಚ್ಚರಿಯಿಂದ ನುಡಿದಳು. ಆದರೆ ಆ ಮಾತಿನಲ್ಲಿ ಅಸಮಾಧಾನವಿರಲಿಲ್ಲ; ಅಚ್ಚರಿಯಿತ್ತು.

'ಅಲ್ಲೋ ಒಂದುದಿನಾನಾದರೂ ಗಟ್ಟಿಯಾಗಿ ಮಾತಾಡಿದವಳಲ್ಲ ರತ್ನ. ಮಾತಾಡೋದೇನು ಬಂತು, ತಲೆ ಎತ್ತಿ ಸರಿಯಾಗಿ ನೋಡಿದ್ದನ್ನೇ ಕಾಣೆ. ಅಂಥವಳು ಇಷ್ಟು ಮಾತಾಡಿದಳೇ? ನೀನು ಹೇಳೋದೆಲ್ಲಾ ಕೇಳ್ತಾ ಇದ್ದರೆ ನನಗೆ ಯಾಕೋ ನಂಬಿಕೆಯೇ ಆಗೋಲ್ಲ. ನೀನು ಎಲ್ಲಾ ಹೇಳಿದ ಮೇಲೂ ಇಲ್ಲೇ ಇರ್ತೀನಿ ಅಂದಳೆ?'

'ಹೂ.'

'ಸೀತಾರಾಮು ನತದೃಷ್ಟ. ಇಂಥ ಹೆಂಡತೀನ ಕಟ್ಟಿಕೊಂಡ ಹಾಯಾಗಿ ಸಂಸಾರ ಮಾಡೋ ಪುಣ್ಯಾನ ಭಗವಂತ ಅವನ ಹಣೇಲಿ ಬರಿ ಲಿಲ್ಲ. ಚಿನ್ನದಂಥ ಹುಡುಗಿ. ಛೀ! ಈ ಹಾಳಾದ ದೇವರಿಗೆ ಕಣ್ಣಿಲ್ಲ ಅಂಥವಳಿಗೆ ಇಂಥ ಗತೀನೆ ತರೋದು.....'

—ಎಂದಳು ಕಮಲಮ್ಮ ತೇವವಾದ ಕಣ್ಣನ್ನು ಒರಸಿಕೊಳ್ಳುತ್ತಾ.

'ಅದೆಲ್ಲಾ ಈಗ ಯೋಚನೆ ಮಾಡಿ ಏನು ಫಲ? ಆದದ್ದಾಯಿತು ಈಗ ಮುಂದಿನದನ್ನುತಾನೇ ಯೋಚನೆ ಮಾಡಬೇಕು.'

'ಮುಂದಿನ ಯೋಚನೆ ಏನು ಬಂತು. ಇಲ್ಲೇ ಇರಲಿ. ಇದೇ

ಕಾಡೇ. ಸೀತಾರಾಮೂ ಹೋದರೂ ಅವಳ ಪಾಲಿಗೆ ನಾವೆಲ್ಲಾ ಸತ್ತಿಲ್ಲವಲ್ಲ. ಅವಳು ಹೇಳೋದು ನಿಜಾನೆ. ಸಾಲಕ್ಕೆ ಹೆದರಿ ಇದ್ದಬದ್ದದ್ದನ್ನೆಲ್ಲ ಮಾರಿ ಕೊಂಡು ಊರು ಬಿಟ್ಟರೆ, ನಾಳೆ ಆ ಹುಡುಗನ ಗತಿ ಏನು ?'

' ರತ್ನಕ್ಕನಿಗೂ ಅದೇ ಯೋಚನೆಯೇ.'

' ಮತ್ತೆ ತಾಯಿಯಾದವಳಿಗೆ ಆ ಯೋಚನೆ ಇರಬೇಡವೇ ?'

' ಹಾಗಾದರೆ ರತ್ನಕ್ಕ ಇಲ್ಲೇ ಇರೋದಕ್ಕೆ ನಿನ್ನದೂ ಒಪ್ಪಿಗೆ ಇದೆ ಎನ್ನು.'

' ಖಂಡಿತ. ಅಲ್ಲಿ ಒಬ್ಬಳೇ ಇರಲಿಕ್ಕಾಗದಿದ್ದರೆ ಮನೇಲೇ ಬಂದಿರಲಿ. ಇಷ್ಟು ದಿನ ಸೊಸೆ ಹಾಗಿದ್ದಳು. ಈಗ ಮಗಳ ಹಾಗಿರಲಿ.'

—ಎಂದು ಕಮಲಮ್ಮ ತನ್ನ ಖಚಿತವಾದ ಅಭಿಪ್ರಾಯವನ್ನು ಸೂಚಿಸಿದಳು.

ಅಲ್ಲಿಗೆ ಆ ಸಮಸ್ಯೆ ಇತ್ಯರ್ಥವಾದಂತಾಯಿತು. ಲಕ್ಷ್ಮಣರಾಯನೂ ಅದರ ಮುಂದೆ ಬೇರೇನೂ ಹೇಳಲಾಗಲಿಲ್ಲ. ಯಾರ ಮಾತಿಗೂ ರತ್ನಮ್ಮ ತನ್ನ ನಿರ್ಧಾರವನ್ನು ಬದಲಾಯಿಸುವುದಿಲ್ಲವೆನ್ನುವುದು ಮನವರಿಕೆಯಾದ ಆತ, ಎಲ್ಲ ಹೊಣೆಗಾರಿಕೆಯನ್ನೂ ಶ್ರೀನಿವಾಸರಾಯರು, ರಾಘವೇಂದ್ರ ರಾಯನಿಗೆ ಒಪ್ಪಿಸಿ—

' ರತ್ನ ನನ್ನ ಮಗಳಲ್ಲ, ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗಳು. ನೀವೇ ಇನ್ನು ಅವಳಿಗೆ ತಂದೆ ತಾಯಿ. ಅವಳ ಒಳಿತು ಕೆಡುಕು ಎಲ್ಲಾ ನಿಮಗೇ ಸೇರಿದ್ದು'

—ಎಂದು ಹೇಳಿದ.

' ನೀವು ಯಾವ ಯೋಚನೆಯನ್ನೂ ಮಾಡಬೇಡಿ ಲಕ್ಷ್ಮಣರಾಯರೇ. ರತ್ನಕ್ಕ ನನ್ನ ಸಾಕ್ಷಾತ್ತು ಅಕ್ಕ. ನಾನು ಬದುಕಿರುವವರೆಗೆ ಅವಳ ತಲೆಯ ಕೂದಲೂ ಕೊಂಕಲು ಬಿಡುವುದಿಲ್ಲ.'

—ಎಂದು ಮಾತುಕೊಟ್ಟ ರಾಘವೇಂದ್ರರಾಯ.

ಆ ಮಾತಿಗಿಂತ, ಆ ಮಾತಿನ ಶಬ್ದ ಶಬ್ದದಲ್ಲೂ ಹೊರಹೊಮ್ಮುತ್ತಿದ್ದ ಪ್ರಾಮಾಣಿಕತೆ ತಾನೇ, ಲಕ್ಷ್ಮಣರಾಯನಿಗೆ ಭರವಸೆ ನೀಡಿತು.

' ಯಾವಾಗ, ಏನು ಕೆಲಸಕ್ಕೆ ಬೇಕಾದರೂ ಹೇಳಿಕಳಿಸು. ಬರುತ್ತೇನೆ.'

—ಎಂದ ಲಕ್ಷ್ಮಣರಾಯ.

ಹೊರಡುವ ಮುನ್ನ ಕಾಲಿಗೆರಗಿದ ಮಗಳಿಗೆ ಸೀತಮ್ಮನೂ ಅದನ್ನೇ ಹೇಳಿದಳು—

'ಯಾವ ದುಃಖವನ್ನೂ ಹಚ್ಚಿಕೊಂಡು ಕೊರಗಬೇಡ ರತ್ನ. ನಿನ್ನ ಮೈ ಕೆಟ್ಟರೆ, ನಿನ್ನ ಮಗನನ್ನು ನೋಡಿಕೊಳ್ಳುವವರು ಯಾರು? ಈಗ ನೀನೇ ಅವನಿಗೆ ತಂದೆ ತಾಯಿ. ನೀನೂ ಅಷ್ಟೆ, ಅವನ ಮುಖ ನೋಡಿ ಕೊಂಡು ಎಲ್ಲಾ ದುಃಖಾನೂ ಮರೀಬೇಕು. ನಿನಗೇನಾದರೂ ಕಣ್ಣು ಮೂಗು ನೋವಾದರೆ ತಾತ್ಸಾರ ಮಾಡಬೇಡ. ಹೇಳಿಕಳಿಸು.'

'ಇದೇನಮ್ಮಾ ಹೊರಗಿನವರಿಗೆ ಹೇಳಿದಹಾಗೆ ಹೇಳಬೇಕೆ ನನಗೆ?'

—ತಾಯಿಯಾಡಿದ ಮಾತನ್ನು ಕೇಳಿ ಹೇಳಿದಳು ರತ್ನಮ್ಮ.

'ಉಪಚಾರಕ್ಕೆ ಹೇಳ್ತಾ ಇಲ್ಲ ರತ್ನ. ನನ್ನಾಣೆಗೂ ನನಗೆ ನಿನ್ನ ಹೀಗೆ ಬಿಟ್ಟು ಹೋಗೋಕೆ ಮನಸ್ಸಿಲ್ಲ. ನನ್ನ ಜೀವ ಇಲ್ಲೇ ಬಿಟ್ಟು ಹೋಗಲಾರದೆ ಹೋಗ್ತಾ ಇದೀನಿ. ಕಮಲಕ್ಕ ಇಲ್ಲಿದಾಳೆ ಅನ್ನೋದೊಂದೇ ಭರವಸೆ. ನೀನು ನನ್ನ ಹೊಟ್ಟೇಲಿ ಹುಟ್ಟದೆ, ಆಕೆ ಹೊಟ್ಟೇಲಿ ಹುಟ್ಟ ಬೇಕಾಗಿತ್ತು. ಎಲ್ಲಿ ಹುಟ್ಟಿದರೇನು, ಈಗ ನಿನಗೆ ಕಮಲಕ್ಕನೇ ತಾಯಿ. ಆಕೇನ, ರಾಘಣ್ಣನ್ನ ಕೇಳದೆ ಏನು ಕೆಲಸಾನೂ ಮಾಡಬೇಡ. ಬೇರೆ ಯಾರ ಮಾತೂ ಕೇಳಬೇಡ. ಕೆಟ್ಟರೂ ಉದ್ಧಾರವಾದರೂ ಒಬ್ಬರನ್ನೇ ನಂಬಬೇಕು. ಕಮಲಕ್ಕ ಮನುಷ್ಯಳಲ್ಲ, ದೇವತೆ. ಆಕೇನ ನಂಬು.'

'ಅತ್ತೇ ವಿಷಯ ನನಗೆ ಗೊತ್ತಿಲ್ಲವೇ ಅಮ್ಮ?'

'ನಿನಗೆ ಗೊತ್ತಿಲ್ಲ ಅಂತ ಅಲ್ಲ ರತ್ನ. ಆದರೂ ಹೇಳಬೇಕಾದ್ದು ನನ್ನ ಕರ್ತವ್ಯ, ಹೇಳಿದೀನಿ. ಮಗೂನ ಚೆನ್ನಾಗಿ ನೋಡಿಕೋ. ನಾರಾಯಣನೇ ಎರಡು ಮನೇಗೂ ಬೆಳಕು'

—ಎಂದು ಹೇಳಿದಳು ಸೀತಮ್ಮ.

'ನನ್ನ ಬಾಳಿಗೂ ಅವನೇ ಬೆಳಕು. ಅವನೇ ನನ್ನ ಜೀವನದ ಆಧಾರ ಸ್ತಂಭ. ಅವನಿದಾನೇಂತಲೇ ನಾನು ಬದುಕಿರೋದೂನೂ. ಇಲ್ದಿದ್ರೆ ನಾನು ಬದುಕಿದ್ದು ಯಾವ ಲೋಕ ಉದ್ಧಾರ ಮಾಡಬೇಕಾಗಿತ್ತು.'

—ಎಂದಳು ರತ್ನಮ್ಮ.

ಮಗಳಿಗೆ ಹೇಳುವುದನ್ನೆಲ್ಲಾ ಹೇಳಿಯಾಯಿತೆಂದು ಮನಸ್ಸಿಗೆ ನಂಬಿಕೆಯಾದ ಮೇಲೆ ಲಕ್ಷ್ಮಣರಾಯ–ಸೀತಮ್ಮ ಕೆರೆಸಂತೆಹಳ್ಳಿಗೆ ಹಿಂದಿರುಗಿದರು.

ಮನೆಯಿಂದ ಹೊರಗೆ ಹೊರಡಲಾಗದ ರತ್ನಮ್ಮ ಮನೆಯೊಳಗೇ ಕಿಟಕಿಯಲ್ಲಿ ನಿಂತು, ಅವರು ಕುಳಿತ ಗಾಡಿ ಕಣ್ಣು ಮರೆಯಾಗುವವರೆಗೂ ನೋಡುತ್ತಿದ್ದಳು.

ನೋಡುತ್ತಾ ನೋಡುತ್ತಾ, ಕಣ್ಣುಮರೆಯಾದ ಗಾಡಿಯೊಂದಿಗೆ, ತಾನು ಆ ಮನೆಯಲ್ಲಷ್ಟೇ ಅಲ್ಲ, ಜಗತ್ತಿನಲ್ಲೇ ಏಕಾಕಿಯಾದಂತೆ ತೋರಿತು.

ಹಾಗೇ ನಿಂತಿದ್ದಳು.....

ಒಳಗೆ ಮಲಗಿದ ಮಗು ಎದ್ದು ಅತ್ತಾಗ ಅವಳಿಗೆ ತಾನು ಒಂಟಿಯಲ್ಲ ಎಂದು ಅರಿವಾಯಿತು. ನೀರು ತುಂಬಿದ ಕಣ್ಣುಗಳನ್ನು ಒರಸಿಕೊಂಡು ಮಗು ಮಲಗಿದ್ದ ಕಡೆಗೆ ಹೋದಳು.

ಅಂದಿನಿಂದ ಸೋಮನಹಳ್ಳಿಯಲ್ಲಿ ರತ್ನಮ್ಮನ ಸಂಸಾರ ಆರಂಭವಾಯಿತು.



ಕಪ್ಪು ಹೊಗೆಯನ್ನು ಕಾರುತ್ತಾ, ಮಂಕಾಗಿ ಉರಿಯುತ್ತಿದ್ದ ಸೀಮೆ ಎಣ್ಣೆ ಬುಡ್ಡಿಯ ಬೆಳಕಿನಲ್ಲಿ, ಆಕಳಿಸುತ್ತಾ, ಡಾಣಿ, ಕಾರಾಸೇವು, ಮೆಣಸಿನ ಕಾಯಿ, ಬೆಂಡು ಬತ್ತಾಸು, ಕೊಬ್ಬರಿಚಿನ್ನಿಗಳನ್ನಿಟ್ಟ ಮೊರಗಳ ಬದಿಯಲ್ಲಿ, ಏನೋ ಚಿಂತಿಸುತ್ತಾ ಕುಳಿತಿದ್ದಳು ಅಂಗಡಿಮನೆ ಈರಮ್ಮ.

ಇನ್ನಾರೂ ಗಿರಾಕಿಗಳು ವ್ಯಾಪಾರಕ್ಕೆ ಬರುವುದಿಲ್ಲವೆಂದು ಗೊತ್ತಿದ್ದರೂ, ಮಾಮೂಲಿನಂತೆ ಎಂಟು ಗಂಟೆಯಾಗಲಿ, ಅಂಗಡಿ ಬಾಗಿಲು ಹಾಕೋಣ ಎಂದುಕೊಂಡು, ಸೊಂಟಕ್ಕೆ ಸಿಕ್ಕಿಸಿಕೊಂಡ ಎಲೆಯಡಕೆಯ ಚೀಲವನ್ನು ತೆಗೆದುಕೊಂಡು, ಒಂದು ಹೋಳು ಅಡಿಕೆಯನ್ನು ಬಾಯಿಗೆ ಹಾಕಿಕೊಂಡು, ಎಲೆಗೆ ಸುಣ್ಣ ಹಚ್ಚುತ್ತಿರುವಾಗ, ಅಂಗಡಿಗೂ ಮನೆಗೂ ಮಧ್ಯವಲ್ಲಿದ್ದ ಗೋಣಿಯ ಚೀಲದ ತೆರೆಯನ್ನು ಸರಿಸಿ, ಚಿಕ್ಕರುದ್ರಿ—

‘ ವಿಠೋಬಣ್ಣ ಬಂದವರೆ ’

—ಎಂದಳು.

‘ ಬಂದಿದ್ರೆ, ಕುಂತ್ಕೋಂತ ಹೇಳು. ಅಂಗಡಿ ಬಾಕ್ಲ ಹಾಕ್ಕೊಂಡು ಬರ‍್ತೀನಿ.’

‘ ಏನೋ ಮಾತಾಡೋದದೆ ಅಂದರು....’

‘ ಅವನು ಮಾತಾಡೋದೇನು ದಿನಾ ಇದ್ದದ್ದೆ. ಇವತ್ತೇನು ಹೊಸ್ದಾ. ಬರ‍್ತೀನಿಂತ ಹೇಳೋಗು ’

—ಎಂದಳು ಈರಮ್ಮ ಬೇಸರ ತುಂಬಿದ ಧ್ವನಿಯಲ್ಲಿ.

‘ ಎಂಥದೋ ಅವಸರದ ಮಾತಾಡೋದದೆ....’

‘ ಹೇಳ್ದಷ್ಟು ಹೇಳೋಗೇ ಮೂದೇವಿ. ನಿಂಗ್ಯಾಕೆ ಬಾಳ ಮಾತು’

—ಎಂದು ಅಸಹನೆಯಿಂದ ಚಿಕ್ಕರುದ್ರಿಯನ್ನು ಗದರಿಸಿಕೊಂಡಳು ಈರಮ್ಮ. ಆ ಮಾತಿಗೆ ಎದುರಾಡಲಾಗದೆ ಚಿಕ್ಕರುದ್ರಿ ಒಳಗೆ ಜರುಗಿದಳು.

‘ ಎಂಟು ಗಂಟೆಹೊಡೆಯಾಕಿಲ್ಲ—ಹೇಳಿಕಳಿಸ್ದೋನಂಗೆ ಇಳಿದ್ಬಿಡ್ತಾನೆ. ಮಾಡೋಕೇನಾರ ಕೆಲ್ಸ ಇದ್ರೆ ಸರಿ. ಥೂ. ಒಳ್ಳೇ ಬೇವರ್ಸಿ ಸಾವಾಸ ಆಯ್ತು ’

—ಎಂದು ತನಗೆ ತಾನೇ ಗೊಣಗಿಕೊಳ್ಳುತ್ತಾ, ಜಿಡ್ಡಿನ ಕೈಯಲ್ಲಿ ಮುಟ್ಟಿ ಮುಟ್ಟಿ ಗಿಮುಟುಕಟ್ಟಿದ್ದ ಗಲ್ಲಾಪೆಟ್ಟಿಗೆಯಲ್ಲಿದ್ದ, ಆ ದಿನದ ವ್ಯಾಪಾರದ ಪುಡಿಗಾಸುಗಳನ್ನು ಎಣಿಸಿ, ಎಲೆಯಡಿಕೆಯ ಚೀಲದಲ್ಲಿ ಹಾಕಿಕೊಂಡು—

‘ ಏ ಚಿಕ್ಕರುದ್ರಿ, ಈ ಡಬ್ಬದಾಗೆ ರಾಗಿ ಎಷ್ಟವೊ ಅಳೀ ಬಾ ’

—ಎಂದು ಕೂಗಿ ಹೇಳಿ, ಸ್ವಲ್ಪ ಸ್ಥೂಲವಾದ ಮೈಯನ್ನು ನಿಧಾನವಾಗಿ ಮೇಲೆತ್ತಿ, ಅಂಗಡಿಯ ಬಾಗಿಲಿನ ಹಲಗೆಗಳನ್ನು ಜೋಡಿಸತೊಡಗಿದಳು. ಅಂಗಡಿಯ ಬಾಗಿಲನ್ನು ಹಾಕುವಾಗ ಆಕೆ, ಒಳಗೆ ತನಗಾಗಿ ಕಾದು ಕುಳಿತ ವಿಠೋಬನ ಚಿಂತೆಯನ್ನೇ ಮಾಡುತ್ತಿದ್ದಳು. ಯೋಚಿಸುತ್ತಾ ಯೋಚಿಸುತ್ತಾ, ಅವಳ ಮುಖವನ್ನು ಕವಿದಿದ್ದ ಬೇಸರ ತೊಲಗಿ, ಉತ್ಸಾಹ ಮೂಡಲಾರಂಭಿಸಿತು. ಬಳಕೆಯಾದರೂ, ಬೇಡವಾಗದಿದ್ದ ಬಯಕೆ, ಹೊಟ್ಟೆಯ ಹಸಿವನ್ನು ಮರೆಯಿಸಿ, ಅನ್ನಕ್ಕಿಂತಲೂ ಪ್ರಿಯವಾದ ಬೇರೆ ಹಸಿವು ಕೆರಳಿ—

‘ ಬರ್ತಾ ಅಷ್ಟು ಮಂಡಕ್ಕಿ, ಕಾರಾಸೇವು ತಗೊಂಡು ದೀಪ ಆರಿಸ್ಕೊಂಡು ಬಾ. ಹಂಗೆ ವಿಳ್ಳೇದೆಲೆ ಬುಟ್ಟೇಲಿ ಎಲ್ಡು ಬಿಳೀಎಲೆ ಇದ್ರೆ ನೋಡು ’

—ಎಂದು ಹೇಳಿ ಒಳಗೆ ಹೋದಳು.

ಆ ಮಾತನ್ನು ಕೇಳಿ, ಡಬ್ಬದಲ್ಲಿದ್ದ ರಾಗಿಯನ್ನು ಅಳೆಯುತ್ತಿದ್ದ ಚಿಕ್ಕರುದ್ರಿಯ ಮುಖದ ಮೇಲೆ ಕಳ್ಳನಗೆಯೊಂದು ಮೂಡಿ ಮಾಯವಾಯಿತು.

ಒಳಅಂಗಳದಲ್ಲಿದ್ದ ಕಟ್ಟೆಯ ಮೇಲೆ, ಗೋಡೆಯ ಬದಿಯಲ್ಲಿದ್ದ

ಹಾಸಿಗೆಗೆ ಮೈಯೊರಗಿಸಿ, ಈರಮ್ಮ ಅಂಗಡಿಯನ್ನು ಮುಚ್ಚಿಕೊಂಡು ಬರುವುದನ್ನೇ ಕಾಯುತ್ತಾ ಕುಳಿತಿದ್ದ ವಿಠೋಬ.

ಹಾಗೆ ಈರಮ್ಮನಿಗಾಗಿ ಕಾಯುತ್ತಾ ಇರುವುದು ಅವನಿಗೇನೂ ಹೊಸದಾಗಿರಲಿಲ್ಲ; ನಾಲ್ಕು ವರ್ಷದಿಂದ, ಈರಮ್ಮನ ಗಂಡ ಸತ್ತ ಮೂರನೆ ತಿಂಗಳಿನಿಂದಲೂ ಅಭ್ಯಾಸವಾಗಿತ್ತು. ಈರಮ್ಮನಿಗಾಗಿ ಅವನು ಅಲ್ಲಿ ಕಾಯುವುದು ಊರಿಗೆಲ್ಲಾ ತಿಳಿದ ವಿಷಯವಾಗಿತ್ತು.

ವಿಠೋಬನಿಗೆ ಜೀವನದಲ್ಲಿದ್ದ ಪ್ರಬಲವಾದ ಆಕಾಂಕ್ಷೆಗಳು ಎರಡೇ–ಇಸ್ಪೇಟು, ಈರಮ್ಮ. ಅವನ ದಿನದ ಇಪ್ಪತ್ತುನಾಲ್ಕು ಗಂಟೆಯೂ ಇವೆರಡು ಹವ್ಯಾಸಗಳಿಗೂ ಹಂಚಿಹೋಗಿತ್ತು. ಅವನ ಜೀವನವೂ ಅದಕ್ಕೆ ಅನುಕೂಲವಾಗೇ ಇತ್ತು.

ಹುಟ್ಟಿದ ವರ್ಷಕ್ಕೇ ತಂದೆಯನ್ನು ಕಳೆದುಕೊಂಡು, ತಾಯಿಯ ಮುಚ್ಚಟೆಯಲ್ಲಿ ಬೆಳೆದ ವಿಠೋಬನಿಗೆ, ಜೀವನದ ಹೊಣೆಗಾರಿಕೆ ಅರಿವಾಗುವ ವಯಸ್ಸಿನಲ್ಲಿ ಸುಖಾಭಿಲಾಷೆಯೊಂದಲ್ಲದೆ ಬೇರಾವುದೂ ಅರಿವಾಗಿರಲಿಲ್ಲ. ಯಾವ ಚಿಂತೆಯೂ ಇಲ್ಲದೆ, ಹಾಯಾಗಿ ಅಲೆಯುತ್ತಿದ್ದ ಅವನಿಗೆ ಮೊದಲು ಗಂಟು ಬಿದ್ದುದು ಇಸ್ಪೇಟಾಟದ ಹುಚ್ಚು.

ಅವನ ಇಸ್ಪೇಟಾಟದ ಗೆಳೆಯರಲ್ಲಿ ಅಂಗಡಿ ರುದ್ರಣ್ಣನೂ ಒಬ್ಬ. ರುದ್ರಣ್ಣ ನೆಪಮಾತ್ರಕ್ಕೆ ಅಂಗಡಿಯ ವ್ಯಾಪಾರಮಾಡುತ್ತಿದ್ದರೂ, ಅವನ ಮುಖ್ಯ ಕಸಬು ಇಸ್ಪೇಟಾಟವೇ ಆಗಿತ್ತು. ಅಂಗಡಿಯಮೇಲೆ ವ್ಯಾಪಾರಕ್ಕೆ ತನ್ನ ಹೆಂಡತಿ ಈರಮ್ಮನನ್ನು ಕೂಡಿಸಿ, ರುದ್ರಣ್ಣ, ತಾನು ಇಸ್ಪೇಟಾಟಕ್ಕೆ ಕೂಡುತ್ತಿದ್ದ. ಅವನ ಮನೆ ಇಸ್ಪೇಟಾಟದ ಗಡಂಗು ಆಗಿತ್ತು. ದಿನವೂ ಅಲ್ಲಿಗೆ ಇಸ್ಪೇಟಾಡಲು ಹೋಗುತ್ತಿರುವಾಗ ವಿಠೋಬನ ಕಣ್ಣು ಈರಮ್ಮನ ಮೇಲೆ ಬಿತ್ತು.

ಈರಮ್ಮ ಬಣ್ಣದಲ್ಲಿ ಕಪ್ಪಾಗಿದ್ದರೂ ಮೈ ಮಾಟ ಕಣ್ಣುತುಂಬುವಂತಹುದು. ಅಂಗಡಿಗೆ ವ್ಯಾಪಾರಕ್ಕೆ ಬಂದವರೂ ಒಂದುಗಳಿಗೆ ಕಣ್ಣು ಹಾಯಿಸಿ ಹೋಗುವಂತಿತ್ತು ಅವಳ ಮೈ. ಹಾಗಿರುವಾಗ, ಪ್ರಾಯದಲ್ಲಿ, ಮದುವೆ ಇಲ್ಲದೆ, ಒಂಟಿಯಾಗಿದ್ದ 'ಪಡ್ಡೆ' ವಿಠೋಬನ ಕಣ್ಣು ಅವಳತ್ತ ಸುಳಿಯಲು ತಡವಾಗಲಿಲ್ಲ. ಇಸ್ಪೇಟಾಟಕ್ಕೆ ಅಲ್ಲಿ ದಿನವೂ ಕಲೆಯುತ್ತಿದ್ದುದ

ರಿಂದ, ಪ್ರತಿದಿನವೂ ಅವರಿಬ್ಬರೂ ಒಬ್ಬರನ್ನೊಬ್ಬರು ನೋಡುವುದು ಅನಿವಾರ್ಯವಾಗಿತ್ತು. ಹಾಗೆ ನೋಡಿದಾಗ, ಅವಳ ದೃಷ್ಟಿ ತನ್ನತ್ತ ತಿರುಗಿದಾಗ, ವಿಠೋಬ ತುಟಿಯಮೇಲೆ ನಗೆಯನ್ನು ಸುಳಿಸುತ್ತಿದ್ದ. ಆ ನಗೆ ಈರಮ್ಮನಿಗೂ ಅಪ್ರಿಯವಾಗಿರಲಿಲ್ಲ. ಜೀವನದಲ್ಲಿ ಸರಸಸಲ್ಲಾಪವಾಡಿ ಸುಖಪಡಬೇಕಾದ ಕಾಲದಲ್ಲಿ, ಇಸ್ಪೇಟೇ ಎಲ್ಲವೂ ಎಂದುಕೊಂಡು ರುದ್ರಣ್ಣ ಹೆಂಡತಿಯನ್ನು ಅಂಗಡಿಗೊಪ್ಪಿಸಿಬಿಟ್ಟಿದ್ದರಿಂದ, ಅಲ್ಲಿ ಕಾಣಲಾಗದ ಸುಖವನ್ನು, ಸುಖ ದೊರೆತಲ್ಲಿ ಪಡೆಯಬೇಕೆಂಬ ಚಪಲ ಈರಮ್ಮನಲ್ಲಿಯೂ ಇತ್ತು. ಎಂತಲೇ ವಿಠೋಬನ ಪ್ರಾಯದ ಹಸಿದಕಣ್ಣು ತನ್ನ ಸುತ್ತ ಸುಳಿಯುವುದು ಅರಿವಾದಾಗ, ಆಕೆ ಅದರಿಂದ ಮುಖ ಮರೆಸಿಕೊಳ್ಳದೆ, ಕಿರುನಗೆಗೆ ಕಿರುನಗೆ, ಸರಸದ ಮಾತಿಗೆ ಸರಸದ ಮಾತಿನ ಪ್ರತ್ಯುತ್ತರ ಕೊಟ್ಟಿದ್ದಳು.

ರುದ್ರಣ್ಣ ಬದುಕಿರುವಷ್ಟು ದಿನ ಅದು ಆ ಮಟ್ಟದಲ್ಲೇ ಇತ್ತು.

ಆದರೆ ರುದ್ರಣ್ಣ ತೀರಿಕೊಂಡಮೇಲೆ, ಅವರಿಬ್ಬರ ಸ್ನೇಹಕ್ಕಿದ್ದ ಬಹುದೊಡ್ಡ ತೊಂದರೆ ನಿವಾರಣೆಯಾಗಿ, ಹಿಂದೆ ಕಣ್ಣುಗಳು ಮಾತ್ರ ಆಡುತ್ತಿದ ಎಡೆಯಲ್ಲಿ ಕೈ–ಮೈಗಳೂ ಆಡಲು ಅನುಕೂಲವಾಯಿತು.

ಮೊದಲಷ್ಟು ದಿನ ಅವರ ಈ ಸ್ನೇಹ ರಹಸ್ಯವಾಗಿತ್ತು. ಆದರೆ ಅದು ಬಹುದಿನ ರಹಸ್ಯವಾಗಿಯೇ ಉಳಿಯಲಿಲ್ಲ. ಆ ರಹಸ್ಯ ಬಯಲಾಗುವ ವೇಳೆಗೆ, ಅವರೂ, ಯಾರಿಗೆ ತಿಳಿದರೇನು ಎನ್ನುವ ಮಟ್ಟ ಮುಟ್ಟಿದ್ದರು.

ಇಸ್ಪೇಟು–ಈರಮ್ಮ ಇವೆರಡರಾಚೆ ಬೇರೆ ಜಗತ್ತೇ ಇಲ್ಲವೆಂದು ತಿಳಿದಿದ್ದ ವಿಠೋಬ. ಅವನು ಒಬ್ಬನೇ ಆಗಿದ್ದರೆ ಹಾಗೇ ಇದ್ದು ಜೀವನವನ್ನು ಮುಗಿಸುತ್ತಿದ್ದನೇನೋ–ಅವನ ಮುದಿತಾಯಿ, ದಿನಕ್ಕೊಂದೆರಡು ಬಾರಿಯಾದರೂ—

'ಮದುವೆ ಮಾಡಿಕೊಂಡು ನೀನೂ ಒಬ್ಬ ಮನುಷ್ಯನಾಗೋದು ಎಂದೋ. ಹೀಗೇ ಪೋಲಿ ತಿರುಗಿಕೊಂಡು ಸತ್ತರೆ ಏನು ಸಾರ್ಥಕ? ಏನಾದರೂ ಉದ್ಯೋಗ ಮಾಡಬಾರದೇ? ಈ ಆಟಾ ಎಲ್ಲಾ ಎಷ್ಟುದಿನ ನಡೀತದೆ?'

—ಎಂದು ಕುಟುಕಿ ನೆನಪಿಸದಿದ್ದರೆ.

ಆಕೆ ನೆನಪಿಸಿದಾಗ ವಿಠೋಬನಿಗೂ ಆ ಮಾತು ನಿಜ, ತಾನೂ ಏನಾ

ದರೂ, ಮಾಡಬೇಕು ದುಡಿಯಬೇಕು ಎನ್ನಿಸುತ್ತಿತ್ತು.

ಆದರೆ ಇಸ್ಪೇಟು ವಿನಾ ಅವನ ದುಡಿಮೆಗೆ ಬೇರೆ ಯಾವ ದಾರಿಯೂ ಇರಲಿಲ್ಲ. ಆ ಕಲ್ಪವೃಕ್ಷ ಕೈ ಕೊಟ್ಟಾಗ, ಬೀಡಿಗೆ ಕಾಸುಕೊಡಲು ಈರಮ್ಮ ಕಾಮಧೇನುವಾಗಿದ್ದಳು.

ಪ್ರಣಯದ ಮೊದಲ ದಿನಗಳಲ್ಲಿ ಯಾವಾಗಲಾದರೂ ವಿಠೋಬ ಹಣ ಬೇಕೆಂದು ಕೇಳಿದರೆ ಕೊಡಲು ಈರಮ್ಮ ಹಿಂಜರಿಯುತ್ತಿರಲಿಲ್ಲ. ಆಗ ಅವಳಿಗೆ ದುಡ್ಡಿಗಿಂತ ಪ್ರಣಯ ಮುಖ್ಯವಾಗಿತ್ತು. ಆದರೆ ಬರಬರುತ್ತಾ ಪ್ರಣಯದ ಕಾವು ಆರಿದಮೇಲೆ, ತನ್ನ ಹಣಕ್ಕೂ ಬೆಲೆ ಇದೆ ಎಂಬುದು ಅರಿವಾದ ಮೇಲೆ ವಿಠೋಬ ದುಡ್ಡು ಕೇಳಿದಾಗ—

' ದುಡಿಯೋ ಗಂಡಸು ಹೆಂಗಸನ್ನ ಕೇಳಬೇಕಾ? '

—ಎಂದು ಸಿಡುಕಲಾರಂಭಿಸಿದಳು.

ಇಬ್ಬರಲ್ಲೂ ಪ್ರಣಯದ ಪ್ರಖರತೆ ಕಡಮೆಯಾಗಿ, ಈರಮ್ಮ ಬರೀ ಕಾಮ ತೃಪ್ತಿಗಷ್ಟೇ ಅಲ್ಲ, ಆದಾಯಕ್ಕೂ ಮಾರ್ಗ ಎಂದುಕೊಂಡು ವಿಠೋಬ ಹಣ ಕೇಳುವುದು ಹೆಚ್ಚಾದ ಹಾಗೆ, ಈರಮ್ಮ ಈ ಮಾತಾಡುವುದೂ ಹೆಚ್ಚಾಯಿತು. ಬರಬರುತ್ತಾ ಮಾತಿನಲ್ಲಿ ಬಿರುಸೂ ಮೂಡಿದುದಲ್ಲದೆ, ನಾಲ್ಕಾರು ಬಾರಿ ಕೇಳಿ ಇಲ್ಲ ಎಂದು ಒರಟಾಗಿ ಅನ್ನಿಸಿಕೊಂಡಮೇಲೆ, ಜೀವನದಲ್ಲಿ ಹಣಕ್ಕೆ ಎಷ್ಟು ಬೆಲೆ ಇದೆ, ಅದನ್ನು ಸಂಪಾದಿಸುವುದು ಎಷ್ಟು ಕಷ್ಟ ಎನ್ನುವುದು ವಿಠೋಬನಿಗೂ ಮನವರಿಕೆಯಾಗಿ—

' ಥೂ, ಇದೆಂಥ ಜೀವನ? ಎಂಟಾಣೆ, ರೂಪಾಯಿಗೆಲ್ಲಾ ಇವಳ ಕೈಲಿ ಸೋಟೆ ತಿವಿಸಿಕೊಳ್ಳಬೇಕಾ ? ಏನಾದರೂ ಮಾಡಿ, ಎಲ್ಲರ ಹಾಗೇ ನಾನೂ ದುಡಿಯಬೇಕು '

—ಎನ್ನುವ ಭಾವನೆ ಮೂಡಿತ್ತು. ಆದರೆ ಹಣವನ್ನು ದುಡಿಯುವ ಮಾರ್ಗ ಮಾತ್ರ ಕಂಡಿರಲಿಲ್ಲ. ಎಲ್ಲಿಯಾದರೂ ಆ ದಾರಿ ಕಂಡೀತೇನೋ ಎಂದು ಹುಡುಕುತ್ತಲೇ ಇದ್ದ.

ವಿಠೋಬ, ಹೀಗೆ, ತನ್ನ ಜೀವನದ ಮಾರ್ಗವನ್ನು ಹುಡುಕುತ್ತಿರುವ ಕಾಲದಲ್ಲೇ ಸೀತಾರಾಮಯ್ಯ ತೀರಿಕೊಂಡದ್ದು.

ಸೀತಾರಾಮಯ್ಯ ಸತ್ತ ಎಂಬುದನ್ನು ಕೇಳಿದಾಗ, ಉಳಿದವರಂತೆ,

ಸೀತಾರಾಮಯ್ಯನ ಗೆಳೆಯನಲ್ಲೊಬ್ಬನಾಗಿದ್ದ ವಿಠೋಬನೂ ಎಲ್ಲರಂತೆಯೇ ಅತ್ತ.

ಆದರೆ ಆ ದುಃಖದ ಕಂಬನಿ ಆರುವ ಮೊದಲೇ, ಅವನ ಹೃದಯದಲ್ಲಿ ಆಸೆಯ ಕಿಡಿಯೊಂದು ಮೊಳೆತಿತ್ತು.

ಆ ಆಸೆಯನ್ನು ಈರಮ್ಮನ ಮೂಲಕ ಈಡೇರಿಸಿಕೊಳ್ಳುವ ಯೋಚನೆಯನ್ನು ಹೊತ್ತೇ ವಿಠೋಬ ಈರಮ್ಮನ ಬಳಿಗೆ ಬಂದಿದ್ದ.

# ೭

' ಬೇಗ ನೋಡಬೇಕು, ಅವಸರದ ಮಾತಾಡುವುದಿದೆ '

—ಎಂದು ಈರಮ್ಮನಿಗೆ ಚಿಕ್ಕರುದ್ರಿಯೊಂದಿಗೆ ಸುದ್ದಿ ಕಳಿಸಿದ ವಿಠೋಬ, ಈರಮ್ಮ ಅಂಗಡಿ ಬಾಗಿಲು ಹಾಕಿದ ಕೂಡಲೇ ತನ್ನನ್ನು ಕಾಣಲು ಬರಬಹುದು ಎಂದು ನಂಬಿದ್ದ.

ಆದರೆ ಈರಮ್ಮ ಬರದೆ, ಸ್ವಲ್ಪ ಹೊತ್ತಿನಲ್ಲಿ ಚಿಕ್ಕರುದ್ರಿಯೇ ಅವನ ಮುಂದೆ ಮಂಡಕ್ಕಿ, ಕಾರಾಸೇವು ತಂದಿಟ್ಟಳು.

' ಇನ್ನೂ ಅಂಗಡಿ ಬಾಗಲು ಹಾಕಲಿಲ್ವಾ? '

—ಎಂದು ಕೇಳಿದ ವಿಠೋಬ.

' ಹಾಕಾಯ್ತು.'

' ಮತ್ತೆ ಅವಳೆಲ್ಲಿ ?'

' ಊಟಕ್ಹೋಗಿರಬೇಕು.'

' ನನ್ನ ಮಾತಿಗಿಂತ ಊಟಕ್ಕೇ ಅವಸರಾನಾ? ನೋಡು—ಬೇಗ ಊಟಮಾಡಿಕೊಂಡು ಬರಬೇಕಂತೇಂತ ಹೇಳು '

—ಎಂದು ಪುನಃ ಚಿಕ್ಕರುದ್ರಿಯ ಕೈಲೇ ಹೇಳಿ ಕಳುಹಿಸಿ, ಅವಳು ತಂದಿಟ್ಟ ಮಂಡಕ್ಕಿ, ಕಾರಾಶೇವನ್ನು ಮುಟ್ಟದೆ, ಬೀಡಿ ಹೊತ್ತಿಸಿ ಹೊಗೆ ಯೆಳೆಯುತ್ತಾ, ಈರಮ್ಮ ಬರುವುದನ್ನೇ ಕಾದು ಕುಳಿತ.

ಚಿಕ್ಕರುದ್ರಿ ' ಬೇಗ ಹೋಗಬೇಕಂತೆ ' ಎಂದು ಹೇಳಿದರೂ, ಈರಮ್ಮ ಯಥಾಸಾವಕಾಶವಾಗಿ, ಕೈಕಾಲು ತೊಳೆದುಕೊಂಡು, ದೇವರ ಪಠಕ್ಕೆ

ನಮಸ್ಕಾರ ಮಾಡಿ, ನಿಧಾನವಾಗಿ ಊಟ ಮುಗಿಸಿಯೇ ಬಂದಳು, ವಿಠೋಬನ ಬಳಿಗೆ.

'ಬೇಗ ಬಾಂದ್ರೆ ಇಷ್ಟು ಹೊತ್ತಾ ಮಾಡೋದು?'

—ಎಂದು ಕೊಂಚ ಅಸಹನೆಯಿಂದ ಕೇಳಿದ ವಿಠೋಬ, ಬಂದೂ ತನ್ನನ್ನು ಮಾತನಾಡಿಸದೆ, ವೀಳೆಯದೆಲೆಗೆ ಸುಣ್ಣ ಹಚ್ಚುತ್ತಾ ಕುಳಿತ ಈರಮ್ಮನನ್ನು ನೋಡಿ.

'ನಿನ್ನಂಗೇ ನಂಗೂ ಕೆಲಸ, ಒಗತನ ಇಲ್ದೆ ಹೋಗಿದ್ರೆ, ಕರೀತಿದ್ದಂಗೇ ಓಡಿ ಬರಬೋದಾಗಿತ್ತು. ಆದ್ರೆ ನಿನ್ನ ಸುಖ ನಾನು ಪಡಕೊಂಡು ಬಂದಿಲ್ಲವಲ್ಲಾ, ಏನು ಮಾಡೋದು?'

'ನೀನು ಉಂಡು ಮಜವಾಗಿರು. ನಾನಿಲ್ಲಿ ನಾಯಿ ಹಂಗೆ ಕಾದ್ಕೊಂಡಿರ್ತೀನಿ. ಇದೇ ಅಲ್ವಾ ನಾನು ಪಡಕೊಂಡು ಬಂದಿರೋ ಸುಖ.'

'ಬೆಳಗ್ನಿಂದ ರಾತ್ರಿವರೆಗೂ ದುಡುದೋರು ಊಟಾನೂ ಮಾಡ್ಬಾರ್ದಾ? ನಿನ್ನಂಗ್ಗೇ ಹಗಲೂ ರಾತ್ರಿ ಇಸ್ಪೇಟಿಲೆ ಎಣಿಸ್ಕೊಂಡಿದ್ರೆ ನಾನೂ ಊಟಾ ಬಿಟ್ಟು ಹರಟೆ ಹೊಡ್ಕೊಂಡಿರ್ತಿದ್ದೆ. ಹೋಗ್ಲೇಳು. ಎರಡು ಗಳಿಗೆ ತಡವಾದ್ರೆ ಏನಾದ್ದು. ಎರಡಾಟದಲ್ಲಿ ಸೋಲೋದು ತಪ್ಪಿತು. ಅಷ್ಟೇ ಅಲ್ವಾ–ಇನ್ನೇನು ಕೊಳ್ಳೆ ಹೋಯ್ತದ್ದು?'

—ಎಂದಳು ಈರಮ್ಮ ನವಿರಾದ ವ್ಯಂಗ್ಯದ ಧ್ವನಿಯಲ್ಲಿ.

'ನನಗೆ ಯಾವಾಗಲೂ ಇಸ್ಪೇಟಾಟದ್ದೇ ಚಿಂತೆ, ಬೇರೆ ಚಿಂತೇನೇ ಇಲ್ಲಾಂತ ತಿಳುಕೊಂಡಿದೀಯಾ ನೀನು?'

'ಮತ್ತೆ–ಅದಲ್ದೆ ಇನ್ಯಾವ ಸಂಸಾರದ ಚಿಂತೆ ನಿಂಗೆ? ಹಚ್ಚಗಿದ್ದಲ್ಲಿ ಮೇಯೋದು, ಬೆಚ್ಚಗಿದ್ದಲ್ಲಿ ಮಲಗೋದು. ಇಷ್ಟೇ ಅಲ್ವಾ?'

'ಇವತ್ತಿನವರೆಗೂ ಹಾಗೇ ಇದ್ದರೆ–ಯಾವತ್ತೂ ಹೀಗೇ ಇರ್ತೀನೀ ಅಂತಾನೇ? ಚಿಂತೆ ಯಾವೋನಿಗೆ ತಪ್ಪಿದ್ದು.'

'ಚಿಂತೆ–ನಿಂಗಾ!'

—ಆಶ್ಚರ್ಯ ಸೂಚಿಸುವ ಧ್ವನಿಯಲ್ಲಿ ಕೇಳಿದಳು ಈರಮ್ಮ—

'ನೀನು ಚಿಂತೆಮಾಡೋದು, ಕಲ್ಲುಬಸವ ಹುಲ್ಲು ಮೇಯೋದೂ ಎರಡೂ ಒಂದೇ ದಿನ.'

‘ ಅಷ್ಟೇ ಅಂತೀಯಾ ? ’

‘ಅಷ್ಟೇ–ಅಥವಾ ಚಿಂತೆ ಅಂದ್ರೂ ಮತ್ತೇನು. ಆಟಕ್ಕೆ ಕಾಸಿಲ್ಲವೇನಾ? ಅದೇ ತಾನೇ ನಿನ್ನ ಚಿಂತೆ. ಅದಲ್ಲದೇ ನಾನು ಕಾಣದಂಥ ಚಿಂತೆ ಇನ್ನೇನು ಬಂತು ನಿನಗೆ. ಆ ಆಟ ಎಲ್ಲಾ ಇರ್‍ಲಿ. ಈಗ್ಲೆ ಹೇಳ್ಬಿಡ್ತೀನಿ. ನನ್ತವ ಕಾಸು ಮಾತ್ರ ಕೇಳಬ್ಯಾಡ.’

‘ ಮತ್ತಿನ್ಯಾರನ್ನ ಕೇಳಲಿ ?’

‘ ಊರ ಮುಂದಿನ ಹನುಮಪ್ಪನ್ನ ಕೇಳು. ನಾನೇನು ನಿನ್ನ ಬ್ಯಾಂಕಾ ? ಜೋಬಲ್ಲಿ ಕಾಸು ತೀರೋಯ್ತು ಅಂತಿದ್ದಾಗೇ ಬರ್‍ತೀಯಲ್ಲ. ಗಲ್ಲಾದಾಗೇನು ದುಡ್ಡಿನ ಗಿಡ ಹಾಕಿವ್ನಿ ಅದ್ಕೊಂಡಿದೀಯ ? ಅದೊಂದ್ಮಾತು ಬಿಟ್ಬುಡು–ಹಾಯಾಗಿರೋಣ.’

‘ ಹೋಗ್ಲಿ. ಅದನ್ನು ಬಿಟ್ಬುಬಿಡ್ತೀನಿ–ನನ್ನದೊಂದು ಮಾತು ನೀನು ಕೇಳಿದ್ರೆ.’

‘ಏನು, ‘ಇದೊಂದ್ಸಲಾ ಕೊಟ್ಬಿಡು. ಮತ್ತೆ ಕೇಳಾಕಿಲ್ಲ’ ಅನ್ನೋದು ತಾನೆ. ಆ ಮಾತಾಗ್ಲೆ ಸಾವಿರದ್ವೈನೂರುಸಲ ಆಯ್ತು.’

‘ ನೋಡು ಮತ್ತೆ–ದುಡ್ಡಿನ ಮಾತಲ್ಲ ಅಂದ್ರೂ ಮತ್ತದೇ ಮಾತು ತಗೀತಿಯಲ್ಲ. ನಾನು ಹೇಳೋ ಮಾತಾದ್ರೂ ಕೇಳ್ತಿಯೊ ಇಲ್ವೋ–ಅಷ್ಟಾರ ಹೇಳ್ಬಿಡು’

—ಮಾತೇ ಮುಗಿಸುವವನಂತೆ ಹೇಳಿದ ವಿಠೋಬ.

‘ ದುಡ್ಡಿನ ಮಾತಲ್ಲ ಅಂದ್ರೆ, ಮಾರಾಯನಾಗಿ ಹೇಳು. ಬೆಳಗಿನ ಗಂಟಾ ಹೇಳಿದ್ರೂ ಕೇಳ್ತೀನಿ ’

—ಎಂದಳು ಈರಮ್ಮ ತಾನೂ ಒಂದು ಕಂಭಕ್ಕೆ ಮೈ ಒರಗಿಸಿ.

ಈರಮ್ಮ ತನ್ನ ಮಾತು ಕೇಳಲು ಸಿದ್ಧವಾಗಿ ಕುಳಿತುದನ್ನು ಕಂಡು ವಿಠೋಬ, ತನ್ನ ಮನಸ್ಸಿನಲ್ಲಿಯ ಮಾತನ್ನು ಹೇಗೆ ಹೇಳುವುದೆಂದು ಒಂದು ಗಳಿಗೆ ಚಿಂತಿಸಿ ಹೇಳಿದ :

‘ ಮಾತೇನೋ ದುಡ್ಡಿನದೆ. ಆದರೆ—’

‘ ಅದೇ, ಮತ್ತೆ ತಗೆದಲ್ಲಾ, ನಿನ್ನ ವಿದ್ಯಾನ. ಅದಲ್ಲಾ ಕಣೋ ದಾಸಯ್ಯ ಅಂದ್ರೆ ಗೋಡೆ ಹಿಂದೆ ಹೋಗಿ ಟಿಂಗ್ ಅಂದನಂತೆ ಹಂಗಾಯ್ತು

ನಿನ್ನ ಮಾತು '

—ಎಂದಳು ಈರವ್ಮ ಅವನ ಮಾತನ್ನು ಅರ್ಧಕ್ಕೇ ತಡೆದು.

' ಥತ್. ಹಾಳಾಗಿಹೋಗ್ಲಿ ಬಿಡು. ನಿನ್ನ ಮಾತೇ ನಿನಗೆ. ನನ್ನ ಮಾತು ಕೇಳೋಕೂ ಇಷ್ಟ ಇಲ್ದೆ ಹೋದ್ರೆ ಬೆಂಕೀಲಿ ಬಿದ್ದುಹೋಗಲಿ '

—ಎಂದು ವಿಠೋಬ ಸಹನೆಸೋತು ಉದ್ವೇಗದಿಂದ ನುಡಿದು, ಹೊರಡಲು ಎದ್ದುನಿಂತ.

' ಐ. ನಾನು ಮಾತಾಡಿದ್ರೆ ಇಷ್ಟು ಸಿಟ್ಟಾ ? ಪ್ರೀತೀಗೇನಾರ ಅಂದ್ರೆ ಹಿಂಗೆ ಎದ್ದುಬಿಡೊದಾ, ಬಾ '

—ಎಂದು ಈರಮ್ಮ ಎದ್ದುನಿಂತ ವಿಠೋಬನ ಕೈ ಹಿಡಿದು ಹತ್ತಿರ ಕೂಡಿಸಿಕೊಂಡಳು. ಅವಳ ಕೈ ಸೋಕಿದಮೇಲೆ ವಿಠೋಬನ ಸಿಟ್ಟೂ ಶಾಂತವಾಗಿ—

' ಮತ್ತೇನ್ಮಾಡ್ಲಿ ಹೇಳು. ನಾನು ಯಾವಾಗ್ಲೂ ಬರೋದು ದುಡ್ಡಿಗೇಂತಲೇ ತಿಳಿದುಕೊಂಡ್ಯಾ. ಪ್ರೀತೀಲಿ ಏನೋ ಹೇಳಬೇಕೂಂತ ಬಂದರೆ, ನಿನಗೆ ನಿನ್ನ ದುಡ್ಡೇ ಹೆಚ್ಚಾಯಿತು. ನಿನ್ನೇನು ಹಣದಲ್ಲೇಹಾಕಿ ಹೂಳ್ತಾರಾ?'

—ಎಂದು ಕೇಳಿದ.

' ಛಿ. ಹಂಗನ್ನಬಾರದು. ಪ್ರೀತಿಗೆ ಪ್ರೀತಿ, ವ್ಯವಾರಕ್ಕೆ ವ್ಯವಾರ. ಅದು ಶಿವ ಮೆಚ್ಚೋ ಮಾತು. ನಿನ್ನ ಪ್ರೀತಿ ನಾನು ಬ್ಯಾಡ ಅಂದ್ನಾ. ದುಡ್ಡು ಕಾಸು ಅಂದ್ರೆ........ಅದು ಬೇರೆ ಆಯ್ತು. ಅದೂ ಇದೂ ಕಲಸಬಾರ್ದು. ಪ್ರೀತಿ ಮಾತಾಡು. ನನ್ನ ಜೀವಾನೇ ನಿಂಗೆ ಒಪ್ಪಿಸಿಲ್ವಾ ? '

—ಎಂದು ಅವನ ಮೈಯನ್ನು ನೇವರಿಸುತ್ತಾ ಮೃದುವಾಗಿ ಕೇಳಿದಳು ಈರಮ್ಮ.

' ನೀನು ಹೀಗೆ ಮಾತಾಡೋದು ಕಲಿತಿರೋ ಹೊತ್ತಿಗೇ ಹಳಸಲು ತಿಂಡಿ ಮಾರಿ, ಬಂಗಾರದ ಗಟ್ಟೀನೇ ಜೋಡಿಸ್ತಾ ಇರೋದು. ಅದೆಲ್ಲಾ ಹೋಗ್ಲಿ, ಸ್ವಲ್ಪ ನಾನು ಹೇಳೋದು ಕೇಳು, ನನ್ನ ಮಾತಿನಿಂದ ನಿನ್ನ ವ್ಯವಹಾರಾನೂ ಉಳಿಯುತ್ತೆ, ಪ್ರೀತೀನೂ ಕೆಡೋಲ್ಲ. '

' ಅಂಥ ಮಾತಾ ? '

' ಹೂ.'

' ಹಂಗಾದ್ರೆ ಹೇಳು. ಅದ್ಯಾಕೆ ಮುಂಡಕ್ಕಿ ತಿನ್ನಲೇ ಇಲ್ವಲ್ಲಾ. ಒಂದ್ನೂರು ಈರುಳ್ಳಿ ತರಸ್ಲಾ........'

' ಅದೆಲ್ಲಾ ಆಮೇಲೆ. ನೀನೇ ಹೇಳಲಿಲ್ವಾ—ವ್ಯವಹಾರದ ಹೊತ್ತಿನಲ್ಲಿ ವ್ಯವಹಾರ, ಪ್ರೀತಿ ಹೊತ್ತಿನಲ್ಲಿ ಪ್ರೀತಿ ಅಂತ. ಈಗ ಮೊದಲು ನಾನು ಬಂದಿರೋ ವ್ಯವಹಾರದ ಮಾತು ಮುಗಿಸೋಣ. ಆಮೇಲೆ ಇದೆಲ್ಲಾ ಇದ್ದೇ ಇದೆ.'

' ಆಯ್ತು. ನಿನ್ನ ಮನಸ್ಸಿನಂಗೇ ಆಗ್ಲಿ. ಅದೇನೋ ಹೇಳು'

—ಎಂದಳು ಈರಮ್ಮ ಕಡೆಗೆ ವಿಠೋಬನ ವ್ಯವಹಾರದ ಮಾತು ಕೇಳುವ ನಿರ್ಧಾರಕ್ಕೆ ಬಂದು.

' ಸೀತಾರಾಮಯ್ಯ ನಿನ್ಹತ್ತಿರ ಅಷ್ಟು ದುಡ್ಡು ಸಾಲ ತಗೊಂಡಿದ್ದ, ಅಲ್ವಾ? '

—ಎಂದ ವಿಠೋಬ ತಾನು ಹೇಳಬೇಕೆಂದಿದ್ದ ವಿಷಯಕ್ಕೆ ಪೀಠಿಕೆ ಹಾಕಿ.

' ಹೂ.'

' ಎಷ್ಟು ತಗೊಂಡಿದ್ದ ? '

' ನೀನೇ ಅಲ್ವಾ ಕೊಡಿಸಿದ್ದು. ನಿಂಗೇ ಮರತೋಯ್ತು ? '

' ಕೊಟ್ಟೋಳು ನೀನು, ತಗೊಂಡೋನು ಸೀತಾರಾಮಯ್ಯ. ನಿಮ್ಮಿಬ್ಬರಿಗೂ ನೆನಪಿರಬೇಕೇ ಹೊರ್ತು, ನನಗೆ ಹೇಗೆ ನೆನಪಿರುತ್ತೆ? '

' ನಿನ್ನ ಮಧ್ಯಸ್ಥಿಕೇಲಿ ವ್ಯವಹಾರ ಮಾಡಿದ್ರೆ ಇಷ್ಟೇ ಅನ್ನು.... '

' ನೋಡು. ಈಗ ಅಡ್ಡ ಮಾತಾಡಬೇಡ. ನಾನು ಕೇಳಿದ್ದಕ್ಕೆ ಹೇಳು.'

' ಎಷ್ಟಾದ್ರೂ ಆಗ್ಲೇಳು. ಈಗೇನು ಅವರ ಸುದ್ದಿ. ಯಾರಾದ್ರೂ ಆ ಸಾಲ ತೀರಿಸೋಕೆ ಬಂದಾಗತಾನೇ ಅದರ ಮಾತು? '

' ಹಾಗಲ್ಲ. ಈಗ ಬೇಕಾಗಿದೆ.'

' ಯಾರು ಕೇಳಿದ್ರು ? ರತ್ನಮ್ಮನಾ ? '

' ಅಲ್ಲ.'

' ಮತ್ತೆ ? ರಾಘಣ್ಣನಾ ? '

‘ ಊಹೂ. ಅವರು ಯಾರೂ ಅಲ್ಲ. ನನಗೇ ಬೇಕಾಗಿತ್ತು.’

‘ಯಾಕೆ? ನೀನು ತೀರಸ್ತೀಯಾ ಅದನ್ನ? ನೀನು ತೀರಸೋದಾದ್ರೆ ಹೇಳು—ಬಡ್ಡಿ ಎಲ್ಲಾ ಬಿಟ್ಬಿಡ್ತೀನಿ.’

‘ ನಾನೂ ತೀರಿಸೊಲ್ಲ, ಯಾರೂ ತೀರಿಸಲಿಕ್ಕೆ ಬಂದಿಲ್ಲ ಈಗ.’

‘ ಹಂಗಂದ್ರೆ ಮತ್ಯಾಕೆ ಅದರ ಮಾತು ? ’

‘ ಆ ದುಡ್ಡು ನಿನಗೆ ಬರಬೇಕೋ ಬೇಡವೋ ? ’

‘ ಅದೇನಂಗೆ ಕೇಳ್ತಿ. ಬರಬೇಕೋ ಬೇಡವೋ ಅಂತ. ಕಷ್ಟಪಟ್ಟು ದುಡಿದು ಕೊಟ್ಟ ದುಡ್ಡು ಅದು.’

‘ ಅದು ನನಗೂ ಗೊತ್ತು. ಅದಕ್ಕೇ ಕೇಳಿದ್ದು—ಎಷ್ಟೂಂತ.’

‘ ತೀರಿಸೋನೇ ಇಲ್ಲಾಂದಮ್ಯಾಲೆ ಆ ಲೆಕ್ಕ ಯಾಕೆ ? ’

‘ನಿನ್ನ ದುಡ್ಡು ನಿನಗೆ ಬರೋ ದಾರಿ ತೋರಿಸಲಿಕ್ಕೆ. ಸೀತಾರಾಮಯ್ಯ ಬದುಕಿದ್ರೆ ನಿನ್ನ ದುಡ್ಡು ಬಡ್ಡಿಗೆ ನೀನೇನೂ ಯೋಚನೆ ಮಾಡಬೇಕಾಗಿರ ಲಿಲ್ಲ. ಯಾವ ಗಳಿಗೇಲಿ ಬೇಕಾಗಿದ್ರೂ ಸೀತಾರಾಮಯ್ಯ ತಂದು ಕೊಡೋನು.’

‘ನಿಜ, ಹಂಗಂತಾಲೇ ಕೊಟ್ಟಿದ್ದು. ಅದಕ್ಕೇ ಇವತ್ತಿನವರೆಗೆ ಅಸಲು ಇರಲಿ ಬಡ್ಡಿ ಕೂಡಾ ಕೇಳಿರಲಿಲ್ಲ.’

‘ಸರೀನೇ. ಆದ್ರೆ ಈಗ ಅವನೇ ಇಲ್ವಲ್ಲ.’

‘ ಹಿಂಗಾಗ್ತದೆ ಅಂತ ಯಾರು ಕಂಡಿದ್ರು .... ’

‘ ಯಾರೂ ಕಂಡಿರಲಿಲ್ಲ. ಹಿಂಗಾಗೋದು ಯಾರಿಗೂ ಬೇಕಾಗಿರ ಲಿಲ್ಲ. ಆದ್ರೂ ಈಗ ಹಾಗೆ ಆಗ್ಹೋಗಿದೆ. ಹಾಗಾಯ್ತು ಅಂತ ನೀನು ಕೊಟ್ಟ ಸಾಲ ಬಿಟ್ಟು ಬಿಡ್ತೀಯಾ ? ’

‘ ಅದ್ಯಾಕೆ ಬಿಡೋದು. ಇವತ್ತಲ್ಲ ನಾಳೆ ಕೇಳಿ ವಸೂಲು ಮಾಡಿ ಕೋತೀನಿ.’

‘ ಹ್ಯಾಗೆ ವಸೂಲು ಮಾಡ್ಕೋತೀಯ ? ’

‘ ಯಾಕೆ—ರತ್ನಮ್ಮ ಇಲ್ವೆ. ಸೀತಾರಾಮಪ್ಪ ಬರಕೊಟ್ಟ ಪತ್ರ ತೋರಿಸಿ ಕೇಳ್ತೀನಿ.’

‘ ನೀನು ಕೇಳಬಹುದು. ಆದರೆ ಕೊಡಲಿಕ್ಕೆ ಆಕೆ ಹತ್ತಿರ ಹಣ

ಎಲ್ಲಿದೆ? ಮೊನ್ನೆ ಸೀತಾರಾಮಯ್ಯನ ಕರ್ಮಾಂತರಕ್ಕೇ ನಾವೆಲ್ಲಾ ಚಂದಾ ಹಾಕಬೇಕಾಯಿತು. ಅದಕ್ಕೇ ದುಡ್ಡಿರಲಿಲ್ಲ, ಇನ್ನು ನಿನ್ನ ಸಾಲಾ ಕೊಡ ಲಿಕ್ಕೆ ಎಲ್ಲಿದೆ? '

'ಎಲ್ಲಿದೆ ಅಂದ್ರೆ ನಂಗೇನು ಗೊತ್ತು. ಸಮಯಾಂತ ಸಾಲ ಕೊಟ್ಟಿದ್ದೇ ನನ್ನ ತಪ್ಪಾ? ಒಳ್ಳೇ ಮಾತ್ನಲ್ಲಿ ಕೊಟ್ರಾಯ್ತು, ಇಲ್ಲಾಂದ್ರೆ ಕೋರ್ಟು ಕಛೇರಿ ಇಲ್ವಾ? '

'ಪಾಪ–ಗಂಡನ್ನ ಕಳಕೊಂಡು ಸಮುದ್ರದಲ್ಲಿ ಬಿದ್ದ ಹಾಗಿರೋ ರತ್ನಕ್ಕನ್ನ ಕೋರ್ಟಿಗೆ ಎಳೀತೀಯ ನೀನು? ಹಂಗೇನಾದ್ರೂ ಮಾಡಿದ್ರೆ ಈ ಊರ್ನಲ್ಲಿ ನೀನು ಮುಕ ಇಟ್ಟುಕೊಂಡು ಬಾಳೋಕಾಗ್ತದಾ? '

'ಮತ್ತೇನ್ಮಾಡೋಣಾಂತೀಯ? ಕೊಟ್ಟ ಗಂಟು ನನ್ನದಲ್ಲಾಂತ ಬಿಟ್ಬಿಡು ಅನ್ತೀಯ?'

—ವಿಠೋಬ ಆ ಮಾತನ್ನೇ ಎಲ್ಲಿ ಹೇಳುತ್ತಾನೋ ಎಂದು ಹೆದರಿ ಕೇಳಿದಳು ಈರಮ್ಮ.

'ಎಲ್ಲಾ ಬಿಟ್ಟು ನಾನೆಲ್ಲಾದರೂ ನಿನ್ನ ಗಂಟು ಮುಳುಗೋ ಮಾತು ಹೇಳ್ತೀನೆಯೇ? ಅಂಥಾ ಯೋಚನೇನೇ ನನಗಿಲ್ಲ.'

'ಮತ್ತೆ?'

'ಗಂಟೂ ಉಳೀಬೇಕು, ನಂಟೂ ಉಳೀಬೇಕು. ಅಂಥ ಯೋಚನೆ ನಂದು'

—ತನ್ನ ಬೆನ್ನನ್ನು ತಾನೇ ತಟ್ಟಿಕೊಳ್ಳುವವನಂತೆ ಹೇಳಿದ ವಿಠೋಬ.

'ಹಂಗಾ–ಅದೇನದು ಹೇಳಾರ ಹೇಳು. ಕೇಳೋಣ'

—ಎಂದಳು ಈರಮ್ಮ ನಿಜವಾದ ಆಸಕ್ತಿಯಿಂದ.

'ಹೂ. ಅಂಥದೇ ಪ್ಲಾನು. ಅದಕ್ಕೇ ಕೇಳಿದ್ದು—ಸೀತಾರಾಮಯ್ಯ ನಿನ್ನ ಹತ್ತಿರ ತಗೊಂಡಿದ್ದು ಎಷ್ಟು?'

'ನಿಕ್ಕಿ ನೂರುರೂಪಾಯಿ. ಥಳಥಳಾಂತ ಹೊಳೆಯೋ ಬೆಳ್ಳಿ ರೂಪಾಯಿ ಎಣಿಸಿ ಕೊಟ್ಟಿದ್ದು.'

'ಎಷ್ಟು ವರ್ಷ ಆಯ್ತು ಕೊಟ್ಟು?'

'ಮದುವೇಗಿಂತ ಮುಂಚೇನೇ.'

‘ ಅಂದರೆ ಆರೇಳು ವರ್ಷದ ಮೇಲಾಯ್ತು.’

‘ ಹೂ.’

‘ ಬಡ್ಡಿ ಎಷ್ಟೂಂತ ಮಾತಾಡಿದ್ದೆ ? ’

‘ ಶೇಕಡಾ ಎಲ್ಡು ರೂಪಾಯಿ. ಅಷ್ಟೆ.’

—ಆ ಬಡ್ಡಿಯ ದರವೇನೂ ಹೆಚ್ಚಲ್ಲ ಎಂಬ ಧ್ವನಿಯಲ್ಲಿ ಹೇಳಿದಳು ಈರಮ್ಮ.

‘ ಅಷ್ಟೆ. ಪಾಪ—ಧರ್ಮದ ಬಡ್ಡಿ ಅಲ್ವಾ. ಸೀತಾರಾಮಯ್ಯ ಒಪ್ಪಿದ್ನಾ ಈ ಮನೆಹಾಳು ಬಡ್ಡಿ ಕೊಡೋಕೆ ?’

‘ ಒಪ್ಪೇ ಮತ್ತೆ ಪತ್ರ ಬರಕೊಟ್ಟಿದ್ದು.’

‘ ಅದರಲ್ಲಿ ಬಡ್ಡಿ ಬಾಚಿಗೇನಾರ ಕೊಟ್ಟಿದ್ದನಾ ?’

‘ ಊಹೂ. ಮೂರು ಕಾಸೂ ಕೇಳಬ್ಯಾಡ. ನಾನೂ ಕೇಳ್ಳಿಲ್ಲ. ಅಂತೋರಮ್ಯಾಲೆ ದುಡ್ಡಿದ್ರೆ ಎಲ್ಹೋಗ್ತದೆ ಹೇಳು ? ಅಲ್ದೆ ಸಮಯದಾಂಗ ಕೊಟ್ಟು ಆಮೇಲೆ ಕೊಡೂಂತ ಕತ್ತಿನಮೇಲೆ ಕುಂತ್ಕಂಡ್ರೆ ಅದೇನು ಚಂದ ?’

‘ ಪಾಪ, ಪಾಪ ! ಎಲ್ಲಾರ ಹಾಗೆ ಮಾಡಿದೋರುಂಟಾ ? ಧರ್ಮ ರಾಯನ ಮೊಮ್ಮಗಳು ನೀನು ! ಹಾಳಾಗಲಿ–ಈಗ ಅಸಲು ಬಡ್ಡಿ ಸೇರಿ ಎಷ್ಟಾಯ್ತು ?’

‘ ನೀನೇ ಲೆಕ್ಕ ಹಾಕು ವರ್ಷಕ್ಕೆ ಇಪ್ಪತ್ನಾಕು ರೂಪಾಯಿ. ಆರು ವರ್ಷಕ್ಕೆ ಅಂತ ಲೆಕ್ಕಹಾಕಿದ್ರೂ ನೂರಾ ನಲವತ್ತನಾಲ್ಕಾಯಿತು ಅಲ್ವ ? ನಾಲಕ್ಕು ರೂಪಾಯಿ ಬಿಟ್ಟರೂ ನೂರಾನಲವತ್ತಾಯಿತು.’

‘ ಅಸಲು ನೂರು, ಬಡ್ಡಿ ನೂರಾನಲವತ್ತು. ಚೆನ್ನಾಗಿದೆ ನಿನ್ನ ವ್ಯವ ಹಾರ. ಹರಿಶ್ಚಂದ್ರನ ಹತ್ತಿರ ವಿಶ್ವಾಮಿತ್ರ ಕೂಡಾ ಇಂಥ ಬಡ್ಡಿ ತಗೊಂಡಿ ದ್ದನೋ ಇಲ್ಲವೋ.’

‘ ಬಡ್ಡಿ ಹೆಚ್ಚೂಂತೀಯಲ್ಲ ಸಮಯಕ್ಕೆಕೊಟ್ಟಿದನ್ನ ನೆನಸದೆ. ಇದಕ್ಕೇ ಮತ್ತೆ ಕಲಿಗಾಲದಲ್ಲಿ ಒಬ್ಬರಿಗೆ ಒಬ್ಬರು ಸಹಾಯವಾಗಬಾರದು ಅನ್ನೋದು. ಅದೆಲ್ಲಾ ಹೋಗ್ಲಿ—ಈಗದು ಬರೋಕೇನಾದ್ರೂ ದಾರಿ ಇದೇನು ?’

‘ ಇದೆ.’

‘ ಏನು ?’

—ಆತುರವಾಗಿ ಕೇಳಿದಳು ಈರಮ್ಮ.

‘ ನೀನು ನಾನು ಹೇಳೋ ಕೆಲಸ ಮಾಡಿದರೆ, ನಿನ್ನ ಸಾಲ ನಾನು ತೀರ ಸ್ತೀನಿ.’

‘ ಸೈ, ಸೈ, ರತ್ನಮ್ಮನ್ನೇ ಕೇಳಿದರೆ ಅಸಲಾದರೂ ಕೊಟ್ಟಾಳು, ನಿನ್ನ ನಂಬಿಕೊಂಡರೆ ಅಸಲು ಬಡ್ಡಿ ಎರಡೂ ಮರೀಬೇಕಾದ್ದೆ! ’

‘ ವಿಷಯ ಏನೂಂತ ಕೇಳ್ದೆ ಮಾತಾಡ್ತೀಯಲ್ಲ. ನಾನು ಹೇಳೋದು ಕೇಳು, ಕಡೆಗೆ ನಿನಗೆ ನಂಬಿಕೆ ಆಗ್ದೆ ಹೋದರೆ ಬಿಡು.’

‘ ಆಯ್ತು, ಅದೇನು ಹೇಳು ?’

‘ ನೋಡು. -ಈಗ ಸೀತಾರಾಮಯ್ಯ ತೀರಿಕೊಂಡ. ಈಗ ಅವನ ನಂಜಾಪುರದ ಶಾನುಭೋಕಿ ನೋಡಿಕೊಳ್ಳೋಕೆ ಯಾರಾದರೂ ಒಬ್ಬರು ಬೇಕಲ್ಲ....’

‘ ಯಾಕೆ ಅವನ ಮಗ ಇಲ್ವಾ ?’

‘ ಮಗ ಇನ್ನೂ ನಾಲ್ಕು ವರ್ಷದ ಮೈನರು. ಅವನಿಗೆ ಹದಿನೆಂಟು ವರ್ಷ ಆಗಿ ಮೆಜಾರಿಟಿಗೆ ಬಂದಮೇಲೆ ತಾನೇ ಅವನು ಶಾನುಭೋಕಿ ಕೆಲಸ ನೋಡೋದು. ಅಲ್ಲೀವರೆಗೆ ಆದನ್ನು ಯಾರಾದರೂ ಒಬ್ಬರು ಮಾಡಿಕೋ ಬೇಕೋ ಬ್ಯಾಡವೋ ?’

‘ ಹೌದು. ’

‘ ರತ್ನಕ್ಕ ಈಗ ಮನಸ್ಸು ಮಾಡಿದರೆ ಆ ಕೆಲಸಾನ ನನಗೆ ವಹಿಸಿ ಕೊಡಬಹುದು.’

‘ ಭಾಳ ಒಳ್ಳೇ ಸ್ನೇಹಿತ ನೀನು!’

—ಎಂದಳು ಈರಮ್ಮ ಅಣಕದ ಧ್ವನಿಯಲ್ಲಿ.

‘ ಯಾಕೆ ? ’

‘ ಮತ್ತೆ ಗಂಡನ್ನ ಕಳಕೊಂಡು ಆ ಹೆಣ್ಣು ಮಗಳು ಮುಂದೇನು ಗತಿ ಭಗವಂತಾ ಅಂತ ಕಣ್ಣು ಕಣ್ಣು ಬಿಡ್ತಾ ಇದ್ದರೆ, ಏನಾರ ಕೈಲಾದ ಸಹಾಯ ಮಾಡೋದುಬಿಟ್ಟು, ಸೀತಾರಾಮಯ್ಯನ ಪೋಟಗಿ ಹಣಕ್ಕೇ ಖಾರ ಆರೀತೀ ಯಲ್ಲಾ. ಇದೇನಾ ಸ್ನೇಹಿತರ ಲಕ್ಷಣ ? ’

‘ ನಮ್ಮಪ್ಪನಾಣೆ—ನನಗೆ ಪೋಟಗಿ ಹಣದ ಮೇಲೆ ಕಣ್ಣಿಲ್ಲ. ಬೇಕಾ ದರೆ ಪೋಟಗಿ ಹಣದಲ್ಲಿ ಅರ್ಧ ಅವರಿಗೇ ಕೊಡ್ತೀನಿ.’

‘ ಮತ್ತಿದರಲ್ಲಿ ನಿನಗೇನು ಲಾಭ ? ’

‘ ಇದೆ.’

‘ ಅದೇನು ಹೇಳು ? ’

‘ ಶಾನುಭೋಕೀಲಿ ಪೋಟಗಿ, ನೀನು ಸಾಲ ಕೊಟ್ಟ ಅಸಲಿನ ಹಾಗೆ. ಮೇಲಾದಾಯ, ನೀನು ಹಾಕೋ ಬಡ್ಡೀಹಾಗೇ. ಹಳ್ಳೀ ರೈತರೆಲ್ಲಾ ಶಾನುಭೋಗನ್ನ ಅನುಸರಿಸಬೇಕು. ಹತ್ತಾರು ವ್ಯವಹಾರ ಅವನ ಮೂಲಕ ನಡೀಬೇಕು. ತುಪ್ಪ ಅಳೆಮೋನ ಕೈ ಜಿಡ್ಡಾಗದೆ ಇರ್ತದೆಯೇ ? ಹಾಗೇ ನಂಗೂ ಏನಾರ ಗಿಟ್ಟೇ ಗಿಟ್ತದೆ. ಅದಕ್ಕೆ ಹೇಳಿದ್ದು. ನೀನೀಗ ಮನಸ್ಸು ಮಾಡಿದರೆ, ನಾನೂ ಒಬ್ಬ ಮನುಷ್ಯ ಆಗ್ತೀನಿ. ಅದು ನಿನ್ನ ಕೈಲಿದೆ.’

‘ ನನ್ನ ಕೈಲಿ ಹೆಂಗಿದೆ ? ’

‘ ರತ್ನಕ್ಕನಿಗೆ ಸೂಕ್ಷ್ಮವಾಗಿ ಒಂದು ಮಾತು ಹೇಳು.’

‘ ನಾನೇನೋ ಹೇಳೇನು. ನೀನು ಹೆಂಗಾದರೂ ಸರಿ ಹೋಗಿ ನನ್ನ ಪುಡಿಗಾಸು ಕೇಳೋದು ತಪ್ಪಿದ್ರೆ ಸಾಕಾಗಿದೆ. ಆದರೆ ರತ್ನಕ್ಕ ಒಪ್ಪಬೇಕಲ್ಲ—ಅಲ್ದೆ ಆಕೆ ರಾಘಣ್ಣನ್ನ ಕೇಳದೆ ಒಂದು ಕೆಲಸಾನೂ ಮಾಡೊಲ್ಲ. ಒಂದುವೇಳೆ ರತ್ನಕ್ಕನ್ನ ನಾನು ಒಪ್ಪಿಸಿದರೂ ರಾಘಣ್ಣ ಒಪ್ಪಬೇಕಲ್ಲ.’

‘ ರಾಘಣ್ಣನ್ನ ನಾನು ಕೇಳ್ತೀನಿ. ಹೇಗಾರ ಮಾಡಿ ಅವನನ್ನು ಒಪ್ಪಿಸೋದು ನನ್ನ ಭಾರ. ಮೊದಲು ನೀನು ರತ್ನಕ್ಕನ ಹತ್ತಿರ ಮಾತಾಡಿ, ಆಕೇನ ಒಪ್ಪಿಸು. ಆಮೇಲೆ ಮುಂದಿನ ಮಾತು ನೋಡೋಣ.’

‘ ಆದರೆ ಆಕೆ ಒಪ್ಪೋದೆ ನಂಗೆ ಅನುಮಾನ....’

‘ ಸುಲಭಕ್ಕೆ ಒಪ್ಪದಿದ್ದರೆ ಒಪ್ಪಿಸೋಹಾಗೆ ಮಾಡಬೇಕು. ಹೆಂಗೂ ನಿನ್ನ ಹತ್ತಿರ ಒಂದು ಅಸ್ತ್ರ ಇದೆ.’

‘ ಆಯ್ತು. ಆದರೆ ಇಷ್ಟೆಲ್ಲಾ ಹೊಡೆದಾಡಿದರೆ ನಂಗೇನು ಲಾಭ? ’

‘ ನಾನು ಬೇರೆ, ನೀನು ಬೇರೇನೇ. ನಾನು ದುಡಿದರೆ ಅನುಭವಿಸೋಳು ನೀನೇ ತಾನೇ ? ನೀನು ಇದೊಂದು ಕೆಲಸ ಮಾಡಿಕೊಡು. ನಿನ್ನ ನಾನು ಮರೆಯೋಲ್ಲ. ನೀನು ಕೇಳಿದ್ದು ಕೊಡ್ತೀನಿ ’

—ಎಂದ ವಿಠೋಬ.

‘ ಆಯ್ತು. ಕೇಳಿ ನೋಡ್ತೀನಿ. ಆದ್ರೆ ಆಕೇನ ಈ ಹೊತ್ತಿನಲ್ಲಿ

ಹಿಂಸೆ ಮಾಡೋಕೆ ನಂಗಿಷ್ಟವಿಲ್ಲ'

—ಎಂದಳು ಈರಮ್ಮ.

ಅವಳು ಅಷ್ಟು ಹೇಳಿದ್ದನ್ನು ಕೇಳಿ ವಿಠೋಬನಿಗೂ ಮನಸ್ಸಿಗೆ ಅರ್ಧ ಸಮಾಧಾನವಾಯಿತು. ಹಾಗೇ ಏನೋ ಯೋಚಿಸುತ್ತಾ ಮಂಡಕ್ಕಿಯನ್ನು ಬಾಯಿಗೆ ಹಾಕಿಕೊಂಡ.

ಈರಮ್ಮ, ಬೆಳಕಿಗಿಂತ ಹೆಚ್ಚಾಗಿ ಹೊಗೆ ಬೀರುತ್ತಿದ್ದ ಬುಡ್ಡಿಯನ್ನು ಆರಿಸಿದಳು.

## ೩

ವಿಠೋಬ ಹೇಳುತ್ತಿದ್ದ ಹಾಗೇ ಈರಮ್ಮ ಅವನ ಕೆಲಸ ಮಾಡಲು ಮುಂದಾಗಲಿಲ್ಲ. ಹತ್ತು ಹದಿನೈದು ದಿನ ಆ ವಿಷಯ ಯೋಚನೆ ಮಾಡಿ, ಇದರಿಂದ ತನ್ನ ಸಾಲ ತೀರುವುದಕ್ಕೆ ಒಂದು ದಾರಿಯಾಗುತ್ತದೆ ಎಂದು ಮನಸ್ಸಿಗೆ ನಂಬಿಕೆ ಮಾಡಿಕೊಂಡು, ಬಳಿಕ ಒಂದುದಿನ ರತ್ನಮ್ಮನನ್ನು ಹೋಗಿನೋಡಿ, ಸೂಕ್ಷ್ಮವಾಗಿ ತಾನು ಬಂದುದಕ್ಕೆ ಕಾರಣ ವಿವರಿಸಿದಳು.

ಸೀತಾರಾಮಯ್ಯ ಈರಮ್ಮನ ಬಳಿಯೂ ಸಾಲ ತೆಗೆದ ವಿಷಯ ರತ್ನಮ್ಮನಿಗೆ ತಿಳಿದಿರಲಿಲ್ಲ. ಎಂತಲೇ ಈ ಹೊಸ ಸುದ್ದಿಯನ್ನು ಕೇಳಿ ಕಾಣದೆ ಕೆಂಡ ಮುಟ್ಟಿದಂತಾಯಿತು ಅವಳಿಗೆ.

'ನಿನ್ನ ಹತ್ತಿರಾನೂ ಸಾಲ ತಗೊಂಡಿದ್ರೆ ?'

—ಎಂದು ಕೇಳಿದಳು ಆ ಸುದ್ದಿಯನ್ನೇ ನಂಬದಂತೆ.

'ಹೂ. ಇಲ್ದಿದ್ರೆ ನಾನು ಸುಂಸುಂಕೆ ಕೇಳಾಕೆ ಬರ್‍ತಿದ್ನಾ ?'

'ಯಾವಾಗ ತಗೊಂಡಿದ್ರು'

'ಆಗ್ಲೆ, ಐದಾರು ವರ್ಷ ಆಯ್ತು–ಪತ್ರಾನೂ ಬರಕೊಟ್ಟವರೆ.'

—ಎಂದು ಸೊಂಟದಲ್ಲಿ ಸಿಕ್ಕಿಸಿಕೊಂಡು ಬಂದಿದ್ದ ಪತ್ರವನ್ನೂ ತೆಗೆದು ರತ್ನಮ್ಮನಿಗೆ ತೋರಿಸಿ—

'ಇವತ್ತಿನವರೆಗೂ ಇದಕ್ಕೆ ಒಂದು ಕಾಸೂ ಬಡ್ಡಿ ಕೂಡಾ ಕೊಟ್ಟಿಲ್ಲ. ಸೀತಾರಾಮಪ್ನೋರೇ ತಿಳಿದು ಕೊಡ್ತಾರೆ ಅಂತ ನಂಬ್ಕೆ ಮ್ಯಾಲೆ ಸುಮ್ನಿದ್ದು ಬಿಟ್ಟೆ. ಅವರ್‍ಗೂ ಯಾಕೋ ನಿಗಾಕ್ಕೆ ಬರಲಿಲ್ಲ. ನಂಗೂ ಅದರ

ಅಗತ್ಯ ಇರಲಿಲ್ಲಾಂತ ವ್ಯಾಲೆಬಿದ್ದು ಕೇಳ್ಲಿಲ್ಲ. ಈಗ್ಲೂ ಕೈಕಟ್ಟದೆ ಹೋಗಿದ್ರೆ 'ಇಂಥಾ ಹೊತ್ನಾಗೆ ಕೇಳ್ತಿರಲಿಲ್ಲ. ಏನ್ಮಾಡ್ಲಿ. ಕಷ್ಟ ಎಲ್ಲಾರ್ಗ್ಲೂ ಒಂದೇ ಹೊತ್ನಾಗೇ ಬರ್ತೈತೆ'

—ಎಂದಳು ಈರಮ್ಮ ತಾನು ಹಣ ಕೇಳುತ್ತಿರುವುದು ತನ್ನ ಮನಸ್ಸಿಗೇ ವಿರುದ್ಧವಾಗಿ ಎಂಬಂತೆ.

'ಈಗಲೇ ನಿನಗೆ ಈ ಹಣ ಬೇಕಾಗಿತ್ತೆ ಈರಮ್ಮ?'

'ಹೂ ಕಣ್ರವ್ವ, ನಾನೂ ಯಾರ್ಗ್ಲೋ ಕೊಡಬೇಕಾಗಿತ್ತು. ಅವರು ಕತ್ತಿನವ್ಯಾಲೆ ಕುಂತವರೆ. ನಾಕು ದಿನ ತಡಿ ಅಂದ್ರೂ ಕೇಳ್ಳಿಲ್ಲ. ಅದ್ಕೆ ಬ್ಯಾರೆ ದಾರೀನೆ ಇಲ್ದೆ ಬಂದೆ.'

—ಶುದ್ಧ ಅಸಹಾಯಕತೆಯ ಧ್ವನಿಯಲ್ಲಿ ಹೇಳಿದಳು ಈರಮ್ಮ.

'ಸರೀನೇ ಈರಮ್ಮ. ಕಷ್ಟ ಯಾರನ್ನಾದರೂ ಕೇಳಿ ಮಾಡಿ ಬರುತ್ತೇ? ಅದು ಬಂದಾಗ ಅನುಭವಿಸೋದಷ್ಟೆ ನಮ್ಮ ಪಾಲಿನದು. ದೇವರು ನನಗೆ ಕೊಟ್ಟಿದ್ರೆ—ಈಗಲೇ ನಿನ್ನ ಹಣ ಕೊಡ್ತಾ ಇದ್ದೆ. ಆದರೇನು ಮಾಡಲಿ? ನನ್ನ ಪರಿಸ್ಥಿತೀನೂ ನಿನಗೆ ತಿಳಿದೇ ಇದೆ. ಅಲ್ಲದೆ ಈ ಸಾಲದ ವಿಷಯಾನೇ ನನಗೆ ಗೊತ್ತಿರಲಿಲ್ಲ. ಈಗಲೇ ಗೊತ್ತಾದದ್ದು. ರಾಘಣ್ಣನ ಹತ್ತಿರ ಈ ವಿಷಯ ಮಾತಾಡಿ, ನಿನಗೆ ಹೇಳಿಕಳಿಸ್ತೀನಿ.'

'ಇವತ್ತು ನಾಳೆ ಒಳಗೆ ಏನಾರ ಮಾಡ್ತೀರ?'

ಈಗ ಹೇಗೆ ಹೇಳಲಿ ಈರಮ್ಮ. ಅಂತೂ ಆದಷ್ಟು ಬೇಗ ಇವನ್ನು ತೀರಿಸೋ ಏರ್ಪಾಡು ಮಾಡ್ತೀನಿ'

—ಎಂದಳು ರತ್ನಮ್ಮ.

'ಏನೋ ಈಗ ಸಮಯ ಆಗಿದೆ. ಕೊಟ್ರೆ, ನನ್ನ ಬದುಕಿಸ್ದಂಗೆ ಆಗ್ತದೆ. ನೀವು ಇಂಥ ದಿನ ಕೊಡ್ತೀನೀಂತ ಹೇಳಿದ್ರೆ, ನಾನೂ ಕೊಡೋರ್ಗೆ ಅದ್ನೇ ಹೇಳ್ಕೋತೀನಿ.'

'ಆಗಲಿ.'

'ಸರಿ. ಮತ್ತೆ........'

—ಎಂದು ಈರಮ್ಮ ಮಾತನ್ನು ಅರ್ಧಕ್ಕೇ ನಿಲ್ಲಿಸಿ ಏನೋ ಯೋಚನೆ ಮಾಡುತ್ತಾ ಕುಳಿತುಕೊಂಡಳು.

'ಮತ್ತೇನು ಈರಮ್ಮ ?'

—ಅವಳು ಮುಗಿಸದಿದ್ದ ಮಾತನ್ನು ಪೂರ್ತಿ ಕೇಳಲು ರತ್ನಮ್ಮನೇ ಪ್ರಶ್ನೆ ಮಾಡಿದಳು.

'ಈಗ ನಿಮ್ಮನೇಗೆ ಬರಬೇಕೂಂತ ಹೊರಟಿದ್ದಾಗ ವಿಠೋಬಪ್ಪ ಸಿಕ್ಕಿದ್ದ. 'ಎಲ್ಹೊರಟಿದೀಯ' ಅಂತ ಕೇಳ್ದ. ಹಿಂಗೇಂದೆ. ಅದಕ್ಕೆ ಆತ ಏನೋ ಒಂದು ಮಾತು ಹೇಳ್ದ. ಅದು ಹೋಳ್ಳೊ ಬ್ಯಾಡ್ವೋ ಅಂತ ಯೋಚ್ನೆ ಮಾಡ್ತಾ ಇದ್ದೆ........'

'ಅವರಿಗೂ ಈ ಸಾಲದ ವಿಷಯ ಹೇಳಿದೆಯಾ ?'

'ಆಯುಷ್ಪನಿಗೆ ಮೊದ್ಲಿಂದಾ ಗೊತ್ತೇ ಇತ್ತು. ಆತ್ನೇ ನನ್ನಿಂದ ಸಾಲಕೊಡಿಸಿದ್ದು.'

'ಹಾಗೇ. ಏನು ಹೇಳಿದರು ?'

'ಅದೇ ಸಾಲದ ವಿಷಯ ಹೇಳಿ, ಈ ವಿಷ್ಯ ನಿಮ್ಮ ಹತ್ತಿರ ಮಾತಾಡ್ಲಿಕ್ಕೆ ಹೊರಟಿದೀನೀಂತ ಹೇಳ್ದೆ, ಅದಕ್ಕೆ ಆತ 'ಎಲ್ಲಾ ಬಿಟ್ಟು ಈ ಹೊತ್ನಾಗೇ ಕೇಳೋದು ಸುಮ್ನಿರು' ಅಂತ ಸಿಟ್ಟಾದ. 'ನಾನೇನ್ಮಾಡ್ಲಿ, ನಂಗೂ ಈಗ ಅಂಥದೇ ಹೊತ್ತು ಬಂದಿದೆ' ಅಂದದ್ದಕ್ಕೆ 'ನಾಕುದಿನ ತಡಿ ನಿನಗಷ್ಟು ಅವಸರಇದ್ರೆ ನಾನೇ ಎಲ್ಲಾರ ಜೊತೆಮಾಡಿ ಕೊಟ್ಟಿರ್‍ತೀನಿ, ಅಂದ್ರು.'

'ಅದೆಲ್ಲಾ ಯಾಕೆ ಈರಮ್ಮ? ನಮ್ಮ ಕಷ್ಟಾನ ನಾವು ಅನುಭವಿಸದೆ, ಇನ್ನೊಬ್ಬರ ತಲೆಮೇಲೆ ಹಾಕೋದ್ಯಾಕೆ. ಅವರು ಹಾಗ್ಹೇಳಿ, ಅವರ ಒಳ್ಳೇತನಾನ ತೋರಿಸಿಕೊಂಡ್ರು. ಅವರು ಹಾಗಂದದ್ದೇ ಸಾಕು ಅಂತ, ನಮ್ಮ ಕಷ್ಟಾನ ಅವರ ತಲೇಮೇಲಿಟ್ಟರೆ ದೇವರು ಒಪ್ತಾನೆಯೇ ? ಅವರು ಹೋದ ಹೊತ್ತಿನಲ್ಲಿ ಅವರ ಸ್ನೇಹಿತರೆಲ್ಲರೂ ಮಾಡಿದ ಉಪಕಾರಾನೇ ಮೂರು ಮೂರು ಜನ್ಮಕ್ಕೂ ತೀರಿಸಲಿಕ್ಕಾಗದಷ್ಟಾಗಿದೆ. ಅದರ ಮೇಲೆ ಇದೂ ಅವರ ಮೇಲೆ ಹೇಗೆ ಹೊರಿಸಲಿ. ನಮ್ಮ ಕಷ್ಟ ನಮಗಿರಲಿ, ದೇವರು ಹ್ಯಾಗೆ ಮಾಡ್ತಾನೊ ಮಾಡಲಿ.'

'ನೀವು ಹೇಳೋದೂ ನಿಜಾನೇ ರತ್ನಮ್ಮ. ಆದ್ರೂ ಮನುಷ್ಯಾಂತ ಹುಟ್ಟಿದಮೇಲೆ ಸಮಯಾಂದ್ರೆ ಒಬ್ಬರಿಗೊಬ್ಬರು ಆಗದಿದ್ರೆ ಏನು ಸಾರ್ಥಕ ?

ಅಕ್ಕಪಕ್ಕದಲ್ಲಿರೋರು ಕಷ್ಟಕ್ಕೆ ಸಿಕ್ಕಿದಾರೇಂತ ತಿಳದ್ರೆ, ನಮ್ಮ ಕಷ್ಟ ಸುಖ ಎಲ್ಲಾ ಮರತ್ಕೊಂಡು ಅವರ ಸಮಯಕ್ಕೆ ಆಗಬೇಕು. ಅದ್ರಾಗೂ ವಿಠೋಬಪ್ನೂ 'ಸೀತಾರಾಮಪ್ಪನೂ ಸ್ನೇಹಿತ್ರಿದ್ದಂಗಿರಲಿಲ್ಲ; ಅಣ್ಣ ತಮ್ಮ ಇದ್ದಂಗಿದ್ರು. ಸೀತಾರಾಮಪ್ಪ ಹೋಗಿಬಿಟ್ರೆ, ಆತನ ಹಿಂದೇ ವಿಶ್ವಾಸಾನೂ ಹೋಗ್ತದಾ ? ಇವತ್ತಿಗೂ ಸೀತಾರಾಮಪ್ಪನ್ನ ನೆನಕೊಂಡು ಕಣ್ಣಾಗೆ ನೀರ್ಹಾಕ್ತಾನೆ ವಿಠೋಬಪ್ಪ. ಆ ವಿಶ್ವಾಸ ಐತೇಂತಲೇ ಈ ಮಾತು ನಂಗೆ ಹೇಳ್ದಾ. ಬರೀ ಮಾತಾಡೋದೇನ್ಬಂತು–ಕೈಲಿ ದುಡ್ಡಿದ್ದಿದ್ರೆ ಅಲ್ಲೇ ನಂಗೆ ಕೊಟ್ಟು ' ನೀನು ಕೇಳಬ್ಯಾಡ' ಅಂತಾಇದ್ದ. ಆದರೇನು ಮಾಡೋದು–ಆತನಿಗೂ ಕೈಲಿ ಹರಿಯೊಲ್ಲ. ಬರೋದು ಅಲ್ಗಲ್ಲೆ ನ್ಯಾರ ಆಗ್ತದೆ.'

' ನಿಜ ಈರಮ್ಮ. ದೇವರ ಸೃಷ್ಟೀನೇ ಹಾಗಿದೆ. ದೇವರು ದುಡ್ಡಿದ್ದೋರಿಗೆ ಒಳ್ಳೆ ಬುದ್ಧಿ ಕೊಡೋಲ್ಲ, ಒಳ್ಳೆ ಬುದ್ಧಿ ಇದ್ದೋರಿಗೆ ದುಡ್ಡು ಕೊಡೋಲ್ಲ. ಹಾಗಿಲ್ದೆ ಹೋಗಿದ್ರೆ ಪ್ರಪಂಚದಲ್ಲಿ ಇಷ್ಟೆಲ್ಲ ಕಷ್ಟ ವ್ಯಸನ ಎಲ್ಲಿರ್ತಿತ್ತು ಹೇಳು.'

' ಹೌದೌದು. ಈ ಕುರುಡು ದೇವರ ಸೃಷ್ಟೀನೇ ಹಂಗೈತೆ. ಆದ್ರೂ ನೀವು ಮನಸ್ಸು ಮಾಡಿದ್ರೆ ಆಯಪ್ಪನಿಗೊಂದುಪಕಾರ ಮಾಡಬಹುದು ರತ್ನಮ್ಮ.'

' ನಾನೇ–ಉಪಕಾರ ಮಾಡೋದು. ದೇವರು ನನಗೆ ಆ ಶಕ್ತೀನೂ ಕೊಟ್ಟಿದಾನೆಯೇ ?'

—ಈರಮ್ಮನ ಮಾತನ್ನು ನಂಬದೆ ಕೇಳಿದಳು ರತ್ನಮ್ಮ.

' ಶಕ್ತಿ ಇರ್ತದೆ, ಆದ್ರೆ ನಮಗೆ ತಿಳಿದಿರೋಕಿಲ್ಲ. ಅದ್ಕೆ ಹಂಗಂದ್ಕೋತೀವಿ.'

' ಅಂದ್ರೆ–ನನಗೆ ಉಪಕಾರ ಮಾಡೋ ಶಕ್ತಿ ಇದೆ ಅಂತೀಯಾ ?'

' ಹೂ.'

' ಏನು ಹೇಳು. ನನ್ನಿಂದ ಯಾರಿಗಾದ್ರೂ ಎಳ್ಳುಕಾಳು ಮುಳ್ಳು ಮೊನೆಯಷ್ಟಾದರೂ ಉಪಕಾರ ಆಗೋದಿದ್ರೆ ನಾನು ಮಾಡೋಕೆ ಸಿದ್ಧವಾಗಿದೀನಿ.'

' ನಾನೇನೋ ಹೇಳ್ತೀನಿ. ಆದ್ರೆ ನೀವು ಏನೂ ತಿಳುಕೋಬಾರದು.'

' ಖಂಡಿತ ಇಲ್ಲ.'

' ಹಾಗೇ–ನಾನು ಈ ಮಾತು ಹೇಳ್ದೇಂತ ವಿಠೋಬಪ್ಪನಿಗೆ ಹೇಳ ಬಾರದು.'

' ಇಲ್ಲ. ನಾನು ಯಾರ ಮುಂದೂ ಹೇಳೋಲ್ಲ.'

' ಈಗ ಸೀತಾರಾಮಪ್ನೋರ ಶಾನುಭೋಕಿ ಕೆಲಸ ಅದಲ್ಲಾ, ನಂಜಾ ಪುರದ್ದು, ಅದು ಯಾರು ನೋಡ್ಕೋತಾ ಅವ್ರೆ ರತ್ನಮ್ಮ?'

' ಯಾರೂ ಇಲ್ಲ, ಆ ವಿಷಯಾನೇ ನಾವು ಯೋಚನೆ ಮಾಡಿಲ್ಲ.'

' ಹಂಗಾ? ಹಂಗಿದ್ರೆ .... ಅದ್ನ ವಿಠೋಬಪ್ಪನಿಗೇ ಯಾಕೆ ವಹಿಸಿ ಕೊಡಬಾರ್ದು?'

' ಅಂದ್ರೆ ....?'

' ಆಯಪ್ನೂ ಬಡವ. ಆ ಕೆಲಸ ನೋಡ್ಕೊಂಡ್ರೆ, ಆತಂಗೂ ಒಂದಷ್ಟು ದಿನ ಏನಾರ ಒಂದು ಆಧಾರ ಸಿಕ್ಕಂಗಾಗ್ತದೆ. ನಾಳೆ ಆತ್ನೂ ಒಬ್ಬ ಮನುಷ್ಯ ಆಗ್ತೋದು. ಹೆಂಗೂ ನಿಮ್ಮುಡುಗ ದೊಡ್ಡೋನಾಗಿ ಈ ವ್ಯವಹಾರನೆಲ್ಲಾ ನೋಡ್ಕೊಳ್ಳೋ ವಯಸ್ಸಿಗೆ ಬರೋಗಂಟ, ಯಾರಾದ್ರೂ ಒಬ್ರು ಬ್ಯಾರೇರು ನೋಡ್ಕೊಳ್ಳೇಬೇಕು. ಅಲ್ವಾ?'

' ಹೌದು.'

' ಹಂಗಿರೊವಾಗ ವಿಠೋಬಪ್ಪನಿಗೇ ಯಾಕೆ ವಹಿಸಿಕೊಡಬಾರ್ದು? ಆಯಪ್ಪಂಗೂ ಒಂದುಪಕಾರ ಮಾಡ್ದಂಗಾಗ್ತದೆ. ಹಂಗೆ ನೀವು ನಂಗೆ ಕೊಡೊ ಸಾಲ ಐತಲ್ಲ, ಅದ್ನೂ ನೀನೇ ತೀರಿಸ್ಬೇಕು :ಅಂದ್ರೆ, ನಿಮಗೂ ಸ್ವಲ್ಪ ಸಹಾಯ ಆದಂಗಾಗ್ತದೆ. ಒಬ್ಬರಿಗೊಬ್ಬರು ಸಹಾಯ ಆದ್ರೆ ಇಬ್ರಿಗೂ ಅಷ್ಟನುಕೂಲ ಆಗ್ತದೆ. ಆಯಪ್ನೂ ಒಬ್ಬ ಮನುಷ್ಯ ಆಗ್ತಾನೆ. ಬಿದ್ದಿ ರೋನ್ನ ಎತ್ತಿ ನಿಲ್ಲಿಸಿದ ಪುಣ್ಯ ಬರ್ತದೆ ನಿಮಗೆ. ಹಂಗ್ಯಾಕೆ ಮಾಡ್ಬಾರ್ದು ರತ್ನಮ್ಮ?'

' ನಿಜ ಹೇಳಲೇ ಈರಮ್ಮ?'

' ಹೇಳು ರತ್ನಮ್ಮ, ನಾನೇನು ಹೊರಗಿನೋಳಾ?'

' ಅಲ್ಲ, ಅದಕ್ಕೇ ಹೇಳಿದ್ದು. ನೋಡು ನಾನು ನಿಜ ಹೇಳಿದ್ರೂ ನಂಬುತ್ತಿ, ಸುಳ್ಳು ಹೇಳಿದ್ರೂ ನಂಬುತ್ತಿ. ನನಗೆ ಅವರ ವ್ಯವಹಾರ ಏನಿತ್ತು,

ಹೇಗಿತ್ತು ಅನ್ನೋದೊಂದೂ ನನಗೆ ಗೊತ್ತಿರಲಿಲ್ಲ. ಅವರಿರೋ ಅಷ್ಟು ದಿನ ಅವರು ತಂದು ಹಾಕಿದ್ದನ್ನ ಮಾಡಿ ಹಾಕಿಕೊಂಡು ಕಾಲ ಕಳೆದೆ. ಈಗಲೂ ನನಗೆ ಒಂದೂ ತಿಳೀದು. ಅದಕ್ಕೇ ಎಲ್ಲಾ ಜವಾಬ್ದಾರೀನೂ ರಾಘಣ್ಣನಿಗೇ ಬಿಟ್ಟಿದೇನೆ—ಹೇಗಾದರೂ ಮಾಡಲಿ ಅಂತ. ಆತನಿಗಿಂತ ಹೆಚ್ಚಿನೋರು ನನಗೆ ಯಾರಿದಾರೆ ಹೇಳು? ಉಭಾಶುಭಅಂದ್ರೆ ರಾಘಣ್ಣ, ಕಮಲ ತ್ತೇನೇ ನನಗೆ ದಿಕ್ಕು. ಆದ್ದರಿಂದ, ಈ ವಿಷಯದಲ್ಲೂ ನಾನೇ ನಾನಾಗಿ ಏನೂ ಹೇಳಲಾರೆ. ಆದ್ದರಿಂದ ಈಗ ನೀನು ಹೇಳಿದ ವಿಷಯ ರಾಘಣ್ಣ ನಿಗೆ ಹೇಳಿ, ಆತ ಏನು ಹೇಳ್ತಾನೋ ತಿಳುಕೊಂಡು ನಿನಗೆ ಹೇಳಿ ಕಳ ಸ್ತೀನಿ.'

'ಅದಾಗ್ಲಿ. ಈ ವಿಷಯದಾಗೆ ನಿನ್ನ ಮನಸ್ಸೆಂಗೆ ರತ್ನಮ್ಮ?'

'ನನ್ನದೇನಿಧೆ ಈರಮ್ಮ. ರಾಘಣ್ಣ ಆಗಬಹುದು ಅಂದರೆ ಖಂಡಿತ ಆಗಬಹುದು. ನಾನು ಆದಕ್ಕೆ ಅಡ್ಡಿ ಬರೊಲ್ಲ.'

'ರಾಘಣ್ಣನೋರು ಏನಾರ ಹೇಳ್ಲಿ ರತ್ನಮ್ಮ, ಇದು ನಿನಗೆ ಸಂಬಂಧಿ ಸಿದ ವಿಷಯ. ನೀನು ಯೋಚನೆ ಮಾಡೋದೇ ಬ್ಯಾಡ್ವಾ?'

'ನಾನು ಹೆಣ್ಣು ಹೆಂಗಸು. ನನಗೆ ಪ್ರಪಂಚ ಜ್ಞಾನ ಏನಿದೆ? ಯಾವ ವಿಷಯ ನನಗೆ ಗೊತ್ತಾಗುತ್ತೆ? ರಾಘಣ್ಣ ಎಲ್ಲಾ ವಿಚಾರ ತಿಳಿದೋನು. ಅದಕ್ಕೇ ಎಲ್ಲಾ ಜವಾಬ್ದಾರೀನೂ ಆತನಿಗೇ ಒಪ್ಪಿಸಿಬಿಟ್ಟಿದೀನಿ. ನಮಗೆ ತಿಳೀದ ವಿಷಯದಲ್ಲಿ ಯಾರನ್ನಾದರೂ ಒಬ್ಬರನ್ನು ನಂಬಬೇಕು. ಹೌದೊ ಅಲ್ವೋ. ಹಾಗಿರೋವಾಗ ಅಂಥ ನಂಬಿಕೇಗೆ ರಾಘಣ್ಣನಿಗಿಂತ ಹೆಚ್ಚಿನೋ ರನ್ನ ಎಲ್ಲಿಂದ ತರಲಿ. ಅವರೂ ರಾಘಣ್ಣನೂ ಒಂದೇ ತಾಯಿ ಹೊಟ್ಟೇಲಿ ಹುಟ್ಟಿದಹಾಗಿದ್ದರು. ಈಗಲೂ ನನ್ನ ವಿಷಯದಲ್ಲಿ ರಾಘಣ್ಣ ಹಾಗೇ ಇದಾನೆ. ಅದಕ್ಕೇ ಅವನ್ನ ಕೇಳದೆ ನಾನು ಏನೂ ಹೇಳಲಾರೆ ಅಂದಿದ್ದು.'

'ಸರೀನೇ, ನೀನು ಹೇಳೋದೆಲ್ಲಾ ಸರೀನೆ. ಕೆಟ್ರೂ ಬದುಕಿದ್ರೂ ಯಾರ್ನಾದ್ರೂ ಒಬ್ಬರನ್ನು ನಂಬಬೇಕು. ನೀನು ಹೇಳ್ದಂಗೆ ರಾಘಣ್ಣೋರನ್ನೇ ಕೇಳಿ ನೋಡು. ಅವರೂ ಬ್ಯಾಡಾಂತ ಅನ್ನೋಕಿಲ್ಲ.'

'ಅವರೂ ವಿಠೋಬಣ್ಣನೂ ಎಷ್ಟಾದರೂ ಸ್ನೇಹಿತರೇ ಅಲ್ಲವೇ? ಇಬ್ಬರಿಗೂ ಒಳ್ಳೇದಾಗೋ ಕೆಲಸಕ್ಕೆ ರಾಘಣ್ಣ ಯಾಕೆ ಬೇಡಾನ್ತಾನೆ?'

'ಹೂ. ಅದು ಹೆಂಗಾಗ್ತದೋ ಆಗ್ಲಿ. ಏನೋ ನನ್ನ ಮನಸ್ಸಿಗೆ ತೋಚಿದ್ದನ್ನ ನಿಂಗೆ ಹೇಳಿದೀನಿ. ಎಷ್ಟಾದರೂ ಅದು ನಿಮ್ಮ ನಿಮ್ಮ ವಿಷಯ ಹೆಂಗಾರ ಮಾಡಿ. ಅಂತೂ ನಾನು ಹೇಳಿದ್ದು ಮರೀಬ್ಯಾಡ ರತ್ನಮ್ಮ.'

'ಯಾವುದು?'

'ನನ್ನ ದುಡ್ಡಿನ ವಿಷಯ. ಈಗ ಬಹಳ ಅವಸರವಾಗಿದೆ. ಇಂಥ ಹೊತ್ನಾಗೆ ಕೊಟ್ರೆ ದಾನ ಕೊಟ್ಟಂಗಾಗ್ತದೆ. ನಿನ್ನೆಸ್ರೇಳಿಕೊಂಡು ಉಳುಕೋ ತೀನಿ.'

'ನಿನಗೆ ಕೊಡೋ ದುಡ್ಡು ಕೊಡಲಿಕ್ಕೆ ಅಷ್ಟೆಲ್ಲಾ ದೊಡ್ಡ ಮಾತು ಯಾಕೆ ಈರಮ್ಮ?'

'ಹಂಗಂದಾರುಂಟಾ ರತ್ನಮ್ಮ. ನಾನು ಸಾಲಾಂತ ಕೊಡಲಿಲ್ಲ, ಸಾಲಾಂತ ಕೇಳ್ತಾ ಇಲ್ಲ. ಸಮಯದಾಗೆ ಒಬ್ಬರಿಗೊಬ್ಬರು ಆಗಬೇಕು. ನಂಗೆ ಬೇಕಾಗಿರೋದು ಅಷ್ಟೆ.'

'ಹಾಗನ್ನೋದು ನಿನ್ನ ದೊಡ್ಡತನ. ಆಗಲಿ—ಕೊಡಬೇಕಾದ್ದು ಎಷ್ಟು ಅಂದೆ.'

'ಒಟ್ಟು ಇನ್ನೂರಾನಲವತ್ತುನಾಲ್ಕು ರೂಪಾಯಿ. ಈಗ ಸದ್ಯಕ್ಕೆ ಒಂದಿನ್ನೂರಾದ್ರೂ ಕೊಟ್ರೆ ನನ್ನ ಮಾನ ಉಳೀತದೆ.'

'ಇನ್ನೂರು ರೂಪಾಯೀ!'

'ಹೂ. ಅಷ್ಟೇ. ಬಾಕೀದು ಕೊಟ್ರೂ ಆಗ್ತದೆ, ಬಿಟ್ರೂ ಆಗ್ತದೆ.'

—ಎಂದಳು ಈರಮ್ಮ ಉಪಕಾರ ಮಾಡುವ ಧ್ವನಿಯಲ್ಲಿ.

'ಆಗಲಿ, ದೇವರಿದಾನೆ, ನೋಡೋಣ'

—ಎಂದಳು ರತ್ನಮ್ಮ.

'ಹಂಗಾದ್ರೆ ನಾನು ಬರ್ತೀನಿ ರತ್ನಮ್ಮ. ಯಾವ್ದೂ ಬ್ಯಾಗ ಹೇಳಿ ಕಳಿಸು. ನಾನು ನಿಮ್ಮ ಕಷ್ಟದ ಹೊತ್ತಿನಾಗೇ ದುಡ್ಡು ಕೇಳ್ದೆ ಅಂತ ಏನೂ ತಿಳುಕೋ ಬ್ಯಾಡ. ನಾನಿನ್ನು ಬರ್ಲಾ?'

—ಎಂದು ಹೇಳಿ, ಎದ್ದು ಬಾಗಿಲವರೆಗೂ ಹೋದವಳು, ಮತ್ತೆ ಏನೋ ಜ್ಞಾಪಿಸಿಕೊಂಡಂತೆ ಹಿಂದಿರುಗಿ—

'ಮರ್ತೆ ಬಿಟ್ಟೆ. ನಾರಾಯಣ ಎಲ್ಲಿ?'

—ಎಂದು ಕೇಳಿದಳು.

'ಕಮಲತ್ತೆ ಮನೇಲಿ ಇರಬೇಕು. ಯಾಕೆ?'

'ಯಾಕೂ ಇಲ್ಲ. ಇದ್ರೆ ಕೊಡೋಣಾಂತ ಇದು ತಂದಿದ್ದೆ. ನೀನೇ ಕೊಡು.'

—ಎಂದು ಹೇಳಿ ತನ್ನ ಉಡಿಯಲ್ಲಿಟ್ಟುಕೊಂಡಿದ್ದ ಮಿಠಾಯಿಯ ಪೊಟ್ಟಣವನ್ನು ರತ್ನಮ್ಮನ ಮುಂದೆ ಇಟ್ಟು—

'ಆಯ್ತು, ನಾನಿನ್ನು ಬರ್ತೀನಿ ರತ್ನಮ್ಮ'

—ಎಂದು ಹೇಳಿ ಹೋದಳು.

ಅವಳು ಹೋಗುತ್ತಿದ್ದ ಹಾಗೇ ಈರಮ್ಮ ಇರುವವರೆಗೂ ತನ್ನ ಮನಸ್ಸಿನ ಹೋರಾಟವನ್ನು ಸ್ವಲ್ಪವೂ ತೋರಗೊಡದೆ ಗಂಭೀರವಾಗಿದ್ದ ರತ್ನಮ್ಮನ ಕಣ್ಣುಗಳಲ್ಲಿ ನೀರು ತುಂಬಿತು.

'ಭಗವಂತಾ—ಈ ಸಾಲ ಹೇಗೆ ತೀರಿಸಲಿ?'

—ಎಂದು ನೆತ್ತಿಯ ಮೇಲೆ ಕೈ ಹೊತ್ತು ಕುಳಿತು ಬಿಟ್ಟಳು—ಗುಡ್ಡದ ಭಾರವನ್ನೇ ತಲೆಯ ಮೇಲೆ ಹೊತ್ತಂತೆ.

# ೪

ಆದಿನ ಸಂಜೆಯ ವೇಳೆಗೆ ರಾಘವೇಂದ್ರರಾಯ ರತ್ನಮ್ಮನನ್ನು ನೋಡಲು ಬಂದಾಗ, ಮನೆಯಲ್ಲಿ ಸಂಜೆಯ ಮಬ್ಬುಗತ್ತಲು ಆವರಿಸಿದ್ದರೂ, ದೀಪ ಹಚ್ಚದಿರುವುದನ್ನು ಕಂಡು ಚಕಿತನಾದ. ತೆರೆದ ತಲೆಬಾಗಿಲು ರತ್ನಮ್ಮ ಎಲ್ಲೂ ಹೊರಗೆ ಹೋಗಿಲ್ಲ, ಮನೆಯೊಳಗೇ ಇದ್ದಾಳೆ ಎಂದು ಹೇಳಿತು.

ಬಾಗಿಲು ತೆರೆದಿದ್ದೂ, ಸಂಜೆಯ ದೀಪ ಹಚ್ಚದಿರುವುದನ್ನು ಕಂಡು ರಾಘಣ್ಣನ ಮನಸ್ಸು, ಕತ್ತಲು ಕವಿದ ಮನೆಯಂತೆಯೇ ಮಂಕಾಯಿತು. ಏನಾಗಿರಬಹುದು ಎಂದು ಚಿಂತಿಸುತ್ತಲೇ—

‘ ರತ್ನಕ್ಕಾ ’

—ಎಂದು ಕೂಗಿದ.

ಮೊದಲ ಬಾರಿಯ ಕೂಗಿಗೆ ಏನೂ ಉತ್ತರಬರಲಿಲ್ಲ. ಎರಡು ಮೂರು ಬಾರಿ ಕೂಗಿದ ಮೇಲೆ—

‘ ಓ ’

—ಎಂದು ರತ್ನಮ್ಮ ಜಡವಾದ, ಧ್ವನಿಯಲ್ಲಿ ಉತ್ತರಕೊಟ್ಟಳು.

‘ ಇದೇನು ರತ್ನಕ್ಕ, ಸಂಜೆ ಆದರೂ ದೀಪಾನೇ ಹಚ್ಚಿಲ್ಲ, ಲಾಂದರ ಎಲ್ಲಿದೆ? ’

‘ಅಲ್ಲೇ ಕಿಟಕಿಯ ಕೆಳಗಿನ ಮಾಡದಲ್ಲಿದೆ ರಾಘಣ್ಣ.’

ಲಾಂದರವಿದ್ದ ನೆಲೆಯನ್ನರಿತು, ರಾಘವೇಂದ್ರರಾಯ ತಾನೇ ಅದನ್ನೂ ಹುಡುಕಿ ತಂದು, ಹೊತ್ತಿಸಿ, ಬೆಳಕು ದೊಡ್ಡದು ಮಾಡಿ, ಬೆಳಕಿನಲ್ಲಿ ನಡು

ಮನೆಯ ಕಂಭಕ್ಕೆ ಮೈ ಒರಗಿಸಿ ಕುಳಿತ ರತ್ನಮ್ಮನ ಮಂಕಾದ ಮುಖವನ್ನು, ಚಿಂತೆ, ನೋವು ತುಂಬಿತುಳುಕುವ ಕಣ್ಣುಗಳನ್ನು ನೋಡಿ ಬೆಚ್ಚಿಬಿದ್ದು—

‘ ಏನಾಯಿತು ರತ್ನಕ್ಕಾ ? ’

—ಎಂದು ಕೇಳಿದ.

‘ ಏನೋ. ನನಗಂತೂ ಏನು ಹೇಳೋಕೂ ತೋಚುತ್ತಾ ಇಲ್ಲ ರಾಘಣ್ಣ ’

—ಭಾರವಾದ ಧ್ವನಿಯಲ್ಲಿ, ಮಾತನಾಡುವುದೂ ಕಷ್ಟವೆಂಬಂತೆ ಹೇಳಿದಳು ರತ್ನಮ್ಮ. ಆ ಮಾತಿನ ರೀತಿಯನ್ನು ಕಂಡು ರಾಘವೇಂದ್ರ ರಾಯನ ಗಾಬರಿ ಮತ್ತಷ್ಟು ಹೆಚ್ಚಿತು.

‘ ಏಕೆ ? ಅದೇನಾಯಿತು ಹೇಳು ರತ್ನಕ್ಕ ? ’

‘ ಏನಾಗಬೇಕೋ ಅದೇ ಆಯಿತು ರಾಘಣ್ಣ. ದಿನಕ್ಕೊಂದು ರೀತೀಲಿ ವಿಧಿ ನನ್ನ ಪರೀಕ್ಷೆ ಮಾಡ್ತಾ ಇದಾನೆ.’

‘ ಅಂದರೆ—’

‘ ನಾನು ಹಿಡಿದ ಕೆಲಸ, ಹೂಡಿದ ಸಂಸಾರ ಯಾವುದೂ ನೇರವಾಗಿ ಆಗಬಾರದೂಂತ ದೇವರ ಇಚ್ಛೆ ಅಂತ ಕಾಣುತ್ತೆ.’

‘ ಒಳ್ಳೆ ಸಂಜೆ ಹೊತ್ತಿನಲ್ಲಿ ಅದೇನು ಹಾಳು ಮಾತು ಆಡ್ತಿ, ಬಿಡು. ಈಗ ಆದದ್ದೇನು ಹೇಳು ? ’

‘ ಇವತ್ತು ಮಧ್ಯಾಹ್ನ ಅಂಗಡಿ ಈರಮ್ಮ ಬಂದಿದ್ದಳು.........’

‘ ಏಕೆ ? ’

‘ ಅವರೇನೋ ಅವಳಿಗೆ ಸಾಲಕೊಡಬೇಕಾಗಿತ್ತಂತೆ........’

‘ ಯಾರು–ಸೀತಾರಾಮೂನೇ ? ’

—ಕಿವಿ ಕೇಳಿದ ಮಾತನ್ನು ನಂಬಲಾಗದವನಂತೆ ನುಡಿದ.

‘ ಹೂ.’

‘ ಎಷ್ಟಂತೆ ? ’

‘ ಇನ್ನೂರಾನಲವತ್ತು ರೂಪಾಯಿ ಅಂತ ಹೇಳಿದಳು. ಪತ್ರಾನೂ ತಗೊಂಡು ಬಂದಿದ್ದಳು. ಅವಳಿಗೆ ಈಗೇನೋ ಬಹಳ ಜರೂರಾಗಿ ಹಣ ಬೇಕಂತೆ.’

'ಅವಳಿಗೇನಂತೆ ಕೇಡಾಗಿರೋದು ಅಷ್ಟು ಅವಸರ ಮಾಡಲಿಕ್ಕೆ?'

'ಏನೋ. ಅವಳೂ ಯಾರಿಗೋ ಕೊಡಬೇಕಂತೆ. ಅವರು ಅವಳಿಗೆ ಒತ್ತಾಯ ಮಾಡುತ್ತಿದ್ದಾರಂತೆ.'

'ಅದೆಲ್ಲಾ ಬರೀ ಸುಳ್ಳು ನಾನು ನಂಬೊಲ್ಲ.'

'ಸುಳ್ಳೋ ನಿಜವೋ ಅದೆಲ್ಲಾ ಕಟ್ಟಿಕೊಂಡು ನಮಗೇನಾಗಬೇಕು ರಾಘಣ್ಣ. ನಾವು ಅವಳಿಗೆ ಕೊಡಬೇಕಾಗಿರೋದು ನಿಜ. ಕೊಡಬೇಕಾದ ದುಡ್ಡು ಕೇಳೋಕೆ ಬಂದೋರಿಗೆ, ನೀನು ಸುಳ್ಳು ಹೇಳ್ತಿ ಅಂದರೆ ಕೇಳ್ತಾರೆಯೇ? ಹಾಗೆ ಮಾತಾಡಿದರೆ, ಈಗ ನಯವಾಗಿಕೇಳಿದವರು, ಆಗ 'ಕೊಡೋ ದುಡ್ಡು ಕೊಟ್ಟುಹೋಗು' ಅಂತ ರಸ್ತೇಲಿ ಹಿಡಿದು ನಿಲ್ಲಿಸುತ್ತಾರೆ. ಸುಳು ನಿಜ ಕಟ್ಟಿಕೊಂಡು ನಮಗಾಗಬೇಕಾದ್ದೇನು ? ನಾವೀಗ ಮಾಡಬೇಕಾಗಿರೋದು ಆ ಸಾಲ ತೀರಿಸೋಚಿಂತೆ.'

'ಅದೂ ನಿಜಾನೇ ಅನ್ನು.'

—ರತ್ನಮ್ಮನ ಮಾತಿನ ತರ್ಕಕ್ಕೆ ಒಪ್ಪಿ ಹೇಳಿದ ರಾಘವೇಂದ್ರರಾಯ.

'ಅದು ನಿಜ ಅಂದರೆ, ಈಗ ತೀರಿಸೋದು ಹೇಗೆ ರಾಘಣ್ಣ ? ಈ ಒಡಕಲು ದೋಣೀಗೆ ಯಾವ ಕಡೆ ತೇಪೆ ಹಾಕೋದು ?'

—ಎಂದಳು ರತ್ನಮ್ಮ, ತನ್ನ ಮಾತು ಕೇಳಿ ರಾಘವೇಂದ್ರರಾಯನ ಮನಸ್ಸಿನಲ್ಲಿ ಮೂಡಿದ ಯೋಚನಾ ಧ್ವನಿಯನ್ನೇ ಮಾರ್ದನಿಸಿದಂತೆ. ಆ ಮಾತು ಕೇಳಿ ರಾಘವೇಂದ್ರರಾಯನೂ ಅಷ್ಟು ಹೊತ್ತು ಸುಮ್ಮನೆ ಕುಳಿತು ಚಿಂತಿಸಿ ಬಳಿಕ ಕೇಳಿದ—

'ಹೋಗಲಿ ಅದಕ್ಕೆ ನೀನೇನು ಹೇಳಿ ಕಳಿಸಿದೆ ?'

'ನೀನು ಬಂದ ಮೇಲೆ, ನಿನ್ನ ಹತ್ತಿರ ಮಾತಾಡಿ ಯಾವುದನ್ನೂ ಹೇಳಿ ಕಳುಹಿಸುತ್ತೇನೆ ಎಂದೆ.'

'ಸರಿ. ಈರಮ್ಮ ಪತ್ರ ತಂದಿದ್ದಳೇ ?'

'ಹೂ.'

'ಅದರಲ್ಲೇನಿದೆ ಅಂತ ಓದಿ ನೋಡಿದೆಯಾ.'

'ನನಗದೆಲ್ಲಾ ಓದಲಿಕ್ಕೆಲ್ಲಿ ಬರುತ್ತೆ ? ಅವಳು ಹೇಳಿದುದನ್ನು ಕೇಳಿ ಪತ್ರ ನೋಡಿದ ಹಾಗೆ ಮಾಡಿದೆ. ಅಷ್ಟೆ ನನಗೆ ತಿಳಿಯೋದು.'

‘ ಹೋಗಲಿ ಬಿಡು. ನಾಳೆ ಅದೇನೂಂತ ವಿಚಾರಿಸಿ, ಎಲ್ಲಾ ಸಮಾಚಾರಾನೂ ತಿಳಿದುಕೊಂಡು, ಈರವ್ವನ ಹತ್ತಿರ ಮಾತಾಡುತ್ತೇನೆ. ಅಲ್ಲ–ರತ್ನಕ್ಕ, ಅಷ್ಟಕ್ಕೇ ಇಷ್ಟು ಹೆದರಿ, ಸಂಜೆ ಹೊತ್ತಿನಲ್ಲಿ ಮನೇ ದೀಪಾನೂ ಹಚ್ಚದೆ ಕುಳಿತು ಬಿಟ್ಟೆಯಾ? ಏನಾದರಾಗಲಿ, ಎದುರಿಸುತ್ತೇನೆ ಎಂದವಳಿಗೆ ಇಷ್ಟೇನೇ ಧೈರ್ಯ? ಬಿಡು ಆ ಚಿಂತೇನ. ಏನು ಬಂದರೂ ನಾನು ಇದೀನಿ ಅಂತ ಹೇಳಲಿಲ್ಲವೇ. ಕೊಡಬೇಕಾದದ್ದಿದ್ದರೆ ತಗೋ ತಾಳಿ. ಅಷ್ಟಕ್ಕೆ ಛಾವಣಿ ಕಳಚಿ ನೆತ್ತಿ ಮೇಲೆ ಬಿದ್ದೋರ ಹಾಗೆ, ತಲೇಮೇಲೆ ಕೈ ಹೊತ್ತುಕೊಂಡು ಕೂತು ಬಿಡೋದೆ?’

—ಎಂದ ರಾಘವೇಂದ್ರರಾಯ, ತನ್ನ ಹೃದಯದಲ್ಲಿ ಕವಿದ ಚಿಂತೆಯನ್ನು ಮರೆಸಿ, ಹೆದರಿದ ರತ್ನವ್ವನಿಗೆ ಧೈರ್ಯ ಹೇಳುತ್ತಾ.

‘ ನೀನಿದೀಯ ನಿಜ ರಾಘಣ್ಣಾ. ಆದರೆ ಹೊರೋಕೆ ಸಿದ್ಧವಾಗಿದೀಯ ಅಂತ ಎಷ್ಟು ಭಾರ ನಿನ್ನ ಮೇಲೆ ಹೊರಿಸಲಿ?’

‘ ಈಗೇನು ಭಾರ ಹೊರಿಸಿದೀಯ? ಏನೂ ಇಲ್ಲ. ಭಾರ ಬಿದ್ದಿರೋದು ನಿನ್ನ ಮೇಲೆ. ಅದನ್ನು ನೀನೇ ಹೊತ್ತೂ ಇದೀಯ. ನಾನು ಬರೀ ನಿಮಿತ್ತ. ಆದ್ದರಿಂದ ಅದಕ್ಕ್ಯಾಕೆ ಅಷ್ಟು ಯೋಚನೆ ಮಾಡ್ತೀಯ. ದೇವರಿದಾನೆ.’

‘ ಹಾಗಲ್ಲಾ ರಾಘಣ್ಣಾ. ಈರವ್ವ ಹೇಳಿದ್ದು ಕೇಳಿದಾಗಿನಿಂದ ನನಗ್ಯಾಕೋ ತುಂಬಾ ಭಯವಾಗ್ತಾ ಇದೆ.’

‘ ಏಕೆ?’

‘ ನಮಗೆ ತಿಳೀದ ಹಾಗೆ ಇನ್ನೂ ಎಷ್ಟು ಕಡೆ ಸಾಲ ಅವಿತುಕೊಂಡು ಕೂತಿದೆಯೋಂತ.’

— ಭೀತಿ ತುಂಬಿ ತುಳುಕುವ ಧ್ವನಿಯಲ್ಲಿ ಹೇಳಿದಳು ರತ್ನವ್ವ. ಆಕೆಯ ಭೀತಿ ರಾಘವೇಂದ್ರರಾಯನಿಗೂ ನಿರಾಧಾರವಾಗಿ ಕಾಣಲಿಲ್ಲ. ‘ ಹಾಗೇನಾದರೂ ಇದ್ದರೆ ಮುಂದೇನು ಗತಿ?’ ಎಂದು ಅವನಿಗೂ ಹೆದರಿಕೆಯಾಯಿತು. ಆದರೆ ಮೊದಲೇ ಹೆದರಿದ ರತ್ನವ್ವನ ಮುಂದೆ ತನ್ನ ಹೆದರಿಕೆಯನ್ನು ವ್ಯಕ್ತಪಡಿಸಿ ಅವಳನ್ನು ಮತ್ತಷ್ಟು ಕಂಗೆಡಿಸಲಾಗದೆ—

‘ ಛೆ. ಹಾಗೇನೂ ಇಲ್ಲ. ನೀನು ಸುಮ್ಮನೆ ಇಲ್ಲದ್ದನ್ನು ಊಹಿಸಿ

ಕೊಂಡು ಹೆದರಬೇಡ.'—ಎಂದ.

'ನಾನೂ ಹಾಗೇ ಅಂದುಕೊಂಡೆ ರಾಘಣ್ಣ, ಆದರೂ ಏಕೋ ಮನಸ್ಸಿಗೆ ನೆಮ್ಮದಿಯಿಲ್ಲ.'

'ಅದನ್ನೇ ನಾನು ಹುಚ್ಚು ಹೆದರಿಕೆ ಎನ್ನೋದು. ಒಂದು ವೇಳೆ ನಿನ್ನ ಭಯಾನೇ ನಿಜ ಅನ್ನು, ಇದರ ಜೊತೆಗೆ ಇನ್ನೂ ಹತ್ತುಕಡೆ ಸಾಲ ಇದ್ದರೂ ನೀನೇನು ತಾನೇ ಮಾಡೋ ಹಾಗಿದೀಯ. ಆದ್ದರಿಂದ ಅದೆಲ್ಲಾ ಚಿಂತಿಸಿ ಫಲವಿಲ್ಲ ರತ್ನಕ್ಕ. ಹೇಗೋ ನೀರಿಗೆ ಇಳಿದಿದ್ದಾಗಿದೆ. ಈಗ ಛಳಿ ಗಾಳಿಗೆ ಹೆದರಿ ಏನುಪಯೋಗ? ಬಂದದ್ದು ಬರಲಿ ಅಂದುಕೊಂಡು ನಗ್ತಾ ಇದ್ದುಬಿಡು. ಸಾಲ ಇದ್ದರೆ ಇವತ್ತಲ್ಲ ನಾಳೆ ತೀರುತ್ತೆ. ಏನಾದರಾಗಲಿ, ಅಪ್ಪನ ಆಸ್ತಿ ಮಗನಿಗೆ ಇಲ್ಲದಹಾಗೆ ಆಗೋಕೆ ಅವಕಾಶ ಕೊಡೊಲ್ಲ ಅಂದೋಳು ನೀನೇ ಇಷ್ಟು ಗಾಬರಿಯಾದ್ರೆ ನಾನೇನು ಹೇಳಲಿ? ನೀನು ಧೈರ್ಯವಾಗಿದ್ದರೆ, ಅಂಥ ಸಮಯ ಬಂದರೆ, ನನ್ನ ಆಸ್ತಿನಾದರೂ ಮಾರಿ ತೀರಿಸುತ್ತೇನೆ. ನೀನು ನಿರಾತಂಕವಾಗಿರು'

—ಎಂದ ರಾಘವೇಂದ್ರರಾಯ ಬೆದರಿದ ರತ್ನಮ್ಮನಿಗೆ ಆಶ್ವಾಸನ ನೀಡುತ್ತಾ. ಆ ಮಾತು ಕೇಳಿದಾಗ ರತ್ನಮ್ಮನಿಗೆ ಈರಮ್ಮ ಹೇಳಿದ ಮತ್ತೊಂದು ಮಾತೂ ನೆನಪಿಗೆ ಬಂದಿತು.

'ಅಂದಹಾಗೆ, ಇನ್ನೊಂದು ಮಾತು ಹೇಳೋದು ಮರತೇ ಬಿಟ್ಟಿದ್ದೆ ರಾಘಣ್ಣ.'

'ಏನು?'

'ಸಾಲದ ವಿಚಾರ ಮಾತಾಡಲಿಕ್ಕೆ ಬಂದಾಗ, ಈ ಸಾಲ ತೀರಿಸೋಕೆ ಈರಮ್ಮ ಒಂದು ದಾರೀನೂ ಹೇಳಿದಳು.'

ರತ್ನಮ್ಮ ಹೇಳಿದುದನ್ನು ಕೇಳಿ, ರಾಘವೇಂದ್ರರಾಯನಿಗೆ ತನ್ನ ಕಿವಿಯನ್ನೇ ನಂಬುವುದಾಗಲಿಲ್ಲ. ತನ್ನ ಕಿವಿ ಕೇಳಿದ ಮಾತು ಸರಿಯೋ ಅಲ್ಲವೋ ಎಂದು ಪರೀಕ್ಷಿಸುವಂತೆ—

'ಏನಂದೆ ರತ್ನಕ್ಕ?'

—ಎಂದು ಕೇಳಿದ.

'ಈರಮ್ಮ ಈ ಸಾಲ ತೀರಿಸೋ ದಾರೀನೂ ಹೇಳಿದಳು.'

—ಎಂದು ಮತ್ತೆ ಮೊದಲು ಹೇಳಿದ ಮಾತನ್ನೇ ಹೇಳಿದಳು ರತ್ನಮ್ಮ.

‘ ನಿಜವಾಗಿಯೂ.’

‘ ಹೂ.’

‘ ಏನಂತೆ ದಾರಿ ?’

—ಎಂದ ರಾಘವೇಂದ್ರರಾಯನ ಪ್ರಶ್ನೆಗೆ ಉತ್ತರವಾಗಿ ರತ್ನಮ್ಮ ನಂಜಾಪುರದ ಶಾನುಭೋಕಿಯನ್ನು ತಾತ್ಕಾಲಿಕವಾಗಿ ವಿಠೋಬನಿಗೆ ವಹಿಸಿ ಕೊಡುವುದು, ಅವನು ಅದಕ್ಕೆ ಪ್ರತಿಯಾಗಿ ಈರಮ್ಮನ ಸಾಲ ತೀರಿಸುವ ಹೊಣೆಗಾರಿಕೆಯನ್ನು ತಾನು ವಹಿಸಿಕೊಳ್ಳುವುದು ಮೊದಲಾದ ಈರಮ್ಮ ಹೇಳಿದ ಮಾತುಗಳನ್ನೆಲ್ಲವನ್ನೂ ವಿವರವಾಗಿ ಹೇಳಿದಳು.

ಆ ಮಾತುಗಳನ್ನು ಕೇಳುತ್ತಿದ್ದ ಹಾಗೇ, ಕತ್ತಲಲ್ಲಿ ತಡವಿಕೊಂಡು ಓಡಾಡುತ್ತಿದ್ದವನ ಕಣ್ಣೆದಿರು ಚಕ್ಕನೆ ಬೆಳಕು ಬಿಟ್ಟಂತಾಯಿತು, ರಾಘವೇಂದ್ರರಾಯನಿಗೆ. ರತ್ನಮ್ಮ ಹೇಳಿದ ಮಾತುಗಳನ್ನೆಲ್ಲಾ ನಿಧಾನವಾಗಿ ಮನಸ್ಸಿನಲ್ಲಿ ಮೆಲಕು ಹಾಕಿ—

‘ ನಂಜಾಪುರದ ಶಾನುಭೋಕೀನ ನನಗೆ ವಹಿಸಿಕೊಟ್ಟರೆ, ಈರಮ್ಮನ ಸಾಲ ನಾನು ತೀರಿಸುತ್ತೀನಿ’ ಅಂತ ವಿಠೋಬ ಈರಮ್ಮನ ಮುಂದೆ ಹೇಳಿದನಂತೇನು ?’

—ಎಂದು ಕೇಳಿದ, ಮನದಲ್ಲಿ ಮೂಡಿದ ಯಾವುದೋ ಸಂಶಯವನ್ನು ಪರಿಹಾರ ಮಾಡಿಕೊಳ್ಳಲು.

‘ ವಿಠೋಬಣ್ಣನೇನೂ ಹಾಗೆ ಹೇಳಲಿಲ್ಲವಂತೆ.’

‘ ಮತ್ತೆ ?’

‘ ಈರಮ್ಮ ನನ್ನ ಹತ್ತಿರ ಸಾಲದ ವಿಚಾರ ಮಾತಾಡಬೇಕೂಂತ ಬರ್‍ತಾ ಇರೋವಾಗ, ವಿಠೋಬಣ್ಣ ಎದುರಿಗೆ ಸಿಕ್ಕಿ ‘ಎಲ್ಲಿಗೆ ಹೋಗ್ತೀಯ?’ ಅಂತ ಕೇಳಿದನಂತೆ. ಇಂಥದಕ್ಕೆ ಅಂತ ಈರಮ್ಮ ಹೇಳಿದಾಗ—‘ ಛಿ, ಕೇಳಬೇಡ ಇದು ಕೇಳೋ ಹೊತ್ತಲ್ಲ. ದೇವರು ನನಗೆ ಶಕ್ತಿ ಕೊಟ್ಟಿದ್ದರೆ ನಿನ್ನ ಸಾಲಾನ ನಾನೇ ತೀರಿಸುತ್ತಿದ್ದೆ.’ ಅಂದನಂತೆ ವಿಠೋಬಣ್ಣ. ಅದಕ್ಕೇ ಈರಮ್ಮ, ಕೆಲಸವಿಲ್ಲದೆ ಇರೋ ವಿಠೋಬಣ್ಣನಿಗೆ ಶಾನುಭೋಕಿ ಕೆಲಸ ವಹಿಸಿಕೊಟ್ಟರೆ, ಅವನಿಗೆ ಕೆಲಸವಾಗುತ್ತೆ, ನನ್ನ ಸಾಲಾನೂ ತೀರಿಸಬಹುದು ಅಂತ ಊಹಿಸಿ, ನನ್ನ ಮುಂದೆ ಹೇಳಿದಳು, ಅಷ್ಟೆ.’

' ವಿಠೋಬ ಸಾಲ ತೀರಿಸಲು ಒಪ್ಪಿದರೆ, ಅವನಿಂದ ಸಾಲ ತೀರಿಸಿ ಕೊಳ್ಳಲು ಈರಮ್ಮನೂ ಸಿದ್ಧವಾಗಿದಾಳಂತೆಯೋ ? '

'ಹಾಗಂತ ಹೇಳಲಿಲ್ಲ. ಆದರೆ ಆಕೆಯ ಮಾತು ಕೇಳಿದರೆ ಒಪ್ಪಬಹುದು ಅನಿಸುತ್ತೆ.'

' ಈಗ ಹಣ ಬಹಳ ಜರೂರಾಗಿ ಬೇಕು, ಪ್ರಾಣಾ ಹೋಗೋ ಅಷ್ಟು ಸಮಯವಾಗಿದೇಂತ ಅಂದಳು ಅಂದೆ....'

' ಹೂ, ಈರಮ್ಮ ಹಾಗೇ ಹೇಳಿದಳು. ಈಗ ಕೊಟ್ಟರೆ ನೀವು ದಾನ ಕೊಟ್ಟಹಾಗಾಗುತ್ತೆ ಅಂದಳು.'

' ನೀನು ಆ ಮಾತೆಲ್ಲಾ ನಂಬಿದೆಯಾ ರತ್ನಕ್ಕ ? '

' ನಂಬದೆ. ಅವಳೇನು ಪಾಪ ಸುಳ್ಳುಹೇಳ್ತಾಳೆಯೇ ? '

' ನಿನಗೆ ಪ್ರ ಪ ಂ ಚ ಜ್ಞಾ ನ ಏನೇನೂ ಇಲ್ಲಾನ್ನೋದು ಇದಕ್ಕೆ. ನಿನ್ನಂಥೋರಿಗೆ ಸುಣ್ಣ ತೋರಿಸಿ ಬೆಣ್ಣೆಅಂತ ತಿನ್ನಿಸಬಹುದು.'

—ಕಹಿಯಾದ ಧ್ವನಿಯಲ್ಲಿ ಹೇಳಿದ ರಾಘವೇಂದ್ರರಾಯ.

' ಅಂದರೆ....'

' ಈರಮ್ಮ ನಿನ್ನೆದುರಿಗೆ ಕಟ್ಟಿದ ಆಟ ಎಲ್ಲಾ ಬರೀ ಬೂಟಾಟಿಕೆ. ಇದರೊಳಗೆ ಏನೊ ಮಸಲತ್ತು ಇದೆ.'

' ಛಿ. ಎಲ್ಲಾದರೂ ಉಂಟೆ ರಾಘಣ್ಣ. ನಮ್ಮ ಒಳ್ಳೇದಕ್ಕೇ ಹೇಳಿದಳು ಅವಳು. ಇದರಲ್ಲಿ ಬೂಟಾಟಿಕೆ ಏನು ಬಂತು ? ಇದರಲ್ಲಿ ಅವಳಿಗೆ ಏನು ಲಾಭ ಇದೆ ಅಂತ ಸುಳ್ಳು ಹೇಳಬೇಕು ಹೇಳು.? '

—ರಾಘವೇಂದ್ರರಾಯನ ಮಾತನ್ನು ನಂಬದೆ ಕೇಳಿದಳು ರತ್ನಮ್ಮ.

' ವಿಠೋಬನಿಗೂ ಈರಮ್ಮನಿಗೂ ಇರೋ ಸಂಬಂಧ ನಿನಗೆ ಗೊತ್ತೇ ರತ್ನಕ್ಕ ? '

' ಏನು ? '

' ಈರಮ್ಮ ವಿಠೋಬನ ಪಟ್ಟದ ರಾಣಿ. ವಿಠೋಬನ ಗ[illegible]ರಾನಾ ನಡೀತಾ ಇರೋದೇ ಅವಳು ಕೊಡೋ ಪುಡಿಗಾಸಿನಿಂದ. ಹಾಗಿರೋವಾಗ ಈರಮ್ಮನ ಸಾಲ ತೀರಿಸೋಕೆ ಅವನ ಹತ್ತಿರ ಏನು ಗತಿ ಇದೆ? ಅಲ್ಲದೆ ಈರಮ್ಮನೂ ಕಡಮೆ ನೀರಿನಲ್ಲಿ ಮುಳುಗೋಳೂಂತ ತಿಳುಕೋಬೇಡ ರತ್ನಕ್ಕ.

ನೋಡೋಕೆ ಹಾಗಿದ್ದರೂ ಈ ಊರು, ಮುಂದಿನೂರು ಆಳೋ ಅಷ್ಟು ಚಾಲೂಕಿ ಇದೆ ಅವಳಿಗೆ. ಅಂಥೋಳು ತನಗೆ ಲಾಭ ಇಲ್ಲದೆ, ವಿಠೋಬನ ವಕೀಲಿ ಮಾಡ್ತಾಳೆ ಅಂತ ಅಂದುಕೊಂಡಿದಿಯಾ ? ಇದರಲ್ಲಿ ಏನೋ ಇದೆ.'

'ನನಗೇನೋ ಹಾಗನಿಸೋಲ್ಲ ರಾಘಣ್ಣ, ನಿನ್ನದೇ ತುಂಬಾ ಅನುಮಾನದ ಸ್ವಭಾವ ಅನಿಸುತ್ತೆ.'

'ನನ್ನದೇ ಅನುಮಾನದ ಸ್ವಭಾವ ಅಲ್ಲವೇ. ನೀನೇ ಸ್ವಲ್ಪ ಯೋಚನೆ ಮಾಡು ರತ್ನಕ್ಕ. ಈಗ ಪ್ರಾಣ ಹೋಗೊ ಅಷ್ಟು ಸಮಯ ಆಗಿದೆ, ದುಡ್ಡು ಬೇಕೇ ಬೇಕು ಅಂದೋಳು, ವಿಠೋಬ ಕೋಡೊದಾದ್ರೆ ಕಾಯ್ತೀನಿ ಅನ್ನೋ ಅರ್ಥ ಬರೋಹಾಗೆ ಮಾತಾಡಬೇಕಾದ್ರೆ, ಅವಳ ಮಾತು ಎಷ್ಟು ನಿಜಾನೋ ಯೋಚನೆ ಮಾಡು. ನಿಜ ಹೇಳಲಾ ರತ್ನಕ್ಕ....'

'ಏನು ?'

'ನೀನು ಹೇಳೋದೆಲ್ಲಾ ಕೇಳಿದರೆ ನನಗನ್ನಿಸೋದು ಇಷ್ಟು. ಈರಮ್ಮ ಬಂದದ್ದು ಸಾಲ ಕೇಳಲಿಕ್ಕಲ್ಲ, ವಿಠೋಬನಿಗೆ ಸಂಜಾಪುರದ ಶಾನುಭೋಕಿ ಕೊಡಿಸಲಿಕ್ಕೆ. ಅದಕ್ಕೆ ಸಾಲ ಕೇಳೋದು ನೆಪ. ಅಷ್ಟೇ ಅಲ್ಲ—ನೀನು ಸಾಲ ಕೊಡಬೇಕು ಅಂತ ಹೆದರಿಸಿ, ತಮ್ಮ ಕೆಲಸ ಮಾಡಿಕೊಳ್ಳಲಿಕ್ಕೆ ಬಂದದ್ದು ಈರಮ್ಮ. ಇರಲಿ ಸುಮ್ಮನಿರು. ಅವರೊಬ್ಬರೇ ಬುದ್ಧಿವಂತರಲ್ಲ ಈ ಜಗತ್ತಿನಲ್ಲಿ. ಅದು ಹೋಗಲಿ—ಈರಮ್ಮನಿಗೆ ನೀನೇನು ಹೇಳಿದೆ ?'

'ನನಗೇನೂ ತಿಳೀದು. ನಿನ್ನ ವಿಚಾರಿಸಿ ಹೇಳ್ತೀನಿ ಅಂದೆ.'

'ಒಳ್ಳೇದೇ ಮಾಡಿದೆ. ನಾನೆಲ್ಲಾ ನೋಡಿಕೋತೀನಿ. ಸದ್ಯ—ದೇವರು ನಿನಗೆ ಅಷ್ಟು ಹೇಳುವಷ್ಟಾದರೂ ಬುದ್ಧಿ ಕೊಟ್ಟನಲ್ಲ. ಅದೇ ನಿನ್ನ ಪುಣ್ಯ.'

'ಏಕೆ ?'

'ಹಾಗಲ್ಲದೆ, ನೀನು ಅವಳ ಮಾತು ನಂಬಿ, ಆಗಲಿ, ಸಂಜಾಪುರದ ಶಾನುಭೋಕಿ ವಿಠೋಬ ಮಾಡಿಕೊಂಡು ಹೋಗಲಿ ಅಂದು ಬಿಟ್ಟಿದ್ದರೆ ಆಮೇಲೆ ನಾನು ಏನು ಮಾಡೋಹಾಗಿತ್ತು. ದೇವರು ನಿನ್ನ ಬಾಯಲ್ಲಿ ಆ ಮಾತು ಆಡಿಸಿ ನಿನ್ನನ್ನು ಉಳಿಸಿದ. ಇವತ್ತು ನಾನು ನಿನಗೆ ಒಂದು ಮಾತು ಹೇಳ್ತೀನಿ. ಕೇಳ್ತೀಯಾ ರತ್ನಕ್ಕ ?'

'ನಿನ್ನ ಮಾತು ನಾನು ಕೇಳೊಲ್ಲವೇ ? ಅದೇನು ಹೇಳು ರಾಘಣ್ಣ ?'

'ನಿನಗಿವತ್ತು ಇಷ್ಟೆಲ್ಲಾ ಅವಸ್ಥೆ ಏಕೆ ಗೊತ್ತೆ ? '

'ಗೊತ್ತು.'

'ಏಕೆ ಹೇಳು ? '

'ನನ್ನ ಅದೃಷ್ಟ ಅಂಥಾದ್ದು.'

'ಊಹೂ. ಅದಲ್ಲ.'

'ಮತ್ತೇನು ? '

'ಬೆಳ್ಳಗಿರೋದೆಲ್ಲಾ ಹಾಲು ಅಂತ ನಂಬಿಕೊಂಡ ನಿನ್ನ ಗಂಡನ ಮೂರ್ಖತನ. ಪುಂಗೀನಾದಾನ ಕೇಳಿ, ಹೆಡೆ ಬಿಚ್ಚಿ, ಹಸುಮುಗುವಿನ ಹಾಗೆ ಕುಣಿಯೋ ಹಾವಿಗೆ ವಿಷದ ಹಲ್ಲೂ ಇದೆ. ಸ್ವಲ್ಪ ಎಚ್ಚರ ತಪ್ಪಿದರೂ, ಆ ಹಲ್ಲು ತಮ್ಮನ್ನು ಕಡಿಯುತ್ತದೆ ಎನ್ನುವ ಎಚ್ಚರ ತಪ್ಪಿ ನಡೆದದ್ದು. ಆ ಮರವೇ ಈ ಕೇಡಿಗೆಲ್ಲಾ ಕಾರಣ. ನೀನು ಇಲ್ಲೇ ಇದ್ದು, ನಿನ್ನ ಗಂಡ ಮಾಡಿದ ಋಣ ತೀರಿಸಿ, ಮಗನಿಗೆ ಮನೆ ಉಳಿಸಬೇಕೂಂತ ಇರೋಳು. ನಿನ್ನ ಭಾವನೆ ಸಾರ್ಥಕವಾಗಬೇಕೂಂತ ಆಸೆ ನಿನಗಿದ್ದರೆ, ಇವತ್ತಿನಿಂದ ನೀನು ಒಂದು ಪಾಠ ಕಲೀಬೇಕು.'

'ಏನು ? '

'ಯಾರೇ ಆಗಲಿ—ಅವರ ನಡತೆಯಿಂದ ಅವರು ಒಳ್ಳೆಯವರು ಅಂತ ನಿನ್ನ ಮನಸ್ಸಿಗೆ ಖಚಿತವಾಗಿ ನಂಬಿಕೆಯಾಗೋವರೆಗೂ ಅವರು ಕಳ್ಳರು ಅಂತ ತಿಳಿದುಕೊಂಡೇ ಎಚ್ಚರವಾಗಿರು.'

'ಹಾಗೆ ಮಾಡಿದೋರುಂಟೇ ರಾಘಣ್ಣಾ. ಬಿಡು, ಏನು ಮಾತು ಹೇಳ್ತಿ.'

'ಏಕೆ ನಾನು ಹೇಳಿದ್ದು ತಪ್ಪೇ ? '

'ತಪ್ಪಲ್ಲದೆ ಮತ್ತೇನು. ಯಾರನ್ನೂ ನಂಬಲೇಬಾರದು ಅಂತೀಯಲ್ಲ, ಎಲ್ಲಾದರೂ ಉಂಟೆ. ನಂಬೋದು ನಮ್ಮ ಧರ್ಮ, ಅದನ್ನು ಉಳಿಸಿ ಕೊಳ್ಳೋದೂ ಬಿಡೋದೂ ಅವರ ಕರ್ಮ.'

'ನೋಡು ರತ್ನಕ್ಕ, ನಾನು ಧರ್ಮ ಕರ್ಮದ ಮಾತಾಡ್ತಾ ಇಲ್ಲ. ನಾನು ಹೇಳ್ತಾ ಇರೋದು ವ್ಯವಹಾರದ ವಿಷಯ. ಸೀತಾರಾಮು ನಿನಗೆ ಮಾಡಿದಹಾಗೆ, ನೀನೂ ನಾರಾಯಣನ ತಲೇಮೇಲೆ ಕಲ್ಲು ಚಪ್ಪಡಿ ಎಳೆಯು

ಬಾರದು ಅಂತ ನಿನಗೆ ಇಷ್ಟವಿದ್ದರೆ ನನ್ನ ಮಾತು ಕೇಳು. ಇಲ್ಲೀ ಜನದ ವಿಷಯ ನಿನಗೆ ತಿಳೀದು ರತ್ನಕ್ಕ. ಮೂರು ಹೊತ್ತೂ ಅವರ ನಡುವೆ ಬಿದ್ದು ಹೆಣ ಗೋನು ನಾನು. ಅವರ ಹಣೆಬರಹವೆಲ್ಲಾ ನನಗೆ ಗೊತ್ತು. ನಿಂತರೆ ಕಾಲು, ಬಗ್ಗಿದರೆ ಕತ್ತು ಕತ್ತರಿಸೋ ಜನ ಇವರು. ಇವರ ಮಧ್ಯೆ ಬದುಕ ಬೇಕಾದರೆ ಮೈಯೆಲ್ಲಾ ಕಣ್ಣಾಗಿದ್ದರೂ ಸಾಲದು. ಇವತ್ತು ನನ್ನ ಮಾತು ನಂಬೋದು ನಿನಗೆ ಕಷ್ಟವಾಗುತ್ತೆ, ನಾನು ಬಲ್ಲೆ, ನಾಲ್ಕು ದಿನ ಆಗಲಿ; ಆಮೇಲೆ ನೀನೇ ನನಗೆ ಬುದ್ಧಿ ಹೇಳೋ ಹಾಗೆ ಆಗ್ತಿ. ಅಂತೂ—ಸದ್ಯಕ್ಕೆ, ಇಂಥಾ ವಿಚಾರ ಏನು ಬಂದರೂ ನೀನು ನನ್ನ ಕಡೆ ತೋರಿಸು, ನಾನು ನೋಡ್ಕೋತೀನಿ. ನೀನಾಗಿ ನೀನು ಯಾವ ಮಾತೂ ಕೊಡಲಿಕ್ಕೆ ಹೋಗ ಬೇಡ. ಈಗ ಆ ಚಿಂತೆ ಎಲ್ಲಾ ಬಿಟ್ಟು ಏಳು. ನಾಳೆ ಅವನ್ನೆಲ್ಲಾ ನೋಡಿ ಕೊಳ್ಳೋಣ.'

—ಎಂದ ರಾಘವೇಂದ್ರರಾಯ.

'ಏಕೋ, ನಿನ್ನ ಮಾತು ಕೇಳಿದರೆ ನನ್ನ ಭಯ ಮತ್ತಷ್ಟು ಹೆಚ್ಚುತ್ತೆ ರಾಘಣ್ಣ.'

'ನಾನಿರೋವರೆಗೂ ನಿನಗೆ ಭಯ ಇಲ್ಲ.'

—ಎಂದ ರಾಘವೇಂದ್ರರಾಯ ಅಭಯದಾನ ನೀಡುತ್ತಾ.

'ಅದೊಂದೇ ನನ್ನ ಪಾಲಿಗೆ ಉಳಿದಿರೋ ದೊಡ್ಡ ಆಸ್ತಿ'.

—ಎಂದಳು ರತ್ನಮ್ಮ.

'ಆ ಆಸ್ತೀನ ಒತ್ತೆ ಇಟ್ಟುಕೊಂಡು ಯಾರಾದರೂ ಒಂದು ಸಾವಿರ ರೂಪಾಯಿ ಸಾಲ ಕೊಡ್ತಾರೇನೋ ಕೇಳು. ಹುಚ್ಚಮ್ಮ!'

—ಎಂದ ರಾಘವೇಂದ್ರರಾಯ ನಗುತ್ತಾ.

ಆದರೆ ರತ್ನಮ್ಮನಿಗೆ ಆ ಮಾತು ಕೇಳಿ ನಗು ಬರಲಿಲ್ಲ. ಕಣ್ಣಿಗೆ ಸೂಜಿಯಿಂದ ಇರಿದಷ್ಟು ವ್ಯಥೆಯಾಯಿತು.

೨೭

ಈರಮ್ಮನ ಸಂಧಾನದ ವಿಷಯದಲ್ಲಿ ರತ್ನಮ್ಮ ಹೇಳಿದುದನ್ನು ಕೇಳಿ ರಾಘವೇಂದ್ರರಾಯನ ಮನಸಿಗೆ ಇರಿಸು ಮುರಿಸಾಗಿತ್ತು. ಸೀತಾರಾಮಯ್ಯ ಈರಮ್ಮನಿಗೆ ಸಾಲ ಕೊಡಬೇಕಾದುದನ್ನು ನೆಪಮಾಡಿಕೊಂಡು ವಿಠೋಬ ನಂಜಾಪುರದ ಶಾನುಭೋಕಿಗೆ ಏಟು ಹಾಕಲು ಯತ್ನಿಸಿದುದನ್ನರಿತು ವಿಠೋಬನ ವಿಷಯದಲ್ಲೂ ಬೇಸರವಾಗಿತ್ತು. ಸೀತಾರಾಮಯ್ಯ ಬದುಕಿದ್ದಾಗ, ಸ್ವಂತ ದುಡಿಮೆಯ ಆದಾಯವಿಲ್ಲದ ವಿಠೋಬ ತನ್ನ ಜೀವನಕ್ಕೆ ಪರರನ್ನು ಆಶ್ರಯಿಸಿದಂತೆ, ಸೀತಾರಾಮಯ್ಯನನ್ನೂ ಆಶ್ರಯಿಸಿದ್ದ. ಸ್ನೇಹದ ನೆಪ ಮಾಡಿಕೊಂಡು, ಸೀತಾರಾಮಯ್ಯನಿಂದ ಬರೀ ಊಟ ತಿಂಡಿಯನ್ನಷ್ಟೇ ಅಲ್ಲ, ಹತ್ತಾರು ರೀತಿಯಲ್ಲಿ ಸಹಾಯ ಪಡೆದಿದ್ದ. ಅದು ಎಲ್ಲರಿಗೂ ತಿಳಿದ ವಿಷಯವಾಗಿತ್ತು. ಎಂತಲೇ ಸಿತಾರಾಮಯನಿಂದ ಅಷ್ಟು ಸಹಾಯ ಪಡೆದ ವಿಠೋಬ, ಸೀತಾರಾಮಯ್ಯನ ಮರಣಾನಂತರ, ಕಷ್ಟಕ್ಕೆ ಸಿಕ್ಕಿದ ಆತನ ಹೆಂಡತಿ ಮಕ್ಕಳಿಗೆ ಕೈಲಾದ ಸಹಾಯ ಮಾಡುವುದನ್ನು ಬಿಟ್ಟು, ತನ್ನ ಸ್ವಾರ್ಥ ಸಾಧಿಸಿಕೊಳ್ಳಲು, ರತ್ನಮ್ಮನ ಮೇಲೆ ಈರಮ್ಮನನ್ನು ಛೂ ಬಿಟ್ಟದ್ದನ್ನು ಕಂಡು, ಕೆಂಡವಾಗಿದ್ದ ರಾಘವೇಂದ್ರರಾಯ.

ಎಂತಲೇ ವಿಠೋಬ, ಅದಾದ ಎರಡು ಮೂರು ದಿನಗಳ ಬಳಿಕ, ಇಸ್ಪೀಟಾಟ ಮುಗಿಸಿಕೊಂಡು ಬರುತ್ತಿರುವಾಗ ನಂಜಾಪುರದ ಶಾನುಭೋಕಿಯ ವಿಷಯದಲ್ಲಿ ರಾಘವೇಂದ್ರರಾಯನೊಂದಿಗೆ ಮಾತನಾಡಲು ಯತ್ನಿಸಿದಾಗ, ಆತ ವಿಠೋಬನೊಂದಿಗೆ ಎಂದಿನಂತಿರದೆ, ಬಿಗಿಯಾಗಿಯೇ ಇದ್ದ.

'ರತ್ನಕ್ಕ ನಿನ್ನ ಹತ್ತಿರ ಏನಾದರೂ ಮಾತಾಡಿದಳೇ ರಾಘಣ್ಣ?'

—ಎಂದು ವಿಠೋಬ ನಯವಾಗಿಯೇ ಪ್ರಶ್ನಿಸಿದಾಗ—

'ಹೂ. ಎಲ್ಲಾ ತಿಳೀತು.'

—ಎಂದು ಕಟುವಾದ ಧ್ವನಿಯಲ್ಲಿ ಉತ್ತರವಿತ್ತ ರಾಘವೇಂದ್ರರಾಯ.

'ಅದಕ್ಕೆ ನೀನೇನು ಹೇಳಿದೆ ರಾಘಣ್ಣ?'

'ಯಾವುದಕ್ಕೆ?'

'ರತ್ನಕ್ಕ ಹೇಳಿದ ವಿಷಯಕ್ಕೆ?'

'ಅಂದರೆ—ಈರಮ್ಮನ ಕೈಲಿ ರತ್ನಕ್ಕನಿಗೆ ನೀನು ಹೇಳಿ ಕಳುಹಿಸಿದ ವಿಷಯದಲ್ಲೇ?'

—ನವಿರಾದ ವ್ಯಂಗ್ಯದ ಧ್ವನಿಯಲ್ಲಿ ಕೇಳಿದ ರಾಘವೇಂದ್ರರಾಯ.

'ನನ್ನ ಮಾತು ನೀನ್ಯಾಕೋ ತಪ್ಪು ತಿಳಿದುಕೊಂಡಿರೋ ಹಾಗಿದೆ ರಾಘಣ್ಣ. ಈರಮ್ಮನ ಕೈಲಿ ನಾನು ಯಾವ ವಿಷಯಾನೂ ಹೇಳಿ ಕಳಿಸಲಿಲ್ಲ.'

'ಮತ್ತೆ–ಇದೆಲ್ಲಾ ಕೇಳಬೇಕೂಂತ ಅವಳಿಗೆ ಕನಸು ಬಿದ್ದಿತ್ತೇನು?'

'ಏನೋ. ನನ್ನ ಮಾತನ್ನು ನಂಬಿದರೆ ನಂಬು, ಬಿಟ್ಟರೆಬಿಡು. ಈರಮ್ಮ ರತ್ನಕ್ಕನ ಹತ್ತಿರ ಈ ವಿಷಯ ಎಲ್ಲಾ ಮಾತಾಡೋಕೆ ಹೋಗ್ತಾಳೇಂತ ನನಗೆ ಖಂಡಿತ ಗೊತ್ತಿರಲಿಲ್ಲ. ಅವಳು ಮಾತಾಡಿಕೊಂಡು ಬಂದು ಹೇಳಿದ ಮೇಲೇ, ನನಗೆ ತಿಳಿದಿದ್ದು. ಆಗಲೂ ಅವಳನ್ನ 'ಇದೆಲ್ಲಾ ತಲೆ ಹರಟೆ ನಿನಗ್ಯಾಕೆ ಬೇಕಾಗಿತ್ತು' ಅಂತ ನಾನೇ ಗದರಿಕೊಂಡೆ. 'ಏನೋ ಇಬ್ಬರಿಗೂ ಅನುಕೂಲವಾಗಲಿ' ಅಂತ ಹೇಳಿದೆ ಅಂದಳು. ಏನೋ ಹೀಗಾದರೂ ಆಗಿ, ರತ್ನಕ್ಕನ ಕಷ್ಟ ಕೊಂಚ ಕಡಮೆಯಾದರೆ ಆಗಲಿ ಅಂತ ನಾನೂ ಸುಮ್ಮನಾದೆ. ಇಲ್ಲದೆ ಹೋಗಿದ್ರೆ ನನ್ನ ನಾಲಿಗೆ ಕತ್ತರಿಸಿದ್ದರೂ ಅಂಥ ಮಾತು ನನ್ನ ಬಾಯಿಂದ ಬರುತ್ತಿರಲಿಲ್ಲ.'

—ಎಂದ ವಿಠೋಬ, ಯಾವುದೂ ತನಗೆ ತಿಳಿಯದವನಂತೆ.

'ಇಲ್ನೋಡು ವಿಠೋಬ, ಈ ಆಟ ಎಲ್ಲಾ ಯಾರ ಮುಂದೆ ಕಟ್ಟುತ್ತಿ? ನಿನ್ನ ವಿಷಯ ನನಗೆ ಗೊತ್ತು, ನನ್ನ ವಿಷಯ ನಿನಗೆ ಗೊತ್ತು. ನೀನೇ ಹೇಳ್ದಿದ್ದೆ ಇಷ್ಟೆಲ್ಲಾ ಮಾತಾಡೋಕೆ ಈರಮ್ಮನಿಗೆ ಎಲ್ಲಿಂದ ಧೈರ್ಯ ಬರಬೇಕು. ನನಗೆಲ್ಲಾ ಗೊತ್ತಾಗುತ್ತೆ ವಿಠೋಬ.'

‘ ಅಂದರೆ ನಾನೇ ಈರಮ್ಮನ ಕೈಲಿ ಈ ಮಾತಾಡೂಂತ ಹೇಳಿ ಕಳಿಸಿದೆ ಅಂತಲೇ ನಿನ್ನ ಅಭಿಪ್ರಾಯಾನೇ ?

‘ ನನ್ನಾಣೆ, ನಮ್ಮಪ್ಪನಾಣೆ, ನಿಮ್ಮಪ್ಪನಾಣೆ—ಅದೇ ನಿಜ.’

‘ ನೀನು ತಿಳಿದುಕೊಂಡಿರೋದು ತಪ್ಪು. ಸೀತಾರಾಮಯ್ಯ ನಿನ್ನಷ್ಟೇ ನನಗೂ ಸ್ನೇಹಿತನಾಗಿದ್ದ.’

‘ ಆಗಿದ್ದ ಎನ್ನಬೇಡ ವಿಠೋಬ. ನನ್ನ ಹಾಗೇ ನೀನೂ ಸ್ನೇಹಿತ ಅಂತ ಅವನು ನಂಬಿಕೊಂಡಿದ್ದ ಎನ್ನು. ಇಂಥ ಸ್ನೇಹಿತರನ್ನು ಸಾಕೋದಕ್ಕಿಂತ ನಾಲ್ಕು ನಾಯಿನಾದರೂ ಅವನು ಸಾಕಿದ್ದರೆ, ಅವನು ಸತ್ತಕೂಡಲೇ ಅವು, ಅವನ ಹೆಂಡತೀ ಮೇಲೆ ಎರಗಿ ಬೀಳ್ತಾ ಇರಲಿಲ್ಲ. ಅದೇ ಅವನು ಮಾಡಿದ ದೊಡ್ಡ ತಪ್ಪು. ಈಗ ರತ್ನಕ್ಕ ಆ ತಪ್ಪಿಗೆ ಫಲ ಅನುಭವಿಸಬೇಕಾಗಿ ಬಂದಿದೆ.’

—ಕಟುವಾಗಿ, ವಿಠೋಬನ ಮುಖಕ್ಕೇ ರಾಚಿದಂತೆ ಹೇಳಿದ ರಾಘವೇಂದ್ರರಾಯ.

‘ ಈಗ ನಾನೇನು ಅಂಥ ದ್ರೋಹ ಮಾಡಿದ್ದು ರಾಘಣ್ಣ ?’

—ರಾಘವೇಂದ್ರರಾಯನ ಮಾತಿನಿಂದ ತುಂಬಾ ನೋವಾದಂತೆ ಕೇಳಿದ ವಿಠೋಬ.

‘ ಏನೋ. ನಿನ್ನ ಮನಸ್ಸನ್ನು ನೀನೇ ಕೇಳಿಕೋ ವಿಠೋಬ. ಕೆಟ್ಟ ಮಾತನ್ನೆಲ್ಲಾ ನನ್ನ ಬಾಯಲ್ಲೇ ಏಕೆ ಆಡಿಸುತ್ತಿ ?’

‘ ಇಷ್ಟೇ ಆಡಬಹುದಂತೆ. ಅದೇನು ಅನ್ನೋದನ್ನೂ ಹೇಳು—ನಿನ್ನ ಬಾಯಲ್ಲೇ ಕೇಳಿ ಸಂತೋಷ ಪಡೋಣ.’

—ಸಣ್ಣಗೆ ರಾಘವೇಂದ್ರರಾಯನನ್ನು ಕೆಣಕಿ ಕೇಳಿದ ವಿಠೋಬ.

‘ ನಾನೇ ಹೇಳಲೇ ? ’

—ವಿಠೋಬ ಹಾಕಿದ ಸವಾಲನ್ನು ಸ್ವೀಕರಿಸಿದಂತೆ, ಸೆಟೆದು ಕೇಳಿದ ರಾಘವೇಂದ್ರರಾಯ.

‘ ಹೂ. ಹೇಳು.’

‘ಈರಮ್ಮ ಸೀತಾರಾಮಯ್ಯನಿಗೆ ಸಾಲ ಕೊಟ್ಟದು ನಿಜವೋ ಸುಳ್ಳೋ, ಪತ್ರವನ್ನು ನೋಡದೆ ನಾನು ಏನೂ ಹೇಳಲಾರೆ. ಆದರೆ ಅದು ಇದ್ದರೂ

ಇರಬಹುದು. ಆದರೆ ನೀನಾಗಿ ಹೇಳದೆ, ನಂಜಾಪುರದ ಶಾನುಭೋಕಿಯ ವಿಷಯ ಅವಳಿಗೆ ತಿಳಿಯುವುದು ಸಾಧ್ಯವಿರಲಿಲ್ಲ. ತಿಳಿದರೂ ಕೇಳುವಷ್ಟು ಧೈರ್ಯವೂ ಅವಳಿಗಿರುತ್ತಿರಲಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ, ಈಗಲೇ ಸಾಲಕ್ಕೆ ತಗಾದೆ ಮಾಡೋ ಅಂಥ ಅಗತ್ಯ ಏನೂ ಅವಳಿಗಿರಲಿಲ್ಲ.'

'ಅಂದರೆ....? ನೀನಾಡ್ತಿರೋ ಮಾತೇ ನಂಗೆ ಅರ್ಥ ಆಗ್ತಾ ಇಲ್ಲಾ ರಾಘಣ್ಣ. ನಿನ್ನ ಮನಸ್ಸಿನಲ್ಲಿ ಏನೋ ಇಟ್ಟುಕೊಂಡು ಮಾತಾಡ್ತಾ ಇದೀಯ. ಅದೇನು ಸ್ಪಷ್ಟವಾಗಿ ಹೇಳಬಾರದೇ ?'

'ಹೇಳೋದೇನಿದೆ ವಿಠೋಬ. ಇದೆಲ್ಲಾ ಕಿತಾಪತಿ. ನೀನೇ ಈರಮ್ಮ ನಿಗೆ ಹಚ್ಚಿಕೊಟ್ಟು ಕಳಿಸಿದೀಯ—ಸಾಲ ತೀರಿಸೋಕೆ ರತ್ನಕ್ಕನ ಹತ್ತಿರ ಮುಡ್ಡಿಲ್ಲಾಂತ ತಿಳುಕೊಂಡು.'

'ನೀನು ತಿಳಿಕೊಂಡಿರೋದು ತಪ್ಪು.'

'ದೇವರೇ ಬಂದು ಹೇಳಿದರೂ ಅದನ್ನ ನಾನು ನಂಬೋಲ್ಲ ವಿಠೋಬ. ಅಷ್ಟು ಬೇಕೂಂತ ನೀನು ಹಟ ಹಿಡಿದರೆ, ಬೇಕಾದ್ರೆ ಈರಮ್ಮನ ಬಾಯಿಂದಲೇ ಅದನ್ನು ಹೊರಡಿಸುತ್ತೀನಿ. ಅದೇನೂ ದೊಡ್ಡ ಕೆಲಸವಲ್ಲ, ಬೇಕಾದ್ರೆ ಈಗಲೇ ಹೋಗೋಣ ಬಾ'

—ಎಂದ ರಾಘವೇಂದ್ರರಾಯ ಸವಾಲು ಹಾಕಿ.

ಅದನ್ನು ಕೇಳಿ ವಿಠೋಬನಿಗೆ ಗಾಬರಿಯಾಯಿತು. ಈರಮ್ಮ ತನ್ನನ್ನು ಬಿಟ್ಟುಕೊಡುವುದಿಲ್ಲ ಎಂದು ನಂಬಿಕೆಯಿದ್ದರೂ, ಒಂದುವೇಳೆ ರಾಘವೇಂದ್ರ ರಾಯನಿಗೆ ಹೆದರಿ ಬಾಯಿ ಬಿಟ್ಟರೆ ಏನು ಗತಿ ಎಂದು ಹೆದರಿದ. ಎಂತಲೇ ಅದನ್ನು ಮರೆಸುವ ಸಲುವಾಗಿ—

'ಅಷ್ಟೆಲ್ಲಾ ಪರಾರತ್ತಿನ ಮಾತು ಯಾಕೆ ರಾಘಣ್ಣ. ನಾನೇನು ರತ್ನಕ್ಕನ ವೈರಿ ಅಲ್ಲ. ಒಂದುವೇಳೆ, ನಂಜಾಪುರದ ಶಾನುಭೋಕೀನ ರತ್ನಕ್ಕ ನನಗೆ ವಹಿಸಿಕೊಟ್ಟರೆ, ನಾನೇನೂ ಅದನ್ನ ಮುಳುಗಿಸೊಲ್ಲ. ನಾನು ಆಕೆಗೆ ಬೇರೆ ಯಾವ ರೀತೀಲೂ ಸಹಾಯ ಮಾಡೋಹಾಗಿಲ್ಲ. ಹೀಗಾದ್ರೂ ನನ್ನಿಂದ ಸಹಾಯ ಆದರೆ ಆಗಲಿ ಅಂತ ಈರಮ್ಮ ಹೇಳಿದ್ದಕ್ಕೆ ಒಪ್ಪಿಕೊಂಡೆ.'

'ಯಾವುದಕ್ಕೆ ?'

'ರತ್ನಕ್ಕ ನನಗೆ ಶಾನುಭೋಕೀನ ವಹಿಸಿಕೊಟ್ಟರೆ ಈರಮ್ಮನ ಸಾಲ

ನಾನು ತೀರಿಸೋದು ಅಂತ.'

'ಎಷ್ಟು ವರ್ಷ ನಿನಗೆ ಅದನ್ನು ವಹಿಸಿಕೊಡಬೇಕು.'

'ನಾರಾಯಣ ದೊಡ್ಡೋನಾಗೋವರೆಗೂ. ಇನ್ನೆಷ್ಟು ವರುಷ ವಹಿಸಿ ಕೊಡೋದು ಸಾಧ್ಯ?'

'ಅಂದರೆ ಸುಮಾರು ಹದಿನಾಲ್ಕು ವರ್ಷದವರೆಗೆ ಅಲ್ಲವೇ?'

'ಹೂ. ಅಷ್ಟಾಗಬಹುದು?'

'ನಂಜಾಪುರದ ಪೋಟಗಿ ಎಷ್ಟಿದೆ ಗೊತ್ತೆ ವಿಠೋಬ'

'ವರ್ಷಕ್ಕೆ ಐವತ್ತು ರೂಪಾಯಿ.'

'ಅಂದರೆ ಹದಿನಾಲ್ಕು ವರ್ಷಕ್ಕೆ ಐದುನೂರು ರೂಪಾಯಿ ಆಯ್ತು. ಅಲ್ವೇ.'

'ಹೂ.'

'ಈರಮ್ಮನ ಸಾಲ ಎಷ್ಟಿದೆ?'

'ಇನ್ನೂರಾ ನಲವತ್ತೈದು.'

'ಅದರಲ್ಲಿ ಬಡ್ಡಿ ಎಷ್ಟು?'

'ಎಷ್ಟಿದೆಯೋ ನನಗೆ ಗೊತ್ತಿಲ್ಲ.'

'ನೋಡು ವಿಠೋಬ ಸುಳ್ಳು ಹೇಳಬೇಡ. ಸೀತಾರಾಮಯ್ಯನಿಗೆ ಸಾಲ ಕೊಡಿಸಿದೋನೇ ನೀನು ಅಂತ ಈರಮ್ಮ ಹೇಳಿದಳಂತೆ—ಅಂಥಾದ್ದರಲ್ಲಿ ನನಗೆ ಗೊತ್ತಿಲ್ಲ ಅಂತ ಡೋಂಗೀ ಹೊಡೀತೀಯಲ್ಲಾ? ನೀನು ಇವಾಗ ಹೇಳ್ದೆ ಹೋದ್ರೂ ಪತ್ರ ತೆಗಿಸಿ ನೋಡಿದರೆ ಗೊತ್ತಾಗೋದಿಲ್ವೆ?'

'ನಾನು ಕೊಡಿಸಿದ್ದು ನೂರು ರೂಪಾಯಿ.'

—ಸತ್ಯ ಹೇಳದೆ ಬೇರೆ ದಾರಿಯೇ ಇಲ್ಲದೆ ವಿಠೋಬ ಬಾಯಿಬಿಟ್ಟ.

'ನೂರು ರೂಪಾಯಿಗೆ ನೂರೈವತ್ತು ಬಡ್ಡಿ! ಯಾರ ಮನೆ ಹಾಳು ಮಾಡಬೇಕೂಂತ ಇದೀರಾ ವಿಠೋಬ, ನೀನೂ ಈರಮ್ಮ ಸೇರಿಕೊಂಡು. ನೀನು ಸ್ನೇಹಿತ, ಈರಮ್ಮ ಉದ್ಧಾರಮಾಡೋಳು! ಅಲ್ಲಿವೆ? ಇದನ್ನುತೋರಿಸಿ, ಏನೂ ತಿಳೀದ ರತ್ನಕ್ಕನ್ನ ಹೆದರಿಸಿ ಶಾನುಭೋಕಿ ಹೊಡೀಬೇಕೂಂತ ಅಂದಾಜು ಮಾಡಿದಿರಿ ಅಲ್ವೆ? ಒಂದು ಮಾತು ಹೇಳ್ತೀನಿ ಕೇಳು ವಿಠೋಬ. ನಾನು ಜೀವಂತನಾಗಿರೋವರೆಗೂ, ನೀನು ಈರಮ್ಮ ತಲೆಕೆಳಕಾಗಿ ನಿಂತು

ಕೊಂಡರೂ ಈ ಆಟ ನಡೆಯೋದಿಲ್ಲ ಗೊತ್ತಾಯ್ತೆ ? ನಂಜಾಪುರದ ಶಾನು ಭೋಕಿ ಬೇವಾರ್ಸಿ ಹೆಣವಲ್ಲ, ಕಂಡೋರು ವಹಿಸಿಕೊಳ್ಳೋಕೆ ; ಅದನ್ನು ನೋಡಿಕೊಳ್ಳೋರು ಬೇಕಾದಷ್ಟು ಜನ ಇದಾರೆ. ಗೊತ್ತಾಯ್ತೆ ವಿಠೋಬ, ಇವತ್ತು ಹೇಳ್ತೀನಿ ಕೇಳು. ಇದು ಬದುಕೋ ದಾರಿ ಅಲ್ಲ.'

—ಗಡುಸಾದ ಧ್ವನಿಯಲ್ಲಿ ಗದರಿಸುವವನಂತೆ ಹೇಳಿದ ರಾಘವೇಂದ್ರ ರಾಯ.

' ನೀನು ಹೇಳೋದು ಕೇಳಿದರೆ ನಾನೇನೋ ರತ್ನಕ್ಕನಿಗೆ ದ್ರೋಹ ಮಾಡಬೇಕೂಂತ ಇರೋಹಾಗೆ ಹೇಳ್ತಾ ಇದೀಯ.'

' ಇಲ್ಲವೇ ?'

' ಖಂಡಿತ ಇಲ್ಲ.'

' ಈ ಮಾತು ನಿಜ ತಾನೇ ?'

' ಹೌದು.'

' ಹಾಗಾದ್ರೆ ಒಂದು ಕೆಲಸ ಮಾಡ್ತಿಯಾ ? '

' ಏನು ಹೇಳು ? '

' ಸೀತಾರಾಮಯ್ಯ ನನ್ನ ಹಾಗೇ ನಿನಗೂ ಸ್ನೇಹಿತನಾಗಿದ್ದ. ಈರಮ್ಮ ಎಷ್ಟಾದರೂ ನಿನ್ನ ಅಸ್ಮಾಕಂ. ನೀನೇನಾದರೂ ಹೇಳಿದರೆ ಅವಳು ಇಲ್ಲ ಅನ್ನೋಲ್ಲ.'

' ಅದನ್ನು ನಾನು ಅಷ್ಟು ಖಾತರಿಯಾಗಿ ಹೇಳಲಾರೆ.'

' ಆಯ್ತು. ಏನಾದರೂ ಪ್ರಯತ್ನಾನಾದರೂ ಮಾಡಬಹುದಲ್ಲ.'

' ಅದಕ್ಕೆ ಏನೂ ಅಡ್ಡಿ ಇಲ್ಲ.'

' ಸರಿ. ಹಾಗಾದರೆ—ಸೀತಾರಾಮಯ್ಯ ಈರಮ್ಮನ ಹತ್ತಿರ ತಗೊಂಡಿದ್ದು ನೂರು ರೂಪಾಯಿ ತಾನೇ. ಎಲ್ಲಾದರೂ, ನನ್ನ ತಲೇನಾದರೂ ಒತ್ತೆ ಇಟ್ಟು ನಾನು ಆ ನೂರುರೂಪಾಯಿ ತಂದು ಕೊಡ್ತೀನಿ. ಅಷ್ಟಕ್ಕೇ ಅವಳು ಸಾಲ ಬಗೆ ಹರಿಸಿಕೊಳ್ಳೋ ಹಾಗೆ ಮಾಡು; ಆಗ ನೀನು ಸೀತಾರಾಮಯ್ಯನ ಸ್ನೇಹಿತನಾದ್ದಕ್ಕೆ ಸಾರ್ಥಕ ಆಗುತ್ತೆ. ಅಷ್ಟು ಮಾಡ್ತಿಯಾ ? '

—ವಿಠೋಬನನ್ನು ಕೆಣಕಿ ಕೇಳಿದ ರಾಘವೇಂದ್ರರಾಯ.

'ಈರವ್ವ ಮಹಾ ಕಿಲಬು ಹೆಂಗಸು. ದುಡ್ಡು ಕಾಸು ಅಂದ್ರೆ ಯಾರ ದಾಕ್ಷಿಣ್ಯಾನೂ ನೋಡೊಲ್ಲ. ಅವಳ ಸ್ವಭಾವ ನಿನಗೇ ಗೊತ್ತಿದೆ ಯಲ್ಲ. ಆದ್ದರಿಂದ ನಾನು ಹೇಗೆ ನಂಬಿಕೆಯಾಗಿ ಹೇಳಲಿ ? '

—ತನಗೆ ಪ್ರಿಯವಲ್ಲದ ಆ ಜವಾಬ್ದಾರಿಯಿಂದ ಜಾರಿಕೊಳ್ಳಲು ಯತ್ನಿಸುತ್ತಾ ಹೇಳಿದ ವಿಠೋಬ.

' ಅದೆಲ್ಲಾ ನನಗೆ ಗೊತ್ತಿದೆ ವಿಠೋಬ. ನೀನು ಮಾಡೋ ಪ್ರಯತ್ನ ಮಾಡು. ಅದಕ್ಕೆ ಅವಳು ಏನು ಹೇಳುತ್ತಾಳೋ ಹೇಳಲಿ. ಆ ಮೇ ಲೆ ಮುಂದಿನ ಮಾತು. ನಿನ್ನ ಮಾತಿಗೆ ಅವಳು ಬಗ್ಗದಿದ್ದರೆ, ಅವಳನ್ನು ದಾರಿಗೆ ತರೋ ರೀತಿ ನನಗೆ ಗೊತ್ತಿದೆ.'

' ಆಯ್ತು ನನ್ನ ಕೈಲಾದ್ದು ನಾನು ಮಾಡ್ತೀನಿ. ಅದಾಯ್ತಲ್ಲಾ ರಾಘಣ್ಣಾ—ಅದಕ್ಕೆ ಏನು ಹೇಳ್ತೀಯ ?'

' ಯಾವುದಕ್ಕೆ ? '

' ನಂಜಾಪುರದ ಶಾನುಭೋಕಿ ವಿಷಯಕ್ಕೆ.'

' ಅದಕ್ಕಾಗಲೇ ಹೇಳಿದೆನಲ್ಲ ವಿಠೋಬ. ರತ್ನಕ್ಕನ ಜೀವನೋಪಾಯಕ್ಕೆ ಇರೋದು ಅದೊಂದೇ ದಾರಿ. ಅದರ ಆದಾಯ ಏನಿದ್ರೂ ಅವಳಿಗೇ ಹೋಗಬೇಕು. ಇರೋದು ಒಂದು ಆಸರಾನೂ ನಿನಗೆ ಒಪ್ಪಿಸಿಬಿಟ್ಟು, ಅವಳೇನು ಮರದ ಕೆಳಗೆ ನಿಂತುಕೊಳ್ಳಬೇಕೇ ? '

' ಹಾಗಂತ ನಾನು ಹೇಳಲಿಲ್ಲವಲ್ಲಾ ? '

' ಮತ್ತೇನು ಹೇಳಿದ್ದು ನೀನು ? '

' ಆ ಪೊಟಿಗೀಲಿ ಬೇಕಾದರೆ ಅರ್ಧ ಆಕೇಗೆ ಕೊಡ್ತೀನೀಂತ ಬೇಕಾದ್ರೆ ಬರೆದು ಕೊಡ್ತಿನಿ.'

' ಶಾನುಭೋಕೀಲಿ ಬರೋದು ಬರೀ ಪೋಟಗೀನೇ ಅಲ್ಲ ವಿಠೋಬ. ನೀನು ಶಾನುಭೋಕಿ ಮಾಡಿಲ್ಲ. ನಾನು ಮಾಡಿ ಅನುಭವಿಸಿದೋನು.'

' ನಿಜ '

' ಮತ್ತೆ ? '

' ಮೇಲೇನಾದರೂ ಸಿಕ್ಕಿದರೆ, ನಾನೂ ಒಬ್ಬ ಮನುಷ್ಯ ಆಗಬಹುದು. ನನಗೆ ತಾನೇ ಬೇರೆ ಏನು ಆಧಾರ ಇದೆ ? ಏನೋ ನೋಡು—ನೀವಿಬ್ಬರೂ

ಮನಸ್ಸು ಮಾಡಿದರೆ, ನಿಮ್ಮ ಹೆಸರು ಹೇಳಿಕೊಂಡು ನಾನೂ ಒಬ್ಬ ಮನುಷ್ಯ ಆಗ್ತೀನಿ.'

' ಹಾಗೆ ದಾರಿಗೆ ಬಾ. ಈಗ ನೀನಾಡಿದೆ ನೋಡು—ಅದು ನಿಜವಾದ ಮಾತು. ಶಾನುಭೋಕಿ ವಹಿಸಿಕೊಡೂಂತ ನೀನು ರತ್ನಕ್ಕನ್ನ ಕೇಳಿದ್ದು, ರತ್ನಕ್ಕನ್ನ ಉದ್ಧಾರ ಮಾಡಲಿಕ್ಕಲ್ಲ, ನೀನು ಉದ್ಧಾರ ಆಗಲಿಕ್ಕೆ ಅಲ್ವೇ ?'

—ಚುರುಕಾದ ಧ್ವನಿಯಲ್ಲಿ ಕೇಳಿದ ರಾಘವೇಂದ್ರರಾಯ.

' ಹಾಗಂದ್ರೂ ತಪ್ಪಲ್ಲ ಅಣ್ಣ.'

—ರಾಘವೇಂದ್ರರಾಯನ ಮಾತಿನ ಸತ್ಯದ ಇದಿರು ತಲೆಬಾಗಿ ಹೇಳಿದ ವಿಠೋಬ.

' ತಪ್ಪಿಲ್ಲವಂತೆ, ತಪ್ಪಿಲ್ಲ........ಥತ್....ಆ ಮಾತಾಡೋಕೆ ನಿನಗೆ ನಾಚಿಕೆ ಆಗೋಲ್ವಾ ವಿಠೋಬ. ದಿಕ್ಕು ತಪ್ಪಿದ ಹೆಣ್ಣುಮಗಳ ಗಂಟು ಹೊಡೆದು ನೀನು ಉದ್ಧಾರ ಆಗಬೇಕೇ ? ನಿನ್ನ ಜನ್ಮಕ್ಕಿಷ್ಟು ಬೆಂಕಿ ಹಾಕ. ಗಂಡಸಾಗಿ ಮೊಕ ಇಟ್ಟುಕೊಂಡು ಆ ಮಾತಾಡ್ತೀಯಾ ? ಸೀತಾರಾಮಯ್ಯ ಇವನ ಸ್ನೇಹಿತನಂತೆ....ಇವನು ರತ್ನಕ್ಕನ್ನ ಉದ್ಧಾರಮಾಡ್ತಾನಂತೆ. ಇಂಥ ಬಾಳು ಹೊರೆಯೋದಕ್ಕಿಂತ ಭಾವೀಲಿ ಮೊಗಚಿಕೊಳ್ಳೋದು ಮೇಲು. ನೀನು ಮನುಷ್ಯನಾಗಿ ಬದುಕಬೇಕೂಂತ ಇದ್ದರೆ, ಬಾ. ಇದಲ್ಲ ಬೇರೆ ನೂರು ದಾರಿ ತೋರಿಸ್ತೀನಿ. ಕಷ್ಟಪಟ್ಟು ದುಡಿದು ಮನುಷ್ಯನಾಗು. ಹೀಗೆ ಕಂಡೋರ ಆಸ್ತೀಗೆ ನಾಲಿಗೆ ಜೋಲು ಬಿಡಬೇಡ.'

' ಅದೇ ನಿನ್ನ ತೀರ್ಮಾನ ಅಣ್ಣ.'

' ಹೂ. ಅಷ್ಟೆ.'

' ಸರಿ ಹಾಗಾದ್ರೆ. ನೀನು ನನ್ನ ಸ್ನೇಹಿತಾಂತ ಅಂದುಕೊಂಡಿದ್ದೆ. ಬರ್ತೀನಿ ರಾಘಣ್ಣ.'

—ಎಂದ ವಿಠೋಬ, ರಾಘವೇಂದ್ರರಾಯನ ಮಾತುಗಳಿಂದ ತನ್ನ ಹೃದಯದಲ್ಲೆದ್ದ ಕ್ರೋಧದ ಉರಿಯನ್ನು ತೋರಿಸಿಕೊಳ್ಳದೆ.

' ನಾನೂ ನಿನ್ನ ಸ್ನೇಹಿತ. ಸೀತಾರಾಮಯ್ಯನೂ ನಿನ್ನ ಸ್ನೇಹಿತನೇ ಆಗಿದ್ದ ಅನ್ನೋದನ್ನ ಮರೀಬೇಡ ವಿಠೋಬ. ಆ ಮಾತು ಮರೆತರೆ ದೇವರು ನಿನಗೆ ಒಳ್ಳೇದು ಮಾಡೋಲ್ಲ.'

—ಎಂದ ರಾಘವೇಂದ್ರರಾಯ ಎಚ್ಚರಿಕೆ ಹೇಳುವ ಧ್ವನಿಯಲ್ಲಿ.

‘ ಆಯ್ತು. ದೇವರ ಮನಸ್ಸಿನಲ್ಲಿ ಹೇಗಿದೋ ಹಾಗಾಗಲಿ.’

—ಎಂದು ಹೇಳಿ ವಿಠೋಬ ದುರ್ದಾನ ತೆಗೆದುಕೊಂಡವನಂತೆ ರಾಘವೇಂದ್ರರಾಯನತ್ತ ತಿರುಗಿಕೂಡ ನೋಡದೆ ಹೊರಟುಹೋದ.

# ೬

ವಿಠೋಬನ ಮನಸ್ಸು, ರಾಘವೇಂದ್ರರಾಯನ ನಿರಾಕರಣೆಯಿಂದ ಹೆಡೆ ತುಳಿದ ಹಾವಿನಂತಾಗಿತ್ತು. ತನ್ನ ಕೇಳಿಕೆಯನ್ನು ರಾಘವೇಂದ್ರರಾಯ ಅಷ್ಟು ಒರಟಾಗಿ ನಿರಾಕರಿಸಬಹುದೆಂದು ವಿಠೋಬ ಊಹಿಸಿರಲಿಲ್ಲ. ಅದರ ಜೊತೆಗೆ ರತ್ನಮ್ಮನ ಬಳಿಗೆ ಈರಮ್ಮನನ್ನು ಕಳಿಸಿದವನು ತಾನೇ ಎಂದು ಅವನು ತನ್ನ ಮುಖಕ್ಕೆ ರಾಚಿದುದರಿಂದಲೂ ವಿಠೋಬನ ಮನಸ್ಸು ಸಿಡಿಮಿಡಿಗೊಂಡಿತ್ತು. ಹಾಗೇ, ಯಾವುದು ಸುಲಭವಾಗಿ ಲಭ್ಯವೆಂದು ನಂಬಿದ್ದನೋ, ಅದು ತೀರಾ ದುರ್ಲಭ್ಯವಾಗಿ, ನಿರಾಶೆಯ ಕಹಿಯೂ ಅವನ ಹೃದಯದಲ್ಲಿ ಉರಿದೆದ್ದ ಕ್ರೋಧದ ಭಾವನೆಗೆ ಗಾಳಿ ಬೀಸುತ್ತಿತ್ತು. ಎಂತಲೇ ರಾಘವೇಂಪ್ರರಾಯನ ಮಾತು ಕೇಳಿ, ನಂಜಾಪುರದ ಶಾನುಭೋಕಿಯ ಆಸೆಯನ್ನು ಬಿಟ್ಟು ಬಿಡದೆ, ಹೇಗಾದರೂ ರತ್ನಮ್ಮನನ್ನು ಅದಕ್ಕೆ ಒಪ್ಪಿಸಿ, ರಾಘವೇಂದ್ರರಾಯನ ಮುಖಕ್ಕೆ ಹೊಡೆದಂತೆ ನಂಜಾಪುರದ ಶಾನುಭೋಗನಾಗಿ ಆಳಬೇಕು ಎಂಬ ಹಟವನ್ನು ಕಟ್ಟಿಕೊಂಡು, ಅದನ್ನು ಹೇಗೆ ಸಾಧಿಸುವುದು ಎಂದು ಚಿಂತಿಸುತ್ತಲೇ, ಈರಮ್ಮನ ಮನೆಗೆ ಹೋಗಿ, ಕುಳಿತುಕೊಂಡ— ಬೀಡಿಯಮೇಲೆ ಬೀಡಿಯನ್ನು ಎಳೆಯುತ್ತಾ.

ಅಷ್ಟು ಹೊತ್ತಿನ ಮೇಲೆ ಅಲ್ಲಿಗೆ ಬಂದ ಈರಮ್ಮ, ತಾನು ಬಂದುದನ್ನೂ ಅರಿಯದೆ, ಯಾವುದೋ ಚಿಂತೆಯಲ್ಲಿ ಮುಳುಗಿ ಕುಳಿತ ಅವನನ್ನು ನೋಡಿ, ನಗುತ್ತಾ—

‘ಯಾರ ಮನೆ ಮುಳುಗುಸೋಕೆ ಅಷ್ಟು ಯೋಚನೆ ಮಾ[illegible]

—ಎಂದಳು.

'ಬುದ್ಧಿ ಎಲ್ಲಿಟ್ಕೊಂಡು ಮಾತಾಡ್ತಿ. ನಿನಗೂ ಆ ರಾಘಣ್ಣನ ಬೋಧನೆ ಆಯ್ತೇ?'

—ಎಂದು ತಟಕ್ಕನೆ ಸಿಡಿದು ಕೇಳಿದ ವಿಠೋಬ.

. ತನ್ನ ನಗೆ ಮಾತಿಗೆ ಪ್ರತಿಯಾಗಿ ಅವನಿಂದ ನಗೆಮಾತನ್ನು ನಿರೀಕ್ಷಿಸಿದ ಈರಮ್ಮ ಅವನಿಂದ ಸಿಡುಕಿನ ಮಾತನ್ನು ಕೇಳಿ ಅಪ್ರತಿಭಳಾದಳು.

'ನಗೆಸಾರಕ್ಕೆ ಕೇಳಿದ್ರೆ ಅದ್ಯಾಕಿಂಗೆ ರೇಗ್ತಿ? ಎಲ್ಲಾರ ಕುಡ್ದು ಬಂದಿದೀಯೋ, ಹೆಂಗೆ?'

—ಎಂದು ಕೇಳಿದಳು ಈರಮ್ಮ ಚುರುಕಾಗಿ.

'ನಾನು ಕುಡ್ದಿ.ಲ್ಲ ಆದರೆ ನಿನಗೆ ಮಾತ್ರ ಬುದ್ಧಿ ನೆಟ್ಟಗಿಲ್ಲ'

—ಎಂದು ಮೊದಲಿನ ಹಾಗೇ ಸಿಡುಕುತ್ತಾ ಹೇಳಿದ ವಿಠೋಬ.

'ನೀನಿಂಗಿದ್ರೆ ನನ್ನ ಬುದ್ಧಿ ನೆಟ್ಟಗೆ ಹೆಂಗಿರ್ತದೆ ಹೇಳು. ಯಾಕ್ಹಿಂಗಿದೀಯ? ಏನಾಯ್ತು?'

—ಎಂದು ಈರಮ್ಮ ಕೊಂಚ ಮೆತ್ತಗಾಗಿ, ವಿಠೋಬನ ಅನಿರೀಕ್ಷಿತ ವರ್ತನೆಗೆ ಕಾರಣ ತಿಳಿಯದೆ ಕೇಳಿದಳು.

'ಆಗೋದೇನು? ಅಂದ್ಕೊಂಡಿದ್ದೆಲ್ಲಾ ನೀರ್‍ನಾಗೆ ಹೋಮ ಮಾಡ್ದಂಗಾಯ್ತು.'

'ಅಂದ್ರೆ........'

'ರಾಘಣ್ಣ ಸಿಕ್ಕಿದ್ದ.'

'ಹೌದಾ? ಶಾನುಭೋಕಿ ವಿಷಯ ಕೇಳ್ದ್ಯಾ?'

'ಕೇಳಿದ್ದೂ ಆಯ್ತು. ಮುಖಕ್ಕೆ ಹೊಡೆದಹಾಗೆ ಇಲ್ಲಾಂತ ಅನ್ನಿಸಿಕೊಂಡಿದ್ದೂ ಆಯಿತು.'

'ಹಂಗಾ? ರಾಘಣ್ಣ ಒಪ್ಪಲಿಲ್ವಾ?'

ಒಪ್ಪಲಿಲ್ಲ ಅಷ್ಟೇ ಅಲ್ಲ. ಅವನ ಕೈಲಿ ಕೇಳಬಾರದ ಮಾತೆಲ್ಲಾ ಕೇಳಿಸಿಕೊಂಡು ಬಂದದ್ದಾಯ್ತು.'

'ಯಾಕೆ? ಏನಂದ?'

ನಾನು ಅವನು ದೊಡ್ಡಮನುಷ್ಯ ಅಂದುಕೊಂಡಿದ್ದೆ. ಅದೇ

ತಪ್ಪಾಯ್ತು.'

' ಅದ್ಹೋಗ್ಲಿ ಏನಂದ ಹೇಳ್ಬಾರ್ದಾ ?'

' ಯಾತ್ಯಾತರದೋ ಹಲ್ಕಾ ಮಾತೆಲ್ಲಾ ಆಡ್ದ.'

' ನಿನ್ನ–ಹಂಗೆಲ್ಲಾ ಅಂದ್ನಾ ?....'

—ವಿಠೋಬನ ಮಾತನ್ನು ಕೇಳಿ ಚಕಿತಳಾಗಿ ಕೇಳಿದಳು ಈರಮ್ಮ.

' ನನ್ನೇ ಏನು? ನಿನ್ನೂ.'

' ನನ್ನೂ ಬೈದ್ನಾ—ಅವನ ಬಾಯಿಗಿಷ್ಟು ಮಣ್ಣು ಹೊಯ್ಯ. ನನ್ನ ಅನ್ನೋಕೇನು ಬಂದಿತ್ತು ಅವನಿಗೆ ಕೇಡು. ನಾನೇನಾದ್ರೂ ಅವನ ಮನೆ ಬಾಗ್ಲಿಗೆ ಬಿಕ್ಷಾ ಕೇಳಾಕೆ ಹೋಗಿದ್ನಾ ?'

—ರಾಘವೇಂದ್ರರಾಯ ತನ್ನನ್ನು ಬೈದನೆಂಬುದನ್ನು ಕೇಳಿ ಕೆರಳಿ ಹೇಳಿದಳು ಈರಮ್ಮ.

' ನೆಕ್ಕೋನಾಯಿಗೆ ಲಿಂಗವೇನು ಪಾಣಿಪಟ್ಟವೇನು ? ಎಲ್ಲಾ ಒಂದೇ.'

' ಅದೇನಂದ ಹೇಳು. ಅವನ ಗ್ರಾಚಾರ ಬಿಡಿಸಿಬಿಡ್ತೀನಿ. ಅವನು ದೊಡ್ಡ ಮನುಷ್ಯನಾದರೆ, ಅವನ ದೊಡ್ಡಸ್ತಿಕೆ ಅವನ ಮನೇಲಿರ್ತದೆ. ನಮಗೆ ನಾರಾ ತಂದು ಕೊಡ್ತಾನಾ. ನನ್ನ ಯಾಕಂತೆ ಬೈದದ್ದು ?'

' ಯಾಕೆ ಅಂದ್ರೆ, ನೀನು ನನ್ನ ಸೂಳೆ ಅಲ್ವಾ ?'

' ಆ....ಹಂಗಂದ್ನಾ ಆ ಬಡ್ಡೀ ಮಗ.'

' ಅಷ್ಟೇ ಅಲ್ಲ. ನಾನೂ ನೀನು ಇಬ್ರೂ ಸೇರಿಕೊಂಡು, ರತ್ನಮ್ಮನ ತಲೇಮೇಲೆ ಚಪ್ಪಡಿ ಎಳಿಯೋಕೆ ಹೊರಟಿದೀವಂತೆ.'

' ನಾವಂಥಾದ್ದೇನಂತೆ ಮಾಡಿದ್ದು.'

' ನೀನು ಸಾಲ ಕೇಳಿಕ್ಕೆ ಹೋಗಲಿಲ್ಲವೆ ?'

' ಅದಕ್ಕೇನಂತೆ. ಕೊಟ್ಟ ಸಾಲ ಕೇಳದೆ ಬಿಡ್ಹೋಕೆ, ಅದೇನು ಅಃನಪ್ಪನ ಮನೇ ಗಂಟೇ ? ಬರೀ ಕೇಳೋದೇನು ಬಂತು—ಇಟ್ಟು ಹೋಗ್ ಅಂತ ಬೀದೀಲಿ ಹಿಡಿದು ನಿಲ್ಲಿಸಿ ಕೇಳ್ತೀನಿ ನಾಳೆ. ಅದೇನ್ಮಾಡ್ತಾನೆ ಮಾಡ್ಲಿ.'

' ಅವನೂ ಅದೇ ಹೇಳ್ದ.'

' ಏನು ?'

'ಅದ್ದೆಂಗೆ ವಸೂಲು ಮಾಡ್ಕೋತಾಳೇ ಮಾಡ್ಕೊಳ್ಳಿ, ನಾನೂ ನೋಡ್ತೀನಿ' ಅಂದ. ಬಡ್ಡಿ ಎಲ್ಲಾ ಬಿಟ್ಟು ಬರೀ ಅಸಲು ಬೇಕಾದರೆ ಕೊಡ್ತಾನಂತೆ.'

'ಬಡ್ಡಿಬಿಡೋಕೇನಾರ ಅವನಪ್ಪನ ಮನೆಗಂಟು ತಿಂದಿದೀನಾ ನಾನು? ಚಿಕ್ಕಾಸೂ ಬಿಡಾಕಿಲ್ಲ. ನಾಳೆ ಆಳು ತಗೊಂಡ್ಹೋಗಿ ಅವಳ ಮನೆ ಬಾಗಲ್ನಾಗೆ ಕೂಡಸ್ತೀನಿ. ಅದ್ದೆಂಗೆ ಬಡ್ಡಿ ಬಿಡಿಸಿಕೊಳ್ತಾನೋ ಬಿಡಿಸಿಕೊಳ್ಳಲಿ. ಇವತ್ತಲ್ಲ ನಾಳೆ, ಅವರು ಕೊಟ್ಟಾಗ ಕೊಡಲಿ ಅಂತ ಸುಮ್ನಿದ್ರೆ ಇವ್ರಿಗ್ಗಿಂಗೆ– ಪೊಗರು. ನಾನೂ ಒಳ್ಳೇತನಕ್ಕೆ ಬಂದ್ರೆ ಒಳ್ಳೇಳು. ಅಡ್ಡದಾರೀಗೆ ಬಂದ್ರೆ, ನೀನೂ ಅಂದ್ರೆ ನಿಮ್ಮಪ್ಪ ಅನ್ನೋದೇ. ನೀನು ಸುಮ್ಕಿರು. ಅದೆಂಗವನು ಬಡ್ಡಿ ಬಿಡಿಸಿಕೊಳ್ತಾನೋ ನೋಡೇ ಬಿಡೋಣ. ನಾಳೇನೇ ಮನೆ ಬಾಗ್ಲಿಗೆ ಆಳು ಹಾಕ್ದೆ ಹೋದ್ರೆ ನನ್ನ ಹೆಸರೇ ಅಲ್ಲ. ಏನ್ಹೇಳ್ತಿ?'

—ಎಂದಳು ವಿಠೋಬನ ಮಾತುಗಳಿಂದ ಕೆರಳಿದ ಈರಮ್ಮ.

'ನಾನು ಏನು ಹೇಳಲಿ? ನನ್ನ ಅದೃಷ್ಟಾನೇ ಕೆಟ್ಟದು. ಅವನ್ನ ಕೇಳಲಿಕ್ಕೇ ಹೋಗಬಾರದಾಗಿತ್ತು. ನನ್ನದೇ ತಪ್ಪಾಯ್ತು'

—ನೊಂದ ಧ್ವನಿಯಲ್ಲಿ ಹೇಳಿದ ವಿಠೋಬ.

'ಹೋದ್ರೆ ಹೋಗ್ಲೇಳು. ಆ ಪುಡಗೋಸಿ ಶಾನುಭೋಕಿ ಕಟ್ಟಿಕೊಂಡು ನಿನಗಾಗಬೇಕಾದ್ದೇನು? ನಿಂಗೇನಾರ ಬೇಕಿದ್ರೆ ನಾನಿಲ್ವಾ? ನ್ನಾನೇನು ಸತ್ತು ಹೋಗಿದೀನಾ? ನೀನು ಸುಂಮ್ಕಿರು—ನಾಳೆ ಇವನು ಆಟ ಕಿಡೋದು ತೋರಸ್ತೀನಿ. ನಿನ್ತವ ಮಾತಾಡ್ದಂಗಲ್ಲ'

—ಎಂದಳು ಈರಮ್ಮ, ತುಟಿಯನ್ನು ಕಚ್ಚಿ. ಸಿಟ್ಟಿನಿಂದ ಬಿಗಿದ ಅವಳ ಮುಖವನ್ನು ಕಂಡು, ತಾನು ಅವಳನ್ನು ಬಹು ದೂರ ಕೆಣಕಿದೆನೇನೋ ಎಂದು ವಿಠೋಬನಿಗೂ ಒಂದು ಗಳಿಗೆ ಗಾಬರಿಯಾಯಿತು .ಎಂತಲೇ ಅವಳ ಸಿಟ್ಟನ್ನು ಇಳಿಸುವ ಸಲುವಾಗಿ—

'ಹಾಳಾಗಿ ಹೋಗ್ಲಿ ಬಿಡು. ದೊಡ್ಡ ಮನುಷ್ಯ ಅಂತ ಅವನ್ನ ಕೇಳಲಿಕ್ಕೆ ಹೋದ್ದು ನನ್ನದೇ ಹಲ್ಕ ಕೆಲಸ. ಅವನತಪ್ಪಿಗೆ ರತ್ನಕ್ಕನ್ನೇಕೆ ಕಾಡಿಸಬೇಕು? ಸಾಲಕೊಡು ಅಂತ ಹಿಂಸೆಮಾಡಿದ್ರೆ, ಆಕೆಗೆ ತಾನೆ ಕಷ್ಟಕ್ಕೆ ಬರೋದು'

—ಎಂದ:

' ನಾನು ತೀರಸ್ತೀನಿ ಅಂತ ಕೊಚ್ಚಿಕೊಳ್ಳಲಿಲ್ಲವೇ ಇವನು. ಅದೆಲ್ಲಿಂದ ತಂದು ತೀರಿಸ್ತಾನೋ ತೀರಿಸ್ಲಿ. ಕೈಲಿ ಮಾಡೋದು ಮಾತಾಡ್ದಷ್ಟು ಸುಲಭ ಅಲ್ಲ '

—ಎಂದಳು ಈರಮ್ಮ ವಿಠೋಬನ ಮಾತಿನಿಂದ ಶಾಂತಳಾಗದೆ.

' ಆ ಮಾತು ಅಲ್ಲಿಗೆ ಬಿಡು ಅಂನ್ನಲ್ಲಾ....'

' ನೀನು ಗಂಡಸಾಗಿ ಹುಟ್ಟಿ ಕೆಟ್ಟಿ. ಮಾತು ಬಿಡಬೇಕಂತೆ. ಅವನ ಕೈಲಿ ಸೂಳೆ ಅಂತ ಬೈಸಿಕೊಂಡು ಸುಮ್ನೆ ಇರಬೇಕಾ? ಆ ಮಾತಾಡಿದ ಬಾಯಿ ಸೆಗಣಿ ತಿನ್ನೋ ಹಾಗೆ ಮಾಡ್ದೇ ಇದ್ರೆ, ನನ್ನೆಸರು ಈರಮ್ಮನೇ ಅಲ್ಲ.'

' ಸರಿ, ಸರಿ. ನೀನೇನು ಮಾಡಲಿಕ್ಕಾಗುತ್ತೆ ಅವನಿಗೆ. ಎಷ್ಟಾದರೂ ಅವನು ಈ ಹಳ್ಳಿ ಶಾನುಭೋಗ. ಬೇಕಾದಷ್ಟು ಜನಬಲ ಇದೆ ಅವನಿಗೆ.'

' ಅವನಿಗೊಬ್ಬನಿಗೇನಾ ಜನಬಲ ಇರೋದು. ನೋಡೇ ಬಿಡ್ತೀನಿ. ನೀನು ಸುಮ್ಮಿರು. ನಾಳೆ ಅವನೂ, ರತ್ನಮ್ಮ ಇಬ್ರೂ ಬಂದು ಆ ಶಾನುಭೋಕೀನ ನಿನ್ನ ಕಾಲುತವ ತಂದು ಮಡಗೋಹಂಗೆ ಮಾಡ್ತೀನಿ. ಸಂಜಾಪುರದಾಗೆ ಇವನು ಶಾನುಭೋಕಿ ಮಾಡೋದು ಇದೇ ಕಣ್ಣಾಲ್ಲಿ ನೋಡೋವಂತೆ '

—ಎಂದಳು ಈರಮ್ಮ ಶಪಥ ಮಾಡುತ್ತಾ.

ಯಾರ ಮಾತಿನಿಂದಲೂ ಇಳಿಯದ ಅವಳ ಕ್ರೋಧವನ್ನು ಕಂಡ ವಿಠೋಬನಿಗೂ ಈ ಪ್ರಸಂಗ ಎಲ್ಲಿಗೆ ಹೋಗಿ ಮುಟ್ಟುವುದೋ ಎಂದು ಗಾಬರಿಯಾಯಿತು. ಹಾಗೇ ' ಹೀಗೆಲ್ಲಾ ಮಾಡಬಾರದು ' ಎಂದು ಈರಮ್ಮನಿಗೆ ಬುದ್ಧಿವಾದ ಹೇಳಬೇಕು ಎನಿಸಿತು. ಆದರೆ ಈರಮ್ಮನಿಗೆ ಬುದ್ಧಿವಾದ ಹೇಳುವ ಸ್ಥಿತಿಯಲ್ಲಿ ಅವನಿರಲಿಲ್ಲ. ಅವನೇ ಅವಳ ಕೈಯ ದಾಳವಾಗಿದ್ದ.

ತನ್ನ ಶಾನುಭೋಕಿಯ ಆಸೆ ಯಾರ ಪಾಲಿಗೆ ಏನು ದುರಾದೃಷ್ಟವಾಗಿ ಪರಿಣಮಿಸುವುದೋ ಎಂದು ಚಿಂತಿಸುತ್ತಾ, ಯಾವ ಮಾತೂ ಆಡದೆ ಸುಮ್ಮನೆ ಕುಳಿತಿದ್ದ ವಿಠೋಬ.

' ಅದ್ಯಾಕೆ ಹಂಗೆ ಕುಂತ್ಕೊಂಡೆ? ನೀನು ಚಿಂತೆ ಮಾಡಬ್ಯಾಡ

ಸುಮ್ಕಿರು.. ಅದೆಲ್ಲಾ ಮರತು ಹಾಯಾಗಿರು. ನಾಳೆ ಬೆಳಕು ಹರೀಲಿ. ನೋಡ್ಕೊಳ್ಳೋಣ'

—ಎಂದು ಈರಮ್ಮ, ಗೋಡೆಯ ಬದಿಯಲ್ಲಿಟ್ಟ ಹಾಸಿಗೆಯನ್ನು ಹಾಸಿ—

'ದೀಪ ಆರಿಸಲಾ ?'

—ಎಂದು ಕೇಳಿದಳು.

'ಹೂ ಆರಿಸ್ಬಿಡು'

—ಎಂದ ವಿಠೋಬ.

ಈರಮ್ಮ ಉಸಿರನ್ನು ಊದಿ ದೀಪವನ್ನು ಆರಿಸಿದಳು. ಒಂದು ಗಳಿಗೆಯ ಹಿಂದೆ ಬೆಳಕಾಗಿದ್ದ ಮನೆಯಲ್ಲಿ ಕತ್ತಲಾವರಿಸಿತು. ಅದಕ್ಕಿಂತ ಹೆಚ್ಚಿನ ಕತ್ತಲು ವಿಠೋಬನ ಮನದಲ್ಲಿ ಕವಿದಿತ್ತು.

# ೭

ಆ ಮಾತು ಕಥೆಗಳು ನಡೆದ ಒಂದು ವಾರದದಿನ, ಆ ವಿಷಯವನ್ನೇ ಎತ್ತದೆ ಇದ್ದು, ಬಳಿಕ ಒಂದು ದಿನ ಈರಮ್ಮ, ಮತ್ತೆ ತಾನೇ ರತ್ನಮ್ಮನನ್ನು ಕಾಣಲು ಹೋದಳು.

'ಬಾ ಈರಮ್ಮ, ಇದೇನು ಒಳ್ಳೆ ಮಧ್ಯಾಹ್ನದ ಬಿಸಿಲಿನಲ್ಲೇ ಬಂದ್ಯೆ'

—ಎಂದು ಹೇಳಿ ರತ್ನಮ್ಮ, ಈರಮ್ಮನಿಗೆ ಕುಳಿತುಕೊಳ್ಳಲು ಚಾಪೆ ಕೊಟ್ಟಳು.

'ಮತ್ತೇನು ಮಾಡೋದು ರತ್ನಕ್ಕ, ಬಿಸಿಲು ಮಳೆ ಅಂದ್ರೆ ನಮ್ಮ ದರದು ಕೇಳ್ತದಾ? ಅದು ಒದ್ದುಕೊಂಡು ಬಂದಾಗ, ಬಿಸಿಲಾದ್ರೂ ಬರೊದೇ, ಬೆಂಕೀಲಾದ್ರೂ ಬರೋದೇ'

—ಎಂದಳು ಚಾಪೆಯಮೇಲೆ ಕುಳಿತು, ಬೆವರಿಳಿಯುತ್ತಿದ್ದ ಮುಖಕ್ಕೆ ಸೆರಗಿನಿಂದ ಗಾಳಿ ಹಾಕಿಕೊಳ್ಳುತ್ತಾ,

'ಬಿಸಿಲು, ಬೆಂಕಿ ಕೂಡ ನೋಡದಂಥ ದರದು ಏನು ಬಂತು ಈರಮ್ಮ ಈಗ?'

'ಅದೇ ಕಣವ್ವಾ. ಅವತ್ತು ಹೇಳ್ಳಿಲ್ವಾ? ಯಾರ್ಗ್ಗೋ ಅಷ್ಟು ದುಡ್ಡು ಕೊಡಬೇಕಾಗಿದ್ಮೆ. ದಿನಾ ಬಂದು ಅಂಗಡೀ ಮುಂದೆ ಪ್ರಾಣ ತಗೀತಾರೆ. ಅವರಿಗೆ ಉತ್ತರ ಹೇಳಿ ಹೇಳಿ ನಂಗೂ ಸಾಕಾಗೋಯ್ತು. ನಿಂಗೂ ಹೇಳಿಷ್ನಲ್ಲ. ಅದ್ಕೆ ಏನಾರ ಮಾಡ್ದೇನೋಂತ ಕೇಳಿಕೊಂಡ್ಹೋಗೋಣಾಂತ ಬಂದೆ? ಅಬ್ಬಬ್ಬಬ್ಬ....ಈ ಬಿಸಿಲಾಗೆ ನಡೆಯೋದೂಂದ್ರೆ ಹೆಣಾ ಬಿದ್ಹೋಗ್ತದೆ....

ಹೋಗ್ಲಿ....ಏನಾರ ಮಾಡ್ತಾ ? '

—ಎಂದು ಕೇಳಿದಳು ಆಯಾಸದ ನಿಟ್ಟುಸಿರುಬಿಡುತ್ತಾ.

' ನೀನು ಹೇಳಿದ ದಿನಾನೇ ರಾಘಣ್ಣನಿಗೆ ಹೇಳಿದೆ ಈರವ್ವ....'

' ಬರೀ ಹೇಳಿದ್ರೆ ಏನಾದಂಗಾಯ್ತು ರತ್ನಕ್ಕ ? '

—ರತ್ನಮ್ಮ ತನ್ನ ಮಾತು ಮುಗಿಸುವುದರೊಳಗೇ ನಡುವೆ ಬಾಯಿ ಹಾಕಿ ಹೇಳಿದಳು ಈರಮ್ಮ ಅಸಮಾಧಾನದ ಧ್ವನಿಯಲ್ಲಿ.

' ರಾಘಣ್ಣ ನಿನ್ನ ಹತ್ತಿರ ಬಂದು ಮಾತಾಡ್ತೀನೀಂತ ಹೇಳಿದ. ಸಿಕ್ಕಲಿಲ್ವಾ ? '

' ಶಾನುಭೋಗ್ರು ದೊಡ್ಡಮನುಷ್ಯರು ಕಣವ್ವಾ ರತ್ನಕ್ಕ. ನಮ್ಮಂಥ ಬಡವರ ಮನೆತಾವ ಎಲ್ಲಾ ಯಾಕೆ ಬರ್ತಾರೆ. ಅವರನ್ನ ನೋಡಬೇಕೂಂದ್ರೆ, ನಾವೇ ಅವರಿದ್ದ ಕಡೆ ಹೋಗ್ಬೇಕು. ನಮ್ಮಂಗ್ನೋರಿಗೆ ಬರೋಕೆ ಅವರಿಗೇನು ಗ್ರಾಚಾರ ? '

' ಹಾಗಲ್ಲ ಈರಮ್ಮ, ಈ ವಿಷಯ ನಿನ್ನ ಹತ್ತಿರ ಹೋಗಿ ಮಾತನಾಡಬೇಕೂಂತ ನಾನೇ ಹೇಳಿದೆ.'

'ನೀನು ಹೇಳ್ದಿಯೋ ಬಿಟ್ಟಿಯೋ ಅದೆಲ್ಲಾ ಕಟ್ಕೊಂಡು ನನಗೇನಾಗ ಬೇಕು ರತ್ನಕ್ಕ. ಶಾನುಭೋಗ್ರು ಬಂದಾರ ಬರ್ಲಿ, ಬಿಟ್ಟಾರ ಬಿಡ್ಲಿ. ಅದೆಲ್ಲಾ ನನಗ್ಯಾಕೆ ? ಅವರು ಯಾಕೆ ಬರಲಿಲ್ಲ ಅಂತ ಕೇಳೋಕೆ ನಾನು ಏನಾದ್ರೂ ಅವರಿಗೆ ಸಾಲ ಕೊಟ್ಟಿದೀನಾ ? ವ್ಯಾಪಾರ ಇರೋದು ನಂಗೆ ನಿಂಗೆ. ನೀವೇನಾರ ಮಾತಾಡ್ಕೊಳ್ಳಿ. ನೀನು ನಂಗೆ ಕೊಡೋದು ಕೊಟ್ರೆ ಆಯ್ತು. ಹೌದಲ್ವೋ ? '

—ಈರಮ್ಮ ಕೊಂಚ ಬಿರುಸಾದ ಧ್ವನಿಯಲ್ಲೇ ಹೇಳಿದಳು. ಹಿಂದಿನ ಬಾರಿ ಬಂದಿದ್ದಾಗ ಆಡಿದ ಮಾತಿನ ರೀತಿಗೂ, ಈಬಾರಿ ಮಾತನಾಡುತ್ತಿರುವ ರೀತಿಗೂ ಇದ್ದ ಅಂತರ ರತ್ನಮ್ಮನ ಗಮನಕ್ಕೆ ಬಾರದೇ ಹೋಗಲಿಲ್ಲ. ಅದನ್ನರಿತು, ಆಕೆಗೆ ಭಯವಾಯಿತು. ಆಕೆಯ ಪ್ರಶ್ನೆಗೆ ಏನು ಉತ್ತರ ಕೊಡಬೇಕೆಂದು ತೋಚದೆ, ಹಾಗೇ ಯೋಚಿಸುತ್ತಾ ಕುಳಿತಳು. ಅದನ್ನು ಕಂಡು ಈರಮ್ಮನೇ—

' ಹಿಂಗೆ ಸುಮ್ನೆ ಕೂತ್ರೆ ಏನ್ಮಾಡ್ದಂಗಾಯ್ತು ರತ್ನಕ್ಕ. ನಂಗೇನಾರ

ಒಂದು ಹೇಳು. ಅಂಗ್ಡೀನ ಹುಡುಗೀ ಮೇಲೆ ಬಿಟ್ಟು ಬಂದಿದೀನಿ. ಹಿಂಗೆ ಸುಮ್ಕೆ ಕೂತ್ಕೊಂಡಿರೋಕೆ ನಂಗೆ ಹೊತ್ತಿಲ್ಲ'

—ಎಂದು ಕೆಣಕಿದಳು.

'ನೀನು ಹೇಳೋದು ನಿಜ ಈರಮ್ಮ. ಆದರೆ, ನಿನಗೀಗ ಏನು ಉತ್ತರ ಕೊಡೋಕೂ ನನಗೆ ತೋಚ್ತಾ ಇಲ್ಲ.'

—ರತ್ನಮ್ಮ ತೀವ್ರ ಅಸಹಾಯಕತೆಯ ಧ್ವನಿಯಲ್ಲಿ ಹೇಳಿದಳು.

'ಹಂಗಂದ್ರೆ ಅದೇನು ಮಾತು ರತ್ನಕ್ಕ. ಕೊಡಬೇಕು ಅಂದ್ರೆ ದಾರಿ ಇಲ್ವಾ? ನಿಮ್ಮ ಹೊತ್ತಿನಾಗೆ, ಬಂದು ಕೇಳ್ತಿದ್ದಂಗೆ ತೆಗೆದುಕೊಡ್ಲಿಲ್ವಾ ನಾನು. ನಾನೂ ಹಿಂಗೇ ಅಲೆಸಿದೆನೇ. ಹೆಂಗಿಸ್ಕೊಂಡ್ಹೋಗಿದ್ರೋ ಹಂಗೇ ತಂದ್ಕೊಟ್ರೆ ಚಂದ. ಇನ್ನೊಂದ್ಸಲ ನಾವೂ ಸಮಯಕ್ಕಾಗ್ತೀವಿ. ಅದುಬಿಟ್ಟು ಏನ್ಮಾಡೋಕೂ ತೋಚಾಕಿಲ್ಲ ಅಂತ ನನ್ನ ಮುಖ ನೋಡಿದ್ರೆ, ಅದರ ಮೇಲೆ ನಾರ ಹಿಂಗ್ಮಾಡು ಅಂತ ಬರದೈತಾ?'

—ಮಾತಿನ ಮೊನೆಯಿಂದ ರತ್ನಮ್ಮನ ಎದೆಯನ್ನು ಇರಿಯುತ್ತಾ ಕೇಳಿದಳು ಈರಮ್ಮ.

'ನನ್ನ ಕೈಯಲ್ಲಿ ದುಡ್ಡಿಟ್ಟುಕೊಂಡು, ನಿನ್ನ ಬೇಕೆಂತ ಅಲಿಸ್ತಿದೀನಾ ಈರಮ್ಮ? ನನ್ನಾಣೆಗೂ ನನ್ನ ಹತ್ತಿರ ಇದ್ದಿದ್ರೆ ಆವತ್ತೇ ಮರುಮಾತಾಡದೆ ಕೊಟ್ಟು ಕಳಿಸುತ್ತಿದ್ದೆ. ಆದರೇನು ಮಾಡಲಿ—ನಂದೂ ಬರಿಕೈಯಾಗಿದೆ.'

'ಬರಿಗೈ! ಅದೆಂಥ ಮಾತು ರತ್ನಕ್ಕ. ನಿಂಗೇನು ಮನೆಮಟ ಇಲ್ವಾ? ಜಮೀನಿಲ್ವಾ? ಮನಸ್ಸು ಮಾಡಿದ್ರೆ ಈ ಬೇವಾರ್ಸಿ ಇನ್ನೂರು ರೂಪಾಯಿನ ಸಾಲ ದೊಡ್ಡದಾ? ಆಧಾರ ಪತ್ರ ಮಾಡ್ಕೊಟ್ಟರೆ ಯಾರಾರ ದುಡ್ಡು ಕೊಡ್ತಾರೆ. ಬೇಕಾದ್ರೆ, ಹಂಗ್ಮಾಡಬೇಕೂಂದ್ರೆ ನಾನೇ ಕೊಡಸ್ತೀನಿ. ಅದು ಬಿಟ್ಟು ಏನ್ಮಾಡ್ಲಿ ಅಂದ್ರೆ ಹೆಂಗಾಗ್ತದೆ ಹೇಳು.'

'ಆ ಕೆಲಸ ನನಗಿಂತಮುಂಚೆ ಅವರೇ ಮಾಡಿ ಹೋಗಿದಾರೆ ಈರಮ್ಮ.

'ಅಂದ್ರೆ—ಹೊಲಾನೂ ಆಧಾರ ಆಗಿದಾ?'

'ಹೂ.'

'ಯಾರ್ಗೆ?'

'ನಂಜಾಪುರದ ನಾರಾಯಣಶೆಟ್ಟರಿಗೆ'

‘ ಹಂಗಂದ್ರೆ–ಈಗ ನನಗೆ ದುಡ್ಡು ಕೊಡೋಕಿಲ್ಲಾಂತಾನೇ ರತ್ನಕ್ಕ ? ಸೀತಾರಾಮುಪ್ಪ ಇಂಥ ಗಂಟೆತ್ತಿಹಾಕೋ ಅಂತ ಕೆಲ್ಸ ಮಾಡ್ತಾನೇಂತ ನಾನು ಅಂದ್ಕೊಂಡಿರಲಿಲ್ಲ. ನಾನೂ ಒಳ್ಳೆ ಸಾಭ್ಯಸ್ತಾ ಅಂತ್ಲೇ ಅಂದ್ಕೊಂಡಿದ್ದೆ ’

—ಎಂದಳು ಈರಮ್ಮ ಕಟುವಾಗಿ. ತನ್ನ ಗಂಡನನ್ನು ಅವಳು ‘ಗಂಟು ಕಳ್ಳ ’ ಎಂದುದನ್ನು ಕೇಳಿ ರತ್ನಮ್ಮನ ಹೊಟ್ಟೆಯಲ್ಲಿ ಬೆಂಕಿ ಸುರಿದಂತಾಯಿತು. ತಟಕ್ಕನೆ ರೇಗಿ–

‘ ನೋಡು–ಈರಮ್ಮ, ಬೇಕಾದ್ರೆ ನಿನಗೆ ಕೊಡಬೇಕಾದ ದುಡ್ಡಿನ ಮಾತಾಡು. ಸತ್ತು ಸ್ವರ್ಗದಲ್ಲಿರೋ ಅವರನ್ನ ಏನೂ ಅನ್ನಲಿಕ್ಕೆ ಹೋಗ ಬೇಡ ’

—ಎಂದಳು ಬಿರುಸಾಗಿ.

‘ ಆತನ್ನಂದ್ರೆ ನಂಗೇನಾರ ಒಪ್ಪತ್ತಿನೂಟ ಹುಟ್ತದಾ ? ನಾನು ಕೇಳಿದ್ದೂ ಅಷ್ಟೇ ಅಲ್ವಾ–ನನ್ನ ಸಾಲ ಕೊಡಿ ಅಂತ. ಆತ ಸ್ವರ್ಗದಾಗಾರ ಇರ್ಲಿ, ಎಲ್ಲಾರ ಇರ್ಲಿ, ನಂಗೇನಾಗಬೇಕಾಗಿದೆ. ಬರಬೇಕಾದ ಬಾಕಿ ಬಂದ್ರೆ ಸರಿ ’

—ಎಂದು ಈರಮ್ಮನೂ ಅದೇ ಧ್ವನಿಯಲ್ಲೇ ಹೇಳಿದಳು.

‘ ಈಗ ನಿನ್ನ ಸಾಲ ಕೊಡೋಲ್ಲಾಂತ ಯಾರಾದರೂ ಹೇಳಿದರೇ ?

‘ ಹೇಳಿದ್ದಕ್ಕೆ ಮತ್ತೆ, ಇಷ್ಟೆಲ್ಲಾ ಮಾತಾಡಬೇಕಾಯ್ತು ? ’

‘ ಯಾರು ಹೇಳಿದ್ರು ? ’

‘ ಶಾನುಭೋಗ ರಾಘಣ್ಣೋರೇ ? ವಿಠೋಬಪ್ಪೆದುರಿಗೇ ಹೇಳಿದ್ರಂತೆ. ಅದ್ಹೆಂಗೆ ವಸೂಲ್ಮಾಡಿಕೊಳ್ತಾಳೋ ಮಾಡಿಕೊಳ್ಲಿ, ನೊಡ್ತೀನಿ ’ ಅಂತ. ಹೆಂಗಸಿನ ದುಡ್ಡು, ಸುಲಭವಾಗಿ ಹೆದರಿಸಿ ಎತ್ತಿಹಾಕಬಹುದು ಅಂತ ಅಂದ್ಕೊಂಡ್ರೇನೋ.’

‘ ರಾಘಣ್ಣ ಎಂದೂ ಆ ರೀತಿ ಮಾತಾಡೊಲ್ಲ ಈರಮ್ಮ....’

‘ ಮಾತಾಡೊಲ್ಲ, ಆತ ಧರ್ಮರಾಯ ! ನಾನೇ ಹೊತ್ತ್ಹೋಗದ್ದಕ್ಕೆ ಕಥೆ ಕಟ್ಟಿಕೊಂಡು ಬಂದಿದೀನಿ, ಅಲ್ವಾ. ಚೆಂದಾಗೈತೇಳು. ಅದ್ಯೆಲ್ಲಾ ನಂಗ್ಯಾಕೆ ರತ್ನಕ್ಕಾ. ನೀನುಂಟು, ನಿನ್ನ ರಾಘಣ್ಣ ಉಂಟು. ನೀವೇನಾರ ಮಾಡ್ಕೊಳ್ಳಿ. ನಂಗೆ ಬರಬೇಕಾದ ದುಡ್ಡು ನಂಗೆ ಬಂದ್ರೆ ಸಾಕು. ಅವನ್ನ

ಕೇಳೋಕೆ ನಾನೇನಾದ್ರೂ ಆತನಿಗೆ ಸಾಲ ಕೊಟ್ಟಿದ್ನಾ? ನಾನು ಸಾಲ ಕೊಟ್ಟಿದ್ದು ನಿನ್ನ ಗಂಡನಿಗೆ. ತೀರಿಸಬೇಕಾದೋಳು ನೀನು. ನೀನು ಏನೇಳ್ತೀ ಹೇಳು.'

'ಆಯ್ತು. ಆದಷ್ಟು ಜೇಗ ತೀರಿಸೋ ಏರ್ಪಾಡು ಮಾಡ್ತೀನಿ ಈರಮ್ಮ.'

—ತನಗೂ ಮಾತು ಬೆಳಸುವ ಇಚ್ಛೆ ಇಲ್ಲದೆ ಹೇಳಿದಳು ರತ್ನಮ್ಮ.

'ಹಂಗಂದ್ರೆ ಹೆಂಗಾಗ್ತದೆ?'

'ಮತ್ತೆ—ಏನು ಹೇಳಬೇಕು?'

'ಕೊಡಬೇಕು, ಇಲ್ದೆ ಹೋದ್ರೆ, ಕರಾರುವಾಕಾಗಿ ಇಂಥ ದಿನ ಕೊಡ್ತೀನಿ ಅಂತ ಹೇಳ್ಬೇಕು.'

'ಆಗ್ಲಿ—ಇನ್ನೊಂದು ತಿಂಗಳಲ್ಲಿ ಏನಾರ ಮಾಡಿ ಕೊಡ್ತೀನಿ.'

'ತಿಂಗಳು ಗಿಂಗಳು ಅಂದ್ರೆ ಆಗೊಲ್ಲ ರತ್ನಕ್ಕ. ನಾನು ಕೊಡಬೇಕಾದೋರು ಅಷ್ಟೆಲ್ಲಾ ವಾಯಿದೆ ಕೇಳೊಲ್ಲ. ಇನ್ನೇನ್ಮಾಡ್ಲಿ—ನಿನಗೋಸ್ಕರ ನಾನು ಅವರ ಕಾಲಿಗೆ ಬಿದ್ದು, ಇನ್ನೊಂದು ವಾರ ವಾಯಿದೆ ಕೊಡಿ ಅಂತ ಕೇಳ್ಕೊಂಡು ಒಪ್ಪಿಸ್ತೀನಿ. ನೀನೂ ಅಷ್ಟರೊಳಗೆ ಏನಾರ ಮಾಡು. ಮತ್ತೆ ನಾನು ಹಗಲೆಲ್ಲಾ ಬರಾಕಾಗಾಕಿಲ್ಲ. ಗೊತ್ತಾಯ್ತಾ ರತ್ನಕ್ಕ. ಸುಮ್ನೆ ನನ್ನ ಕೆಟ್ಟೋಳ್ನ ಮಾಡ್ಬ್ಯಾಡ. ನಾನು ಬರ್ತೀನಿ'

—ಎಂದು ಹೇಳಿ ಈರಮ್ಮ ರತ್ನಮ್ಮ ಬೇರೇನೂ ಮಾತನಾಡಲು ಅವಕಾಶ ಕೊಡದೆ ಎದ್ದು ಹೋದಳು.

ಈರಮ್ಮ ತಲೆಬಾಗಿಲನ್ನು ದಾಟಿಕೊಂಡು ಹೊರಗೆ ಹೋಗುವುದಕ್ಕೂ, ರಾಘವೇಂದ್ರರಾಯ ಹೊರಗಿನಿಂದ ಒಳಗೆ ಬರುವುದಕ್ಕೂ ಸರಿಹೋಯಿತು.

ಮನೆಯಿಂದಾಚೆಗೆ ಬಿರುಗಾಳಿಯಂತೆ ಹೋಗುತ್ತಿದ್ದ ಈರಮ್ಮನನ್ನು ಕಂಡು ರಾಘವೇಂದ್ರರಾಯ—

'ಏನು ಸಮಾಚಾರ ಈರಮ್ಮ?'

—ಎಂದು ತಾನೇ ಕೇಳಿದ.

'ಏನೂ ಇಲ್ಲ'

—ಎಂದು ಬಿರುಸಾಗಿ ಉತ್ತರಕೊಟ್ಟು, ಅವನ ಮುಖವನ್ನು ಉರಿ

ಗಣ್ಣಿನಿಂದ ನೋಡುತ್ತಾ ಹೊರಟುಹೋದಳು ಈರಮ್ಮ. ಅವಳ ನಡತೆಯನ್ನು ಕಂಡು 'ಹೀಗೇಕೆ?' ಎಂದು ಆಶ್ಚರ್ಯವಾಯಿತು ರಾಘವೇಂದ್ರರಾಯನಿಗೆ. ಹಾಗೇ ಅವಳ ಒರಟಾದ ನಡತೆ, ಗಡುಸಾದ ಮಾತನ್ನು ಕೇಳಿ ಏನೋ ಒಂದು ಬಗೆಯಲ್ಲಿ ಅಪಮಾನವೂ ಆದಂತಾಗಿ, ಅವನ ಮುಖ ಕೆಂಪೇರಿತು.

'ಅಬ್ಬಾ, ಇಷ್ಟು ಧಿಮಾಕು ಬಂತೇ ಇವಳಿಗೆ!'

—ಎಂದು ತನಗೆ ತಾನೇ ಹೇಳಿಕೊಳ್ಳುತ್ತಾ ಒಳಗೆ ಬಂದ.

ರಾಘವೇಂದ್ರರಾಯ ಒಳಗೆ ಬಂದದ್ದನ್ನು ಕಂಡು ಏನೋ ಯೋಚಿಸುತ್ತಿದ್ದ ರತ್ನಮ್ಮ, ಏನೋ ನಿರ್ಧರಿಸಿದಂತೆ ತಟಕ್ಕನೆ ಎದ್ದು ಒಳಗೆ ಹೋದಳು. ಅದನ್ನು ಕಂಡು ಅವನಿಗೆ ಮತ್ತಷ್ಟು ಅಚ್ಚರಿಯಾಯಿತು. ತಾನು ಒಳಗೆ ಬಂದ ಕೂಡಲೇ, ತನಗೆ 'ಬಾ' ಎಂದು ಹೇಳದೆ, ರತ್ನಮ್ಮ ತಾನೇ ಎದ್ದು ಹೋದುದಕ್ಕೆ, ಏನು ಅರ್ಥ ಎಂದು ಚಿಂತಿಸುತ್ತಾ, ಈರಮ್ಮ ಹಾಗೆ ಹೋದುದಕ್ಕೆ ರತ್ನಮ್ಮ ಹೀಗೆ ಮಾಡಿದುದಕ್ಕೆ ತಾಳೆ ಹಾಕುತ್ತಾ, ತನ್ನ ವಿಷಯದಲ್ಲಿ ಈರಮ್ಮ ರತ್ನಮ್ಮನಿಗೆ ಏನಾದರೂ ಹೇಳಿರಬಹುದೇ, ಆಕೆ ಹೇಳಿದ ಯಾವ ಮಾತಿನಿಂದಲಾದರೂ ರತ್ನಮ್ಮನಿಗೆ ತನ್ನ ಮೇಲೆ ಅಸಮಾಧಾನವಾಗಿರಬಹುದೇ, ಇವರಿಬ್ಬರ ನಡುವೆ ಏನು ಮಾತು ಕಥೆ ನಡೆದಿರಬಹುದು, ಈರಮ್ಮ ಸಾಲ ಕೇಳಲಿಕ್ಕೆ ಬಂದಿದ್ದರೆ, ತನ್ನನ್ನು ಕಂಡ ರತ್ನಮ್ಮ ಆ ವಿಷಯವನ್ನು ತನಗೆ ತಿಳಿಸದೆ ಹೀಗೆ ಎದ್ದುಹೋದುದೇಕೆ ಎಂದೆಲ್ಲಾ ಯೋಚಿಸುತ್ತಾ, ಯಾವುದೂ ಬಗೆ ಹರಿಯದೆ, ಹಾಗೇ ನಡುಮನೆಯ ಕಂಭಕ್ಕೆ ಒರಗಿಕೊಂಡು ಕುಳಿತ.

ನೀರವವಾದ ಮನೆಯಲ್ಲಿ, ಒಂಟಿಯಾಗಿ ಕುಳಿತು ಯೋಚಿಸುತ್ತಾ ಯೋಚಿಸುತ್ತಾ, ವಿನಾಕಾರಣ ರತ್ನಮ್ಮನನ್ನು ಛಲಿಸುತ್ತಿರುವ ಈರಮ್ಮ, ವಿಠೋಬನ ವಿಷಯದಲ್ಲಿ ಅವನ ಹೃದಯದಲ್ಲಿ ಸಿಟ್ಟು ಹೆಡೆ ಬಿಚ್ಚಿತು.

ಸ್ವಲ್ಪ ಹೊತ್ತಾದ ಮೇಲೆ ಒಳಗೆ ಹೋಗಿದ್ದ ರತ್ನಮ್ಮ ಹೊರಗೆ ಬಂದಳು. ಅವಳು ಏನೂ ಹೇಳದೆಯೇ, ಅವಳ ಮುಖ ನೋಡುತ್ತಿದ್ದ ಹಾಗೇ, ಅವಳು ರಾಘವೇಂದ್ರರಾಯ ಬಂದಕೂಡಲೇ ಒಳಗೆ ಎದ್ದು ಹೋದದ್ದೇಕೆ ಎಂಬುದನ್ನು, ಅತ್ತು ಕೆಂಪಾಗಿ ಊದಿಕೊಂಡ ಕಣ್ಣು

ಗಳೇ ಹೇಳಿದವು. ಆ ಕಣ್ಣುಗಳು, ದದ್ದರಿಸಿಕೊಂಡ ಮುಖವನ್ನು ನೋಡಿ ತಾನೇ ಮಾತಾಡಿಸಿ ಮತ್ತೆ ಅವಳ ದುಃಖವನ್ನು ಕೆಣಕಲು ರಾಘವೇಂದ್ರ ರಾಯನಿಗೆ ಧೈರ್ಯವಾಗಲಿಲ್ಲ. ಎಂತಲೇ ಅವಳೇ ಮಾತಾಡಲಿ ಎಂದು ಸುಮ್ಮನಿದ್ದ.

ರತ್ನಮ್ಮನೂ, ತಾನು ಬಾಯಿ ಬಿಟ್ಟಕೂಡಲೇ ಮಾತಿಗಿಂತ ಮುಂಚಾಗಿ ಅಳುವೇ ಹೊರಬರುವುದಿಲ್ಲವೆಂದು ಮನಸ್ಸಿಗೆ ನೆಮ್ಮದಿ ಮಾಡಿಕೊಂಡು–

'ರಾಘಣ್ಣಾ ಈಗ ಒಂದು ಕೆಲಸ ಮಾಡಬೇಕಲ್ಲಾ....'

—ಎಂದಳು, ತಡೆಹಿಡಿದ ಅಳು, ನುಡಿನುಡಿಯಲ್ಲೂ ಮಿಡಿಯುತ್ತಿದ್ದ ಧ್ವನಿಯಲ್ಲಿ.

'ಏನು ಮಾಡಬೇಕು ರತ್ನಕ್ಕ?'

'ಕೂಡಲೇ ಎಲ್ಲಾದರೂ ಇನ್ನೂರಾಐವತ್ತು ರೂಪಾಯಿ ಜೋಡಿಸಿಕೋಬೇಕು.'

'ಏಕೆ?'.

'ಇನ್ನೊಂದು ವಾರದಲ್ಲಿ ಈರಮ್ಮನ ಸಾಲ ಕೊಟ್ಟೇ ಮುಗಿಯಬೇಕು. ಬೇರೆ ದಾರಿಯೇ ಇಲ್ಲ.'

'ಹಾಗಂತ ಹೇಳಿ ಹೋದಳೇ ಈರಮ್ಮ? ಅದಕ್ಕೇ ಏನು ಈಗ ಅವಳು ಬಂದದ್ದು?'

'ಹೂ.'

'ಅಷ್ಟೇ ಹೇಳಿದಳೋ ಇನ್ನೇನಾರ ಹೇಳಿದಳೋ?'

'ಏನೇನೋ ಹೇಳಿದಳು. ಅದೆಲ್ಲಾ ಕಟ್ಟಿಕೊಂಡು ಆಗಬೇಕಾದ್ದೇನು ರಾಘಣ್ಣ. ಅವಳ ಸಾಲ ಬಗೆಹರಿಸಿಬಿಟ್ಟರೆ ಅವಳು ಏನೂ ಮಾತಾಡುವುದಿಲ್ಲ. ಎಲ್ಲಾ ಬಂದಿರೋದು ಅಷ್ಟಕ್ಕೆ ತಾನೇ.'

'ಆ ವಿಷಯ ನನ್ನ ಮುಂದೆ ಹೇಳಿದೀನಿ ಅಂತ ಹೇಳಲಿಲ್ವೆ ನೀನು?'

'ಹೇಳಿದೆ.'

'ಮತ್ತೆ?'

'ನಿನಗೂ ಸಾಲಕ್ಕೂ ಏನು ಸಂಬಂಧ ರಾಘಣ್ಣ? ಕೊಟ್ಟೋಳು ಅವಳು, ತಗೊಂಡಿರೋದು, ತೀರಿಸಬೇಕಾದವರು ನಾವು.'

'ಈರಮ್ಮ ಹಾಗೆ ಹೇಳಿದಳೇನು?'

'ಆ ಮಾತಿನಿಂದೆಲ್ಲಾ ಈಗೇನು ಉಪಯೋಗ ರಾಘಣ್ಣ. ಮೊದಲು ದುಡ್ಡು ಜೋಡಿಸಿಕೊಳ್ಳೋ ದಾರಿ ನೋಡಬೇಕು ನಾವು. ಸದ್ಯ ಇದು ಹಾದಿರಂಪ ಬೀದಿರಂಪವಾಗದೆ ಮುಗಿದರೆ ಸಾಕಾಗಿದೆ.'

'ನೀನ್ಯಾಕಿಷ್ಟು ಹೆದರ್‍ತಿ ರತ್ನಕ್ಕ? ಇದು ಹಾದಿರಂಪವೂ ಆಗೋಲ್ಲ, ಬೀದಿರಂಪವೂ ಆಗೋಲ್ಲ. ಏನೂ ಆಗದಹಾಗೆ ನಾನು ನೋಡ್ಕೋತೀನಿಅಂತ ಹೇಳಲಿಲ್ಲವೇ? ನನ್ನ ಮಾತಿನಲ್ಲಿ ನಿನಗೆ ನಂಬಿಕೆ ಇಲ್ಲವೇ ರತ್ನಕ್ಕ?'

'ನಿನ್ನ ಮಾತಿನಲ್ಲಿ ನನಗೆ ನಂಬಿಕೆ ಇದೆ ರಾಘಣ್ಣ. ಆದರೂ ಈ ವಿಷಯದಲ್ಲಿ ಅವಳ ಹತ್ತಿರ ಏನೂ ಮಾತಾಡಲಿಕ್ಕೆ ಹೋಗಬೇಡ.'

'ಏಕೆ?'

'ರತ್ನಮ್ಮನ ಅನಿರೀಕ್ಷಿತವಾದ ಮಾತಿನ ಅರ್ಥ ತಿಳಿಯದೆ ಕೇಳಿದ ರಾಘವೇಂದ್ರರಾಯ.'

'ಇದ್ದ ವಿಷಯ ಹೇಳಿದರೆ ನೀನು ಅಸಮಾಧಾನ ಮಾಡಿಕೊಳ್ಳುವುದಿಲ್ಲ ತಾನೇ.?'

'ಎಲ್ಲಾದರೂ ಉಂಟೆ ರತ್ನಕ್ಕ?'

'ನೋಡು ನಿನ್ನ ಮನಸ್ಸು ಎಷ್ಟು ಒಳ್ಳೆಯದೋ ಬಾಯಿ ಅಷ್ಟು ಕೆಟ್ಟದು. ಸಿಟ್ಟಿನ ಹೊತ್ತಿನಲ್ಲಿ ಯಾರು ಏನು ಒಂದೂ ನೋಡದೆ ಏನಾದರೂ ಅಂದು ಬಿಡುತ್ತೀಯೆ. ಅದರಿಂದ ವೃಥಾ ಮನಸ್ತಾಪಕ್ಕೆ ಕಾರಣವಾಗುತ್ತದೆ. ಅದಕ್ಕೇ ನನಗೆ ಮತ್ತೆ ನಿನ್ನನ್ನು ಈರಮ್ಮನ ಹತ್ತಿರ ಕಳಿಸುವುದಕ್ಕೆ ಗಾಬರಿ.'

'ಈಗ ನಾನು ಯಾರಿಗಾದರೂ ಹಾಗೆಂದನೇ ರತ್ನಕ್ಕ?'

'ವಿಠೋಬಣ್ಣನ್ನ, ಈರಮ್ಮನ್ನ ಏನೇನೋ ಅಂದೆಯಂತೆ. ಅದಕ್ಕೆ ಆಕೆ ಮುಖ ಗಡಿಗೆದಪ್ಪ ಆಗಿತ್ತು.'

'ಓ—ಆ ವಿಷಯವೂ ನಿನಗೆ ತಿಳಿಯಿತೊ; ನಿಜ ಅನ್ನು. ವಿಠೋಬನ ಜನ್ಮ ತೊಳೆದು ಬಿಟ್ಟೆ.'

'ಏಕೆ?'

'ಮತ್ತೆ ಅವನ ಸುಳ್ಳು ಸೊಟರೆ ಕಂಡರೆ ನನಗೆ ಆಗೊಲ್ಲ, ಮೈ ಎಲ್ಲಾ ಉರಿಯುತ್ತೆ.'

‘ ಅವರು ಏನು ಸುಳ್ಳು ಹೇಳಿದರು ರಾಘಣ್ಣ ? ’

‘ ನೂರು ರೂಪಾಯಿ ಸಾಲಕ್ಕೆ, ನೂರೈವತ್ತು ರೂಪಾಯಿ ಬಡ್ಡಿ ಹಾಕಿ ಅದಕ್ಕೆ ಶಾನುಭೋಕೀನ ಹೊಡೆಯಬೇಕು ಅಂತ ಲೆಕ್ಕಹಾಕಿದರೆ, ಯಾರಿಗೆ ಹೊಟ್ಟೆ ಉರಿಯೋಲ್ಲ ಹೇಳು. ಸೀತಾರಾಮು ಸ್ನೇಹಿತನಾಗಿದ್ದು, ಅವನ ಕೈಲಿ ಎಷ್ಟೋ ಉಪಕಾರ ಮಾಡಿಸಿಕೊಂಡ ವಿಠೋಬನೂ ಇಂಥ ನೀಚತನಕ್ಕೆ ಇಳಿದನಲ್ಲಾ ಅಂತ ವ್ಯಸನವಾಯಿತು; ಸಿಟ್ಟೂ ಬಂತು. ಆದರೆ ಅವನ ಹಣ ಕೊಡಲಿಕ್ಕೆ ನಾನು ಇಲ್ಲ ಎನ್ನಲಿಲ್ಲ. ಬಡ್ಡಿ ಬಿಡಿಸಿ ಬಿಡು, ಅಸಲು ಹಣ ಫೈಸಲು ಮಾಡಿಸುತ್ತೇನೆ ಎಂದೆ. ಆ ವಿಷಯ ಏನಾದರೂ ಈರಮ್ಮ ಹೇಳಿದಳೇ ? ’

‘ ಊಹೂ—ಅದ್ಯಾವ ಸುದ್ದಿಯನ್ನೂ ಎತ್ತಲಿಲ್ಲ. ಇನ್ನೊಂದು ವಾರ ದೊಳಗೆ ನನ್ನ ಹಣ ಕೊಟ್ಟೇ ತೀರಬೇಕು ಎಂದು ಮುಖಕ್ಕೆ ಹೊಡೆದ ಹಾಗೆ ಹೇಳಿ ಹೋದಳು.’

‘ ಅಷ್ಟೇನೇ ? ’

‘ ಹೂ.’

‘ ಮತ್ತೆ ಇಂಥೋರ ಹತ್ತಿರ ಸಮಾಧಾನವಾಗಿರಬೇಕು, ಸಿಟ್ಟಾಗ ಬಾರದು, ಬೈಯಬಾರದು ಅನ್ನುತ್ತೀಯಲ್ಲಾ. ಇಂಥ ಅನ್ಯಾಯಾನ ಕಣ್ಣೆದು ರಿಗೇ ಮಾಡುತ್ತಿದ್ದರೆ ನೋಡಿಕೊಂಡು ಸುಮ್ಮನಿರೋದು ಯಾರಿಗೆ ಸಾಧ್ಯ ಹೇಳು ? ಇಂಥೋರ ಹತ್ತಿರ ಒಳ್ಳೇಮಾತು, ನಯ, ನಾಜೂಕು ಯಾವುದೂ ಉಪಯೋಗಕ್ಕೆ ಬರೋಲ್ಲ. ನೀನು ಅಂದರೆ ನಿಮ್ಮಪ್ಪ ಅಂದರೇ ಅವರು ದಾರಿಗೆ ಬರುವುದು. ಅದು ನಿನ್ನ ಕೈಲಿ ಸಾಧ್ಯವಿಲ್ಲ. ಅದಕ್ಕೇ ಇದನ್ನೆಲ್ಲಾ ನನಗೆ ಬಿಡು, ನಾನು ನೋಡಿಕೊತೀನಿ ಅಂದದ್ದು. ನಿನ್ನಮೇಲೆ ಜೋರು, ಜಬರ್ದಸ್ತು ಮಾಡಲಿಕ್ಕೆ ಬಂದಿದ್ದಳಲ್ಲವೇ ಆ ಲೌಡಿ. ಅದು ಹ್ಯಾಗೆ ತಗೋತಾಳೋ ನೋಡೋಣ ಸುಮ್ಮನಿರು. ಒಳ್ಳೆ ಮಾತಿಗೆ ಬಂದರೆ, ಅವಳ ದುಡ್ಡು ಕೊಟ್ಟು ಫೈಸಲ್ ಮಾಡೋದು. ಇಲ್ದೆ ಹೋದ್ರೆ—ಅವಳ ದಾರಿ ಅವಳಿಗೆ, ನಮ್ಮ ದಾರಿ ನಮಗೆ.’

—ಖಡಾಖಂಡಿತವಾಗಿ ಹೇಳಿದ ರಾಘವೇಂದ್ರರಾಯ.

‘ ಅವರ ದುಡ್ಡು ತಿಂದು ಹಾಗೆ ಹೇಳಿದರೆ ಆಗುತ್ತೇ ರಾಘಣ್ಣ ?

ಅಂಥ ಸಾಲ ಮಾಡಿಕೊಂಡ ತಪ್ಪು ನಮ್ಮದು.'

—ರಾಘವೇಂದ್ರರಾಯ ಹೇಳಿದುದನ್ನು ಕೇಳಿ ಸಣ್ಣ ಧ್ವನಿಯಲ್ಲಿ ಹೇಳಿದಳು ರತ್ನಮ್ಮ.

' ಅದೆಲ್ಲಾ ನಿನಗೆ ಗೊತ್ತಾಗೊಲ್ಲ. ಅದಕ್ಕೇ ನಾನು ನಿನಗೆ ಸುಮ್ಮ ನಿರು ಅಂದದ್ದು. ನಿನ್ನ ಒಳ್ಳೇತನ ಇಲ್ಲಿ ಕೆಲಸಕ್ಕೆ ಬರೋಲ್ಲ.'

' ಹಾಗಂತ ಅವನ ಹತ್ತಿರ ವ್ಯಾಜ್ಯ ಕಟ್ಟಿಕೊಳ್ಳೋದೇ ? '

' ಅದೇ ಆಗಬೇಕೂಂತ ಇದ್ದರೆ ಆಗಲೇಳು.'

' ಆ್ಞ ! '

—ವ್ಯಾಜ್ಯದ ಮಾತು ಕೇಳಿಯೇ ಹೆದರಿ ಹೇಳಿದಳು ರತ್ನಮ್ಮ.

' ವ್ಯಾಜ್ಯದ ಹೆಸರು ಕೇಳಿದರೆ ಅಷ್ಟು ಯಾಕೆ ಹೆದರ್‍ತಿ ರತ್ನಕ್ಕ ? ಏನೂ ಆಗೋಲ್ಲ.'

' ನಮಗೇನಾದರು ಆಗಲಿ ಬಿಡಲಿ, ಅವರ ಹೆಸರು ಬೀದಿಗೆ ಬರೋ ಲ್ಲವೇ ? '

' ಹಾಗಂತ, ನೀನು ಹಾಳಾಗಬೇಕೆ ? '

' ಅದು ನಮ್ಮ ಕರ್ಮ. ನಾವು ಕೇಳಿಕೊಂಡು ಬಂದದ್ದೇ ಅಷ್ಟು.'

—ಎಂದಳು ರತ್ನಮ್ಮ.

ಆ ಮಾತು ಕೇಳುತ್ತಿದ್ದ ಹಾಗೇ ರಾಘವೇಂದ್ರರಾಯನ ಹೊಟ್ಟೆಯಲ್ಲಿ ಬೆಂಕಿ ಕಲೆಸಿದಂತಾಗಿ, ಸಿಟ್ಟು ಕೆರಳಿತು. ಪ್ರಕ್ಷುಬ್ಧನಾಗಿ ಕಿಡಿಕಾರುವ ಧ್ವನಿಯಲ್ಲಿ—

' ಇದು ಯಾರು ಒಪ್ಪೋ ಮಾತೂಂತ ಹೇಳ್ತೀಯ ರತ್ನಕ್ಕ. ಬದು ಕಿದ್ದೋರು ಬೀದಿಗೆ ಬಂದು ನರಳಿದರೂ ಸತ್ತೋರ ಹೆಸರು ಕೆಡಬಾರದಂತೆ. ಈ ಮಾತು ಇನ್ನೊಂದ್ಸಲ ನನಗೆ ಹೇಳಬೇಡ. ನೋಡು ರತ್ನಕ್ಕ ಇವತ್ತು ಕಡೇಸಾರಿಗೆ ಹೇಳಿ ಬಿಡ್ತೀನಿ. ಅವತ್ತೇ ಎಲ್ಲಾ ಮಾರಿಕೊಂಡು, ಕೊಡ ಬೇಕಾದೋರ ಋಣ ತೀರಿಸಿ ಹೊರಟು ಹೋಗು ಎಂದೆ. ನನ್ನ ಮಾತು ನೀನು ಕೇಳಲಿಲ್ಲ. ' ನನ್ನ ಕಷ್ಟಕ್ಕೆ ಹೆದರಿ ನಾರಾಯಣನ ಕಾಲಿಗೆ ಏನೂ ಇಲ್ಲದ ಹಾಗೆ ಮಾಡಲೇ ?' ಎಂದು ಕೇಳಿದೆ. ' ನಿನ್ನ ಮಾತು ನ್ಯಾಯ. ಆದದ್ದಾಗಲಿ, ಇಲ್ಲಿರು ' ಎಂದೆ. ಅವತ್ತು ನೀನು ' ನಿನ್ನದೊಬ್ಬನದೇ ನನ

ನಂಬಿಕೆ ' ಎಂದೆ. ಆ ಮಾತು ನಿಜವಾದರೆ, ನಿನಗೆ ನನ್ನಲ್ಲಿ ನಂಬಿಕೆ ಇರೋದಾದ್ರೆ ಹೇಳು, ನಿನ್ನ ವ್ಯವಹಾರ ಏನಿದ್ರೂ ನಾನು ನೊಡ್ಕೋತೀನಿ. ಹಳ್ಳೀ ಎಲ್ಲಾ ನನಗೆ ಎದುರು ಬಿದ್ದರೂ ಸರಿಯೆ, ನಿನ್ನನ್ನು ನಾನು ಬಿಟ್ಟು ಕೊಡೋಲ್ಲ. ಹಾಗಲ್ಲದೆ, 'ಎಲ್ಲಾ ನನಗೆ ತಿಳಿಯುತ್ತೆ, ನಾನು, ನನ್ನ ಮಗ ಹಾಳಾದರೂ ಚಿಂತೆಯಿಲ್ಲ, ಸತ್ತೋರ ಹೆಸರು ಚೆನ್ನಾಗಿದ್ದರೆ ಸಾಕು ' ಅನ್ನೋದಾದರೆ ಹೇಳಿ ಬಿಡು, ನಮ್ಮಪ್ಪನಾಣೆ, ನಾನು ಇವತ್ತಿನಿಂದ ನಿನ್ನ ವ್ಯವಹಾರಕ್ಕೆ ಕೈ ಹಾಕೊಲ್ಲ. ನೀನುಂಟು, ನಿನ್ನ ಮಗನುಂಟು, ನಿನ್ನ ಆಸ್ತಿ ಉಂಟು, ನಿನ್ನ ಗಂಡನ ಹೆಸರುಂಟು. ನನಗೂ ಅದಕ್ಕೂ ಏನೂ ಸಂಬಂಧ ಇಲ್ಲಾಂತ ಕೈ ತೊಳೆದು ಕೊಂಡು ಬಿಡ್ತೀನಿ. ಹಾಗಲ್ಲ ' ಎಲ್ಲದಕ್ಕೂ ನೀನೇ ಸರಿ. ನಿನ್ನನ್ನೇ ನಂಬಿದೀನಿ ' ಅನ್ನೋದಾದರೆ ನೀನು ಯಾವ ಮಾತಿಗೂ ಬರಬೇಡ. ಏನಿದ್ದರೂ ನಾನು ನೋಡಿಕೋತೀನಿ. ನಾನು ಕೆಟ್ಟರೂ ಸರಿಯೆ, ನೀನು ನಿನ್ನ ಮಗ ಕೆಡುವುದಕ್ಕೆ ಬಿಡುವುದಿಲ್ಲ. ಏನು ಹೇಳು ? ಇವತ್ತು ಯಾವುದಾದರೊಂದು ಮಾತು ಇತ್ಯರ್ಥಮಾಡಿಬಿಡು. ದಿನಾ ದಿನಾ ನೀನು ಕಣ್ಣಲ್ಲಿ ನೀರು ಹಾಕೋದು, ಸಂಕಟ ಪಡೋದು, ನಾನು ಕೈ ಕಟ್ಟಿ ಕೊಂಡು ಕೂತು ನೋಡಲಾರೆ. ಹಾಗೋ ಹೀಗೋ–ಯಾವುದೂ ಒಂದು ತೀರ್ಮಾನ ಆಗಿ ಹೋಗಲಿ '

—ಎಂದ.

' ಇದೇನು ರಾಘಣ್ಣ ಹೀಗೆ ಮಾತಾಡ್ತಿ ?'

—ಎಂದು ಹೆದರಿ ಕೇಳಿದಳು ರತ್ನಮ್ಮ.

' ಹಾಗೇ, ಏನೂ ಅರೀದ ನಿನ್ನ ಕಣ್ಣಲ್ಲಿ ನೀರು ಹಾಕಿಸಿದ ಈ ಚಂಡಾಲರ ಕಣ್ಣಲ್ಲೂ ನೀರು ಹಾಕಿಸದೆ ನಾನು ಬಿಡೋದಿಲ್ಲ. ಅದಕ್ಕೆ ನೀನು ಅಡ್ಡಿ ಬಂದರೆ, ನನಗೆ ಸರಿ ಹೋಗೋದಿಲ್ಲ. ಅದಕ್ಕೇ ಇವತ್ತು ಯಾವುದೂ ಇತ್ಯರ್ಥವಾಗಬೇಕು. ನಿನ್ನ ವ್ಯವಹಾರನೆಲ್ಲಾ ನನಗೆ ಒಪ್ಪಿಸು. ಇಲ್ಲವೇ ನಿನ್ನ ದಾರಿ ನಿನಗೆ, ನನ್ನ ದಾರಿ ನನಗೆ.'

' ಅಂದರೆ ನಾನು ಮಾತಾಡೊದೇ ತಪ್ಪೇ ರಾಘಣ್ಣ ? '

' ಮಾತಾಡೋಕೆ ಬರದಿದ್ದ ಮೇಲೆ ಮಾತಾಡೋದು ತಪ್ಪೆ. ಈಗೇನು ಹೇಳ್ತಿ ಹೇಳು.'

—ತನ್ನ ಮನಸಿನ ಉದ್ರೇಕದಲ್ಲಿ ಕುಳ್ಳಿರಲಾಗದೆ, ಎದ್ದುನಿಂತು ಕೇಳಿದ ರಾಘವೇಂದ್ರರಾಯ. ರತ್ನಮ್ಮ ಆಮಾತಿಗೆ ಕೂಡಲೇ ಉತ್ತರ ಕೊಡದೆ, ಸುಮ್ಮಗೆ ಕುಳಿತು, ರಾಘವೇಂದ್ರರಾಯನ ಮುಖವನ್ನು ನೋಡಿ, ಬಳಿಕ ಹೇಳಿದಳು—

‘ ಏನಾದ್ರೂ ಮಾಡು ರಾಘಣ್ಣ, ನಿನ್ನ ನಂಬಿದೇನೆ.’

—ಎಂದಳು.

‘ ಹಾಗಾದ್ರೆ ಇವತ್ತಿನಿಂದ ಈ ಚಿಂತೆ ಎಲ್ಲಾ ಬಿಟ್ಟುಬಿಡು.’

—ಎಂದ ರಾಘವೇಂದ್ರರಾಯ, ಎಲ್ಲವನ್ನೂ ತಾನು ಒಪ್ಪಿಸಿ ಕೊಂಡಂತೆ.

## ೮

ವಿಠೋಬನ ಪಕ್ಷ ಕಟ್ಟಿ ಈರಮ್ಮ, ಅವನಿಗಾಗಿ ರತ್ನಮ್ಮನನ್ನು ಛಲಿ ಸಲೆತ್ನಿಸಿದುದನ್ನು ಕಂಡು ರಾಘವೇಂದ್ರರಾಯನಿಗೆ, ಅವರು ತೀರಾ ಮೇಲೆ ಬಿದ್ದರೆ ಒಂದು ಕೈ ತೋರಿಸಿ, ಅವರಿಗೆ ಚೆನ್ನಾಗಿ ಬುದ್ಧಿ ಕಲಿಸಬೇಕೆನ್ನು ವಷ್ಟು ಹಟ ಹುಟ್ಟಿತ್ತು. ಎಂತಲೇ ರತ್ನಮ್ಮ ಎಲ್ಲ ಹೊಣೆಗಾರಿಕೆಯನ್ನು ತನಗೆ ಒಪ್ಪಿಸಿದ ಬಳಿಕ, ಈರಮ್ಮ ಮತ್ತೆ ರತ್ನಮ್ಮನ ಮನೆಯ ಬಾಗಿಲಿಗೆ ಸಾಲಕೇಳಲು ಬರಲು ಅವಕಾಶ ಕೊಡದೆ, ತಾನೇ ನೇರವಾಗಿ ಈರಮ್ಮನನ್ನು ನೋಡಲು ಹೊರಟ.

ತನ್ನ ಮನೆಯ ಬಾಗಿಲಿಗೆ ಬಂದ ರಾಘವೇಂದ್ರರಾಯನನ್ನೂ ಕಂಡು ಈರಮ್ಮನಿಗೆ ಕೊಂಚ ಗಾಬರಿಯಾಯಿತಾದರೂ, ಅದನ್ನು ತೋರ್ಪಡಿಸಿ ಕೊಳ್ಳದೆ—

‘ ಬಾಣ್ಣಾ, ಏನಿಷ್ಟು ದೂರ ಬಂದೆ ? ’

—ಎಂದು ನಯವಾಗೇ ಕೇಳಿದಳು, ಹಿಂದಿನ ದಿನದಹಾಗೆ ಒರಟಾಗಿ ಮಾತನಾಡದೆ.

‘ ನೀನೇ ಬರೋಹಾಗೆ ಮಾಡಿಕೊಂಡ ಮೇಲೆ ಬರದಿದ್ದರಾಗುತ್ತೆಯೆ? ಕೆಲಸ ಬಿದ್ದರೆ ನಾನೂ ಬರೋದೇ, ನಮ್ಮಪ್ಪನೂ ಬರೋದೇ. ಎಷ್ಟಾದರೂ ಈಗ ನೀನು ದೊಡ್ಡ ಮನುಷ್ಯಳು. ನಮ್ಮಂಥೋರದೆಲ್ಲಾ ಯಾತರ ಲೆಖ್ಖ ಹೇಳು ?,

‘ ಇದೇನಣ್ಣಾ ಹಿಂಗ್ಯಾತಾಡ್ತಿ ? ’

—ಎಂದಳು ಈರಮ್ಮ ರಾಘವೇಂದ್ರರಾಯನ ಮಾತು ತನಗೆ ಅರ್ಥ ನಾಗದವಳಂತೆ.

' ಏನೂ ತಿಳೀದೋಳ ಹಾಗೆ ಕೇಳ್ತೀಯಲ್ಲ, ಈರಮ್ಮ. ನಾನು ಬಂದದ್ದು ಏಕೇಂತ ಗೊತ್ತಿಲ್ಲವೇ ನಿನಗೆ? '

—ನಘುವಾಗಿ ಹಂಗಿಸುತ್ತಾ ಕೇಳಿದ ರಾಘವೇಂದ್ರರಾಯ.

' ನೀನೇ ಹೇಳ್ದೆ ಹೆಂಗೆ ತಿಳೀಬೇಕು ಹೇಳು. ಮುಖನೋಡಿ ಪ್ರಶ್ನೆ ಹೇಳೋ ವಿದ್ಯಾ ನಂಗೆ ಗೊತ್ತಿಲ್ಲ.'

' ಅದೊಂದೇ ನಿನಗೆ ಗೊತ್ತಿಲ್ದೆ ಇರೋದು ಅದೆಲ್ಲಾ ಹೋಗ್ಲಿ–ರತ್ನಮ್ಮನ ಸಾಲದ್ದೇನು ಮಾಡ್ತಿ ಹೇಳು? '

—ಎಂದು ನೇರವಾಗಿ ವಿಷಯಕ್ಕೆ ಬಂದು ಕೇಳಿದ.

' ಅಂದ್ರೆ........'

' ಏನೋ ಇನ್ನೊಂದುವಾರದಲ್ಲಿ ಸಾಲ ಚುಕ್ತಾ ಮಾಡಬೇಕು ಅಂತ ತಗಾದೆ ನೋಟೀಸು ಕೊಟ್ಟು ಬಂದೆಯಂತಲ್ಲಾ, ಆ ವಿಷಯ.'

' ಹೂ. ಹೇಳಿಬಂದೆ. ಹಣದ್ದೊಸಿ ಭಾರಿ ತೊಂದ್ರೆ ಆಗಿತ್ತು. ಅದ್ನೆ ಹೇಳಿ ಬಂದೆ ಅದಕ್ಕೇನೀಗ? '

—ಕೊಂಚ ಬಿಗಿಯಾಗುತ್ತಾ ಕೇಳಿದಳು ಈರಮ್ಮ.

' ಆ ಸಾಲ ತೀರುವಳಿ ಆಗಬೇಕೂಂತ ನಿನಗೆ ಇಷ್ಟ ಇದೆಯೋ ಇಲ್ಲವೋ? '

' ಅಂದ್ರೆ....ನೀನು ಹೇಳೋ ಮಾತೇ ಅರ್ಥವಾಗ್ತಾ ಇಲ್ಲ ನಂಗೆ....'

' ಅಂದರೆ–ಇಷ್ಟೆ. ವಿಶ್ವಾಸದಲ್ಲಿ ಆ ಸಾಲ ತೀರುವಳಿ ಮಾಡಿಕೋಬೇಕೂಂತ ನಿನ್ನ ಅಪೇಕ್ಷೆಯೊ, ಅಥವಾ ವೃಥಾ ಆಕೆಗೆ ಹಿಂಸೆ ಕೊಡಬೇಕೂಂತ ನಿನ್ನ ಇಷ್ಟವೋ?'

' ಹಂಗಂದ್ರೇನು ? ಯಾರಿಗೆ ಹಿಂಸೆ ಮಾಡಿ ನನಗಾಗಬೇಕಾದ್ದೇನು? ನನಗೆ ಬೇಕಾಗಿರೋದು ನಾನು ಕೊಟ್ಟ ದುಡ್ಡು ಹಿಂದಕ್ಕೆ ಬರೋದು. ಅಷ್ಟಾದ್ರೆ ಸಾಕು.'

' ಅಷ್ಟಾದರೆ ಸಾಕು ತಾನೇ? '

' ಹೂ.

‘ ಹಾಗಾದ್ರೆ ನೀನು ಸೀತಾರಾಮಯ್ಯನಿಗೆ ಕೊಟ್ಟ ದುಡ್ಡು ಕೊಡಿಸಿಬಿಡ್ತೀನಿ—ವ್ಯವಹಾರ ಬಗೆಹರಿಸಿಕೊಂಡು ಬಿಡು.’

‘ ಅಂದ್ರೆ........’

‘ ನೀನು ಸೀತಾರಾಮಯ್ಯನಿಗೆ ಕೊಟ್ಟಿದ್ದು ನೂರು ರೂಪಾಯಿ ತಾನೇ. ಅಷ್ಟು ನಾನು ಕೊಡಸ್ತೀನಿ.’

‘ಅಂದ್ರೆ,ಇನ್ನೂರೈವತ್ತು ರೂಪಾಯಿಗೆ ನೂರುರೂಪಾಯಿ ತಗೋಂತಲಾ ನೀನು ಹೇಳೋದು. ಅದೆಂಗಾಗ್ತದೆ. ನಾನು ಕೊಟ್ಟ ದುಡ್ಡು, ಅದಕ್ಕೆ ಈ ಆರುವರ್ಷದ ಬಡ್ಡಿ ಪೂರಾ ಕೊಟ್ಟರೆ ಸರಿ.’

‘ ಅಂತೂ ನಿನಗೆ ಈಗ ಪೂರಾ ಇನ್ನೂರೈವತ್ತು ರೂಪಾಯೇ ಬೇಕು ಅನ್ನು.’

‘ ಹೂ.’

‘ ಹಾಗಾದರೆ ನನ್ನ ನಿನ್ನ ವ್ಯವಹಾರ ಕಲೆಯೋಲ್ಲ ಅಂದಹಾಗೇ ಆಯ್ತು. ನೋಡು ಈರವ್ವ, ಬೇರೆಯೋರ ಹಾಗೆ ನನಗೆ ಹಿಂದೊಂದು ಮುಂದೊಂದು ಮಾತಾಡಿ ಗೊತ್ತಿಲ್ಲ. ರತ್ನಮ್ಮನಿಗೆ ನಿನ್ನ ಸಾಲ ತೀರಿಸೋ ಶಕ್ತಿ ಇದ್ದಿದ್ದರೆ, ಅದುಬಿಡು, ಇದುಬಿಡು ಅನ್ನೋ ಮಾತು ನಾನು ಆಡ್ತಿರಲಿಲ್ಲ. ಇದ್ದಕ್ಕಿದ್ದ ಹಾಗೇ ಸೀತಾರಾಮು ತೀರಿಹೋಗಿ, ಆಕೆ ಎಂಥ ಕಷ್ಟಕ್ಕೆ ಸಿಕ್ಕಿದ್ದಾಳೆ ಅನ್ನೋದು ನಿನಗೆ ಗೊತ್ತಿದೆ........’

‘ ನಿಜ, ಗೊತ್ತಿದೆ. ಹಂಗಂತ ನನಗೆ ಬರಬೇಕಾದ ದುಡ್ಡು ಬಿಟ್ಟು ಬಿಡಲೇ ? ಆಕೆಗೆ ಕಷ್ಟ ಕೊಟ್ಟ ಭಗವಂತ, ನನಗೆ ಬರಬೇಕಾದ ದುಡ್ಡು ಕಳಕೊಳ್ಳೋ ಅಷ್ಟು ಶಕ್ತಿ ಕೊಟ್ಟಿಲ್ಲವಲ್ಲ.’

‘ ನೀನು ದುಡ್ಡು ಕಳೆದುಕೊಳ್ಳಬೇಕು, ಕೆಡಬೇಕು ಅಂತ ಯಾರಿಗೂ ಮನಸ್ಸಿಲ್ಲ. ನಿನ್ನ ದುಡ್ಡು ಎತ್ತಿಹಾಕಬೇಕು ಅಂತ ದುರ್ಬುದ್ಧಿಯೂ ನಮಗಿಲ್ಲ. ನೀನೂ ಕಷ್ಟದಲ್ಲಿದೀನಿ ಅಂತೀಯ. ಆದ್ದರಿಂದ ನಿನ್ನ ಸಾಲ ಇಟ್ಟುಕೊಳ್ಳೋದೂ ತರವಲ್ಲ. ಆದ್ದರಿಂದ ನಿನಗೂ ಸಮಯಕ್ಕೆ ಅನುಕೂಲವಾಗಬೇಕು, ಆಕೆಯ ಋಣವೂ ಬಗೆಹರಿಯಬೇಕು ಅನ್ನೋ ದೃಷ್ಟಿಯಿಂದ ನಾನು ಹೇಳೋದು. ಅದಕ್ಕೆ ನೀನು ಒಪ್ಪಿಕೊಂಡರೆ ಸರಿ. ನನ್ನ ಮಾತು ಕೇಳು—ನೀನು ಕೊಟ್ಟ ನೂರು ರೂಪಾಯಿ ತೆಗೆದುಕೊಂಡು ಸಾಲ

ತೀರಿಸಿಕೋ.'

'ಅದ್ಹೆಂಗಾಗ್ತದೆ? ನಾನು ಸಾಲ ಕೊಟ್ಟದ್ದು ನಾಲ್ಕು ಕಾಸು ಬಡ್ಡಿ ಬರಲಿ ಅಂತ ತಾನೇ. ಹಂಗಂಲ್ದೆ ನನ್ನ ಹತ್ತಿರ ದುಡ್ಡು ಹೆಚ್ಚಾಗಿದೆ ಅಂತ ಕೊಟ್ಟೆನಾ? ಅದೆಲ್ಲಾ ಆಗೋ ಮಾತಲ್ಲ'

—ಕರಾರುವಾಕಾಗಿ ಹೇಳಿದಳು ಈರಮ್ಮ.

'ಅಂಪ್ರೆ–ನೀನು ಬಡ್ಡಿ ಬಿಡೊಲ್ಲಾ ಅನ್ನು'

—ತಾನೂ ಕೊಂಚ ಬಿಗಿಯಾಗುತ್ತಾ ಕೇಳಿದ ರಾಘವೇಂದ್ರರಾಯ.

'ನಂಗೆ ಬರಬೇಕಾದ್ದು ಬಂದರೆ ಸರಿ.'

'ನೀನು ಹೀಗೆ ಹಟಹಿಡಿದರೆ, ಹಣ ವಸೂಲಾಗೋದು ಕಷ್ಟ ಇದೆ ಈರಮ್ಮ....'

—ಎಚ್ಚರಿಕೆ ಕೊಡುವ ಧ್ವನಿಯಲ್ಲಿ ಹೇಳಿದ.

'ಈ ಮಾತು ಹೇಳೋಕಾ ನೀನು ಬಂದದ್ದು.'

—ಈರಮ್ಮ ಕೊಂಚ ಘಾಟಾಗಿ ಕೇಳಿದಳು.

'ಹೂ. ಇದೇ ಮಾತೇ ಹೇಳೋಕೆ ಬಂದದ್ದು.'

'ಅಷ್ಟೇ ಆದರೆ ಹೇಳಿದ್ದಾಯ್ತಲ್ಲ. ರತ್ನಮ್ಮ ಇದೇನಾ ನಿನ್ನ ಕೈಲಿ ಹೇಳಿ ಕಳಿಸ್ತೀನಿ ಅಂದದ್ದು?'

—ಹಂಗಿಸುವ ಧ್ವನಿಯಲ್ಲಿ ಕೇಳಿದಳು ಈರಮ್ಮ.

'ನಿನಗೆ ಒಳ್ಳೇದಾಗೋ ಮಾತೇ ನಾನು ಹೇಳ್ತಾ ಇರೋದು ಈರಮ್ಮ....'

'ಹೂ....ಹೂ....ಒಳ್ಳೇದಾಗೋ ಮಾತೇ! ಗಂಡ ಸತ್ತ ಮುಂಡೇಂತ ಹೆದರಿಸಿ ಗಂಟಿತ್ತಿಹಾಕೋ ಮಾತು ಒಳ್ಳೇದೇ ಅಲ್ವಾ? ಅದೆಲ್ಲಾ ಆಗೋ ಕಿಲ್ಲ.'

'ಸರಿ ಹಾಗಾದರೆ—ನೀನು ಹಣ ತಗೋವೆಯಂತೆ.'

'ತಗೋತೀನಿ. ಸಾಲ ಕೊಡಬಾರದಾಗಿತ್ತು. ಕೊಟ್ಟಮೇಲೇ ಕಷ್ಟಾನೋ ನಿಷ್ಟೂರಾನೋ ಹೆಂಗೋ ನಮ್ಮ ಗಂಟು ವಸೂಲ್ಮಾಡ್ಕೋತೀನಿ.'

'ಅಷ್ಟೇ ಅನ್ನು.'

'ಹೂ. ಅಷ್ಟೆ.'

'ಆಗಲಿ ಹೇಗೆ ತಗೊತೀಯೋ ನಾನೂ ನೋಡ್ತೀನಿ'

—ತಾಳ್ಮೆ ಸೋತು ಸಿಡಿದು ಹೇಳಿದ ರಾಘವೇಂದ್ರರಾಯ.

'ಹೆಂಗೆ ತಗೋತೀನೋ ನೋಡ್ತೀಯಂತೇಳು. ನಾಳೆ ಪಂಚಾಯ್ತಿ ಇಡ್ಸಿ ಕೇಳ್ತೀನಿ. ಅದೂ ಇಲ್ಲಾಂದ್ರೆ ಕೋರ್ಟು ಕಛೇರಿ ಇಲ್ವಾ? ತಿಂದು ಮೆರೆಯೋಕೆ ಗಂಡನ ಆಸ್ತಿ ಬೇಕು. ಸಾಲ ತೀರಿಸೋಕೆ ಇಲ್ಲಾಂದ್ರೆ ಎಲ್ಲೀ ಮಾತೊ ನಾನೂ ಕೇಳ್ತೀನಿ'

—ತಾನೂ ಎಲ್ಲಕ್ಕೂ ಸಿದ್ಧವಾಗಿರುವಂತೆಯೇ ಹೇಳಿದಳು ಈರಮ್ಮ.

'ಅಂತೂ ಅಲ್ಲೀಗೂ ಸಿದ್ಧವಾಗಿದೀಯಾ ಅನ್ನು?'

'ಮತ್ತೆ. ಇಂಥೋರ ಸವಾಸ ಮಾಡಿದ್ಮೇಲೆ ಎಲ್ಲಾದಕ್ಕೂ ಸಿದ್ಧ ವಾಗೋದೇ.'

ಆ ಮಾತು ಕೇಳಿ ರಾಘವೇಂದ್ರರಾಯ, ಈರಮ್ಮನನ್ನು ದುರುಗುಟ್ಟಿ ಕೊಂಡು ನೋಡಿ—

'ಹೂ. ಬಾಳ ಮಾತು ಕಲಿತುಬಿಟ್ಟೆ. ರೆಕ್ಕೆ ಪುಕ್ಕ ಬಲವಾಯಿತೂಂತ ಕಾಣುತ್ತೆ'

—ಎಂದ.

'ಬಲೀ ಬ್ಯಾಡ್ವಾ ಮತ್ತೆ ಕಂಡೋರ ಗಂಟು ತಿಂದು ಬೆಳದಿರೋ ಮೈ'

—ಎಂದು ಹಂಗಿಸಿದಳು ಈರಮ್ಮ, ಅದೇ ಬಗೆಯ ಮಾತು ಮುಂದು ವರಿದರೆ, ಮತ್ತಷ್ಟು ಅಂಥದೇ ಮಾತಾಡಲು ಸಿದ್ಧವಾಗಿ. ಅದನ್ನರಿತು ರಾಘವೇಂದ್ರರಾಯನ ಮೈ ಉರಿಯಿತು. ಆದರೆ ಹೆಂಗಸಿನ ಮುಂದೆ ಹೆಚ್ಚು ಮಾತನಾಡುವುದು ಮರ್ಯಾದೆಯಲ್ಲವೆಂದರಿತುಕೊಂಡು, ತನ್ನ ಸಿಟ್ಟನ್ನು ಹತೋಟಿಯಲ್ಲಿಟ್ಟುಕೊಂಡು—

'ನೀನು ಹೀಗೆ ತಿರುಗಬಹುದೂಂತ ನಾನು ತಿಳಿದುಕೊಂಡಿರಲಿಲ್ಲ ಈರಮ್ಮ, ಆಗಲಿ—ನಿನಗೆ ಯಾರದೋ ಉಪದೇಶ ಸರಿಯಾಗಿ ಆಗಿದೆ— ನಿನಗೆ ಹೇಗೆ ಬೇಕೋ ಹಾಗೆ ಮಾಡು. ನಿನ್ನ ಬುದ್ಧಿ ಕಲಿಸೊ ಮದ್ದು ನನ್ನ ಹತ್ತಿರಾನೂ ಇದೆ. ನೀನು ಪಂಚಾಯ್ತೀನಾರ ಮಾಡಿಸು, ದಶಾಯಿತಿನಾದರೂ ಮಾಡಿಸು. ಆದರೆ ಇವತ್ತಿನಿಂದ ರತ್ನಮ್ಮನ ಮನೆ ಹತ್ತಿರ ಸುಳೀಬ್ಯಾಡ.'

—ಎಂದ.

'ನಾನು ಬರ್ತೀನಿ, ನಮ್ಮ ಮಾದಿಗರೋನ್ನ ಮನೆ ಮುಂದೆ ಹಾಕ್ತೀನಿ. ಅದೆಲ್ಲಾ ಹೇಳೋಕೆ ನೀನು ಯಾರು? ನನ್ನ ಗಂಟೂ ವಸೂಲ್ಮಾಡಿ ಕೊಳ್ಳೋಕೇನೇನು ಬೇಕೋ ಆದೆಲ್ಲಾ ಮಾಡ್ತೀನಿ. ನನ್ನ ಕೇಳೋಕೆ ನೀನು ಯಾರು?'

'ಮಾತು ಬಹಳ ಆಯ್ತು ಈರಮ್ಮ........'

—ಉಕ್ಕುತಿದ್ದ ಸಿಟ್ಟಿನಲ್ಲಿ ತಾಳ್ಮೆ ತಪ್ಪುತ್ತಾ ಕೇಳಿದ ರಾಘವೇಂದ್ರ ರಾಯ.

'ಮಾತಾಡೋಕೆ ಬಾಂತ ನಾನು ಕರಸಿದ್ನಾ ನಿನ್ನ? ನಿನ್ನ ಬಾಂದೋರು ಯಾರು? ನಿಂಗೂ ಈ ಮಾತಿಗೂ ಏನು ಸಂಬಂಧ? ಮಧ್ಯ ಸ್ಥಿಕೆ ಮಾಡೋಕೆ ಬಾಂತ ನಾನು ಕರಸಿದ್ನಾ? ಯಾವೋಳು ಕರಸಿದ್ಲೋ ಅವಳಿಗ್ಹೇಳು ಈ ಮಾತೆಲ್ಲಾ. ಮಾತು ಭಾಳ ಆಯ್ತಂತೆ ಭಾಳ–ಕಂಡೋರ ಗಂಟು ಮುಳುಗ್ಸಿ ದೊಡ್ಡ ಮನುಷ್ಯನಾಗೋಕೆ ಬಂದೇನೋ ಅಲ್ವಾ? ಆ ಆಟಾ ಎಲ್ಲಾ ನನ್ಹತ್ರ ನಡಿಯಾಕಿಲ್ಲ.'

—ಒರಟಾಗಿ ಹೇಳಿದಳು ಈರಮ್ಮ.'

'ನಿನ್ನ ಹತ್ತಿರ ಮಾತಾಡಿ ನಾನು ದೊಡ್ಡಮನುಷ್ಯನಾಗಬೇಕಾಗಿಲ್ಲ–ಬಂದದ್ದೇ ನನ್ನ ತಪ್ಪಾಯಿತು.'

'ಹಂಗಾರೆ ಮತ್ಯಾಕೆ ಬಂದೆ? ನಾನು ಹಾದರಗಿತ್ತಿ, ಅಂಥೋಳು, ಇಂಥೋಳು ಅಂತೆಲ್ಲಾ ಅಂದ್ಯಂತಲ್ಲಾ–ಅಂಥೋಳ್ಹತ್ರ ಯಾಕೆ ಬಂದದ್ದು? ನನ್ನ ದುಡ್ಡು ತಿನ್ನೋಕೆ ಕಮ್ಮಗಿದೆ ಅಂತಾಲೇನೊ. ನಿನ್ನ ಬುದ್ಧಿ ಎಲಾ ನಂಗೂ ಗೊತ್ತೈತೆ'

—ಸಿಟ್ಟಿನಲ್ಲಿ ಪ್ರಜ್ಞೆ ತಪ್ಪುತ್ತಾ ಏರುಧ್ವನಿಯಲ್ಲಿ ಹೇಳಿದಳು ಈರಮ್ಮ.

ಅವಳಿಗೆ ಅದೇಧ್ವನಿಯಲ್ಲಿ ಉತ್ತರಕೊಡಬೇಕೆಂದು ಯೋಚಿಸಿದ ರಾಘವೇಂದ್ರರಾಯ. ಆದರೆ ಇವರ ಏರುಧ್ವನಿಯ ಮಾತುಗಳನ್ನು ಕೇಳಿ, ಅಂಗಡಿಯ ಮುಂದೆ, ಆಗಲೇ ನಾಲ್ಕಾರು ಜನ ಕಲೆತದ್ದನ್ನು ಕಂಡು, ಅಲ್ಲಿ ಮತ್ತೆ ಮಾತು ಬೆಳಸಿದರೆ, ತನ್ನ ಮರ್ಯಾದೆಗೇ ಊನ ಬರಬಹುದೆಂದು ಹೆದರಿ, ರಾಘವೇಂದ್ರರಾಯ ಮಾತನಾಡದೆ, ಅಲ್ಲಿಂದ ಎದ್ದು ಹೊರಟ.

ತನ್ನ ಮಾತಿಗೆ ಎದುರು ಉತ್ತರ ಕೊಡದೆ ಹೊರಟ ರಾಘವೇಂದ್ರ ರಾಯನನ್ನು ನೋಡಿ ಈರಮ್ಮ—

‘ ಬಾಳ ದೊಡ್ಡ ಗಂಡಸು, ಹೆದರಿಸೋಕೆ ಬಂದಿದ್ದ ಬೆಳಿಗ್ಗೆ ಎದ್ದು. ‘ ಥತ್ ’

—ಎಂದಳು ತಾತ್ಸಾರ ತುಂಬಿದ ಧ್ವನಿಯಲ್ಲಿ ಅವನ ಕಿವಿಗೆ ಬೀಳುವಷ್ಟು ಗಟ್ಟಿಯಾಗಿ ಹೇಳಿ.

ಆ ಮಾತುಕೇಳಿ, ಹೋಗುತ್ತಿದ್ದ ರಾಘವೇಂದ್ರರಾಯ ತಟಕ್ಕನೆ ತಿರುಗಿ, ಈರಮ್ಮನ ಮುಖದತ್ತ ದುರುಗುಟ್ಟಿ ನೋಡಿದ.

ಆದರೆ ಈರಮ್ಮ ಆ ನೋಟಕ್ಕೆ ಬೆದರದೆ ತಾನು ಅದಕ್ಕೆ ಬೆದರವುದಿಲ್ಲ ಎಂದು ಸೂಚಿಸುವಂತೆ, ಬಾಯಲ್ಲಿ ತುಂಬಿಕೊಂಡಿದ್ದ ಎಲೆಯಡಿಕೆಯ ರಸವನ್ನು ‘ ಪಿಚಕ್ ’ ಎಂದು ಉಗುಳಿ ಎಂಜಲನ್ನು ಅಷ್ಟು ದೂರಕ್ಕೆ ಹಾರಿಸಿ ನಕ್ಕಳು.

## ೬

ಈರಮ್ಮನ ಅಂಗಡಿಯಲ್ಲಿ, ಈರಮ್ಮನಿಗೂ ರಾಘವೇಂದ್ರರಾಯನಿಗೂ ನಡೆದ ವಾಗ್ಯುದ್ಧದ ಸಮಾಚಾರ, ಸೋಮನ ಹಳ್ಳಿಯಲ್ಲಿ ಹರಡಲು ಹೆಚ್ಚು ಹೊತ್ತು ಬೇಕಾಗಲಿಲ್ಲ. ಆ ಮಾತುಕಥೆಗಳನ್ನು ಅರಬರಿಯಾಗಿ ಕೇಳಿದ ಜನ, ಅದನ್ನು ತಮತಮಗೆ ತೋಚಿದ ರೀತಿಯಲ್ಲಿ ಅರ್ಥ ಮಾಡಿಕೊಂಡು, ತಮಗೆ ಬೇಕಾದ ಪಕ್ಷದ ಪರವಾಗಿ ಅರ್ಥ ಕಲ್ಪಿಸಿಕೊಂಡು, ಬಗೆ ಬಗೆಯಾಗಿ ಹಳ್ಳಿಯಲ್ಲೆಲ್ಲಾ ಸುದ್ದಿಯನ್ನು ಹರಡಿದರು. ಹೀಗೆ ನಾಲಿಗೆಯಿಂದ ನಾಲಿಗೆ, ಕಿವಿಯಿಂದ ಕಿವಿಯನ್ನು ದಾಟುತ್ತಾ, ಬಿರುಸಾದ ಮಾತುಕಥೆಯ ಸುದ್ದಿ, ಅವರಿಬ್ಬರೂ ಹಣಾಹಣಿ ಜಗಳವಾಯಿತು. ರಾಘವೇಂದ್ರರಾಯ ಈರಮ್ಮನನ್ನು ಹೊಡೆಯುವುದಕ್ಕೆ ತನ್ನ ಕಡೆಯವನನ್ನು ಕಟ್ಟಿಕೊಂಡು ಬಂದಿದ್ದ, ಈರಮ್ಮನ ಕಡೆಯವರಿಗೂ ಅವನ ಕಡೆಯವರಿಗೂ ಜಗಳವಾಗಿ ನಾಲ್ಕಾರು ಜನರಿಗೆ ಏಟು ಬಿತ್ತಂತೆ ಎನ್ನುವ ರೂಪಾಂತರ, ಅರ್ಥಾಂತರವನ್ನು ತಾಳಿ, ಬಲವಾಗಿ ಗಾಳಿಬೀಸಿದಾಗ ಹತ್ತುಕಡೆಗೆ ಹಬ್ಬುವ ಹೊಗೆಯಂತೆ ಹಬ್ಬಿತು. ಸಾಮಾನ್ಯವಾಗಿ ಯಾವ ವಿಶೇಷ ಘಟನೆಯೂ ಕಲಕದೆ ನಿಂತ ನೀರಿನಂತಿದ್ದ ಹಳ್ಳಿಯ ಬಾಳಿಗೆ ಆ ಘಟನೆಯೇ ಮಹಾ ಕೋಲಾಹಲಕರವಾದ ಘಟನೆಯಂತಾಗಿ, ಎಲ್ಲರ ಬಾಯಲ್ಲೂ ಅದೇ ಮಾತಾಯಿತು. ಕೆಲವರಿಗೆ ಇದು ಕುಚೋದ್ಯವಾಯಿತು; ಮತ್ತೆ ಕೆಲವರಿಗೆ ವಿನೋದವಾಯಿತು. ಕೆಲವರಿಗೆ ಉತ್ಸಾಹವಾಗಿ, ತಾವು ಆ ಸಂದರ್ಭದಲ್ಲಿ ನೋಟಕರಾಗಿರಲಿಲ್ಲವಲ್ಲ ಎಂದು ವ್ಯಸನವಾಯಿತು ; ಕೆಲವರಿಗೆ ಯಾವ ದಿವಸವೂ ಇಲ್ಲದ ಹಳ್ಳಿಗೆ ಇದೆಲ್ಲಿಯ ಗ್ರಹಚಾರ

ವಕ್ರಿಸಿತು ಎಂದು ಎದೆಗುದಿಯಾಯಿತು ; ಕೆಲವರು ಶಾನುಭೋಗನ ಪುಂಡ ತನವನ್ನು ಕಂಡು ಕಿಡಿಗಾರಿದರೆ, ಮತ್ತೆ ಕೆಲವರು, ಈರಮ್ಮನ ಸಾಹಸ ವನ್ನು ಹಳಿದರು; ತಮ್ಮ ತಮ್ಮಲ್ಲೇ ಗುಂಪುಗಳಾಗಿ ಪಕ್ಷವಹಿಸಿ ವಾದಿಸಿದರು.

ಹಳ್ಳಿಯಲ್ಲಿ ಇಷ್ಟು ವಿಶಾಲವಾಗಿ ಹಬ್ಬಿದ ಸುದ್ದಿ, ರಾಘವೇಂದ್ರ ರಾಯನ ಗೆಳೆಯರ ಗುಂಪಿಗೂ ಮುಟ್ಟುವುದು ತಡವಾಗಲಿಲ್ಲ. ಈ ಸುದ್ದಿ ಯನ್ನು ಯಾರ ಬಾಯಿಂದಲೋ ಕೇಳಿದ ಚಿನ್ನೋಬಯ್ಯ, ಅದರ ವಿವರಗೆ ಳನ್ನೂ ಕೂಲಂಕುಷವಾಗಿ ಅರಿತುಕೊಳ್ಳಲು ಆ ದಿನ ಇಸ್ಪೇಟಾಟಕ್ಕೆ ಬರದಿದ್ದ ವಿಠೋಬನನ್ನು ಹುಡುಕಿಕೊಂಡು, ತಾನೇ ಅವನ ಮನೆಗೆ ಹೊರಟ.

ಈರಮ್ಮನ ಅಂಗಡಿಯಲ್ಲಿ ಮಾತುಕಥೆ ನಡೆದಾಗ ವಿ ಠೋ ಬ ನು ಅಲ್ಲಿರಲಿಲ್ಲ. ಎಲ್ಲೋ ಹೋಗಿದ್ದವನು ಬೇರೆಯವರಿಂದ ಆ ಸುದ್ದಿಯನ್ನು ತಿಳಿದು ಏನಾಯಿತೋ ಎಂದು ತಿಳಿಯಲು ಈರಮ್ಮನ ಮನೆಗೆ ಆತುರವಾಗಿ ಓಡಿ 'ಏನಾಯಿತು?' ಎಂದು ಕೇಳಿ 'ಎಲ್ಲಾ ಆದ್ಮೇಲೆ, ಈಗ ಬಂದ್ಯೇನೋ ಗಂಡಸು, ಏನಾಯ್ತೂಂತ ಕೇಳೋಕೆ? ನಿನ್ನಂಥೋನ್ನ ಕಟ್ಕೊಂಡರೆ, ಆಗೋ ಗತೀನೇ ಇಷ್ಟು. ನಿನಗೆ ತಾಖತ್ತು ಇದ್ದಿದ್ರೆ ಬ್ಯಾರೇರು ಮನೆಯ ಮುಂದೆ ಬಂದು ಮಾತಾಡೋದೂಂದ್ರೇನು? ಕೋಟೆ ಬಿದ್ದಮೇಲೆ ಕತ್ತಿ ಮಸೆದರು ಅನ್ನೋ ಹಾಗೆ ಈಗ ಬಂದು ಕೇಳ್ತಾನೆ ಏನಾಯ್ತೂಂತ. ನನ್ನೇನು ಕೇಳ್ತಿ, ಅವನ್ನೇ ಕೇಳ್ಹೋಗು' ಎಂದು, ಕುಪಿತಳಾದ ಈರಮ್ಮನ ಕೈಯಲ್ಲಿ ಹಂಗಿಸಿಕೊಂಡು ಬಂದು, ಸಿಟ್ಟಿನಲ್ಲಿ ಬುಸುಗರೆಯುತ್ತಾ, ಸಿಟ್ಟಿನ ಉಸಿರಿನಂತೆಯೇ ಬೀಡಿಯ ಹೊಗೆ ಕಾರುತ್ತಾ, 'ಮುಂದೇನು–ಮಾಡು ವುದು?' ಎಂದು ಚಿಂತಿಸುತ್ತಾ ಮನೆಯ ಮುಂದಿನ ಜಗಲಿಯ ಮೇಲೆ ಕುಳಿತುಕೊಂಡಿದ್ದ ವಿಠೋಬ.

ಹೃದಯದೊಳಗಿನ ಉದ್ವೇಗದಿಂದ, ಕಮ್ಮಾರನ ತಿದಿಯಂತೆ ಆಡು ತ್ತಿದ್ದ ಮೂಗಿನ ಹೊಳ್ಳೆಗಳನ್ನು ಅರಳಿಸುತ್ತಾ, ಉಸಿರುಹೊಯ್ಯುತ್ತಾ, ಬಿಗಿದುಕೊಂಡು ಕುಳಿತಿದ್ದ ವಿಠೋಬನನ್ನು ನೋಡಿ, ಚಿನ್ನೋಬಯ್ಯ, ಅವನ ಪಕ್ಕದಲ್ಲೇ ಕುಳಿತುಕೊಂಡು, ತಾನೂ ಬೀಡಿಯನ್ನು ಹೊತ್ತಿಸಿ—

'ಏನು ವಿಠೋಬಾ ಸಮಾಚಾರ? ನಿನ್ನ ರಾಣೀಗೂ ರಾಘಣ್ಣಂಗೂ ಏನೋ ಭಾರಿ ಮಾತುಕಥೆ ಆಯ್ತಂತೆ. ಊರೆಲ್ಲಾ ಅದೇ ಗೌಜಾಗಿ

‘ ನೀನೂ ಅವನಿಗೇ ತಾನೇ ಬೆಂಬಲ. ಏನಾದ್ರೂ ನೀವೆಲ್ಲಾ ಒಂದೇ, ಆ ಸೊಕ್ಕಿರೋ ಹೊತ್ಗೇ ಮತ್ತೆ ಇಷ್ಟೆಲ್ಲಾ ಪುಂಡಾಟ ಆಡ್ತಾ ಇರೋದು.’

‘ ಅವನೊಬ್ಬನೇ ಸ್ನೇಹಿತನೇ ನನಗೆ. ನೀನು ಅಲ್ಲವೇ? ನಾನು ಕೇಳೋದೇನೋ, ನೀನು ಹೇಳೋದೇನೋ, ಒಂದಕ್ಕೊಂದು ಸಂಬಂಧವೇ ಇಲ್ಲ. ಆದದ್ದೇನೂಂತ ಹೇಳು.’

‘ ನೀನೊಬ್ಬ ನನ್ನಕಡೆ ನಿಂತ್ಕೋ ಚಿನ್ನೋಬಯ್ಯ. ಮತ್ತೆ ಅವನಾಡೋ ಆಟಾನೂ ತೋರಸ್ತೀನಿ ’

—ಚಿನ್ನೋಬಯ್ಯನ ಪ್ರಶ್ನೆಗೆ ಉತ್ತರ ಕೊಡದೆ ತನ್ನ ದ್ವೇಷಸಾಧನೆಯ ಮಾತನ್ನೇ ಮುಂದುವರಿಸಿದ ವಿಠೋಬ.

‘ ಮೊದಲು ಅದೇನೂಂತ ಹೇಳು. ಆ ಮೇಲೆ ನಾನು ಯಾರ ಕಡೆ ಅಂತ ಹೇಳ್ತೀನಿ.’

‘ ನನಗೆ ಯಾರದೂ ನಂಬಿಕೇನೇ ಇಲ್ಲ ಚಿನ್ನೋಬಯ್ಯ.’

‘ ಯಾಕೆ ? ’

—ವಿಠೋಬನ ಮಾತು ಕೇಳಿ, ಆಶ್ಚರ್ಯದಿಂದ ಕೇಳಿದ.

‘ ಅವನೂ ಸ್ನೇಹಿತಾಂತಲೇ ಇದ್ದೆ ನಾನು. ಅದಕ್ಕೇ ಇವತ್ತಿಷ್ಟೆಲ್ಲಾ ಅವಮರ್ಯಾದೆ ಆದದ್ದು. ಈ ಕಾಲದಲ್ಲಿ ಯಾರನ್ನೂ ನಂಬಲೇ ಬಾರದು. ಅವನು ಹೇಳಿದ ಹಾಗೆ ನಾವು ಕುಣಿಯೋವರೆಗೂ ಎಲ್ಲರೂ ಸ್ನೇಹಿತರೇ. ಅದಾಯ್ತು ಅಂದಮೇಲೆ, ನಾವು ಕುದುರೆ ಅವರೇ ಸವಾರರು.’

‘ ರಾಘಣ್ಣ ಹಾಗೆ ಮಾಡೋ ಮನುಷ್ಯನಲ್ಲ.’

—ವಿಠೋಬನ ಆಪಾದನೆಯನ್ನು ನಂಬದೆ ಹೇಳಿದ ಚಿನ್ನೋಬಯ್ಯ.

‘ ಅವನೂ ಅಷ್ಟೇ, ಅವನಪ್ಪನೂ ಅಷ್ಟೆ. ನಾಳೆ ನೀನೂ ಅಷ್ಟೆ. ಮಾತಾಡೋ ಹೊತ್ತಿನಲ್ಲಿ ಎಲ್ಲಾ ಸ್ನೇಹಿತರೇ. ಅದನ್ನ ನಂಬಿಕೊಂಡು ಏನಾರ ಉಪಕಾರ ಮಾಡೂಂತಕೇಳು, ಮನೇಲಿರೋರನ್ನ ಬೀದೀಗೆ ಎಳೀತಾರೆ.’

‘ ಅಂಥಾದ್ದು ಈಗೇನಾಯಿತು ಹೇಳು. ರಾಘಣ್ಣ ಹಾಗೇನಾದರೂ ಮಾಡಿದ್ದರೆ, ನಾನು ನಿನ್ನ ಪಕ್ಷ.’

‘ ನಿಜಾನೇ ಈ ಮಾತು ? ’

‘ ನೀನೂ ಅವನಿಗೇ ತಾನೇ ಬೆಂಬಲ. ಏನಾದ್ರೂ ನೀವೆಲ್ಲಾ ಒಂದೇ, ಆ ಸೊಕ್ಕಿರೋ ಹೊತ್ಗೇ ಮತ್ತೆ ಇಷ್ಟೆಲ್ಲಾ ಪುಂಡಾಟ ಆಡ್ತಾ ಇರೋದು.’

‘ ಅವನೊಬ್ಬನೇ ಸ್ನೇಹಿತನೇ ನನಗೆ. ನೀನು ಅಲ್ಲವೇ? ನಾನು ಕೇಳೋದೇನೋ, ನೀನು ಹೇಳೋದೇನೋ, ಒಂದಕ್ಕೊಂದು ಸಂಬಂಧವೇ ಇಲ್ಲ. ಆದದ್ದೇನೂಂತ ಹೇಳು.’

‘ ನೀನೊಬ್ಬ ನನ್ನಕಡೆ ನಿಂತ್ಕೋ ಚಿನ್ನೋಬಯ್ಯ. ಮತ್ತೆ ಅವನಾಡೋ ಆಟಾನೂ ತೋರಸ್ತೀನಿ ’

—ಚಿನ್ನೋಬಯ್ಯನ ಪ್ರಶ್ನೆಗೆ ಉತ್ತರ ಕೊಡದೆ ತನ್ನ ದ್ವೇಷಸಾಧನೆಯ ಮಾತನ್ನೇ ಮುಂದುವರಿಸಿದ ವಿಠೋಬ.

‘ ಮೊದಲು ಅದೇನೂಂತ ಹೇಳು. ಆ ಮೇಲೆ ನಾನು ಯಾರ ಕಡೆ ಅಂತ ಹೇಳ್ತೀನಿ.’

‘ ನನಗೆ ಯಾರದೂ ನಂಬಿಕೇನೇ ಇಲ್ಲ ಚಿನ್ನೋಬಯ್ಯ.’

‘ ಯಾಕೆ ? ’

—ವಿಠೋಬನ ಮಾತು ಕೇಳಿ, ಆಶ್ಚರ್ಯದಿಂದ ಕೇಳಿದ.

‘ ಅವನೂ ಸ್ನೇಹಿತಾಂತಲೇ ಇದ್ದೆ ನಾನು. ಅದಕ್ಕೆ ಇವತ್ತಿಷ್ಟೆಲ್ಲಾ ಅವಮರ್ಯಾದೆ ಆದದ್ದು. ಈ ಕಾಲದಲ್ಲಿ ಯಾರನ್ನೂ ನಂಬಲೇ ಬಾರದು. ಅವನು ಹೇಳಿದ ಹಾಗೆ ನಾವು ಕುಣಿಯೋವರೆಗೂ ಎಲ್ಲರೂ ಸ್ನೇಹಿತರೇ. ಅದಾಯ್ತು ಅಂದಮೇಲೆ, ನಾವು ಕುದುರೆ ಅವರೇ ಸವಾರರು.’

‘ ರಾಘಣ್ಣ ಹಾಗೆ ಮಾಡೋ ಮನುಷ್ಯನಲ್ಲ.’

—ವಿಠೋಬನ ಆಪಾದನೆಯನ್ನು ನಂಬದೆ ಹೇಳಿದ ಚಿನ್ನೋಬಯ್ಯ.

‘ ಅವನೂ ಅಷ್ಟೇ, ಅವನಪ್ಪನೂ ಅಷ್ಟೆ. ನಾಳೆ ನೀನೂ ಅಷ್ಟೆ. ಮಾತಾಡೋ ಹೊತ್ತಿನಲ್ಲಿ ಎಲ್ಲಾ ಸ್ನೇಹಿತರೇ. ಅದನ್ನ ನಂಬಿಕೊಂಡು ಏನಾರ ಉಪಕಾರ ಮಾಡೂಂತಕೇಳು, ಮನೇಲಿರೋರನ್ನ ಬೀದೀಗೆ ಎಳೀತಾರೆ.’

‘ ಅಂಥಾದ್ದು ಈಗೇನಾಯಿತು ಹೇಳು. ರಾಘಣ್ಣ ಹಾಗೇನಾದರೂ ಮಾಡಿದ್ದರೆ, ನಾನು ನಿನ್ನ ಪಕ್ಷ.’

‘ ನಿಜಾನೇ ಈ ಮಾತು ? ’

‘ ಖಂಡಿತ.’

—ವಿಠೋಬನ ಕೈಮೇಲೆ ಕೈ ಹಾಕಿ ಹೇಳಿದ ಚಿನ್ನೋಬಯ್ಯ.

‘ ಈರವ್ಮನಂಗಡೀಲಿ ಇವತ್ತಾದ್ದೆಲ್ಲಾ ನಿಂಗೂ ಗೊತ್ತಲ್ಲ. ಅದ್ಕೆಲ್ಲಾ ಏನು ಕಾರಣಾಂತೀಯ. ಸೀತಾರಾಮು ಸಂಸಾರ ಉಳಿಸೋನು ತಾನೇ, ನಾವೆಲ್ಲಾ ಅದನ್ನು ಮುಳುಗಿಸೋಕೇ ಹೊರಟಿದೀವಿ ಅನ್ನೋಹಾಗಾಡ್ತಿದಾನೆ ರಾಘಣ್ಣ, ನಾನೇನೋ ಯಾರ ಮನೆ ಮುಳಗ್ಸೋ ಮಾತೂ ಹೇಳ್ಲಿಲ್ಲ. ಎಲ್ಲಾರೂ. ಅನ್ಕೂಲ ಆಗ್ಲಿ ಅಂತ ಹೇಳಿದ್ದಕ್ಕೇ ಇಷ್ಟು ರಾದ್ಧಾಂತ ಮಾಡಿದ ರಾಘಣ್ಣ ’

—ಎಂದು ಆರಂಭಿಸಿ ವಿಠೋಬ ಸೀತಾರಾಮಯ್ಯನ ಸಾಲದ ವ್ಯವಹಾರ, ಈರಮ್ಮನ ತಗಾದೆಯಿಂದ ರತ್ನಮ್ಮನನ್ನು ಬಿಡಿಸಲು ತಾನು ಶಾನುಭೋಕಿ ವಹಿಸಿಕೊಂಡು ಸಾಲತೀರಿಸುವ ಹೊಣೆ ಹೊತ್ತುದು, ಅದಕ್ಕೆ ರಾಘವೇಂದ್ರರಾಯನ ಪ್ರತಿಕ್ರಿಯೆ, ಎಲ್ಲವನ್ನೂ ತನ್ನ ಒಳ್ಳೆಯತನನೇ ಹೊಳೆದು ಕಾಣುವ ರೀತಿಯಲ್ಲಿ ಹೇಳಿ—

‘ ಈಗ ನಾನು ಹೇಳಿದ್ದೇನು ತಪ್ಪು ಹೇಳು. ಸೀತಾರಾಮೂಗೆ ಈರಮ್ಮನ ಹತ್ತಿರ ಸಾಲ ಕೊಡಿಸ್ದೋನು ನಾನು. ಈಗ ಅದನ್ನು ತೀರಿಸೋ ಹೊಣೆ ಹೊತ್ತೋನೂ ನಾನೇ. ಶಾನುಭೋಕಿ ನನಗೆ ವಹಿಸಿಕೊಟ್ರೆ ನಂಗೂ ಅನ್ಕೂಲ ಆಗ್ತದೆ; ಇಲ್ಲಾನ್ನೋದಿಲ್ಲ. ಎಲ್ಲಾರ್ಗೂ ಒಳ್ಳೆದಾಗೋ ಮಾತೇ ಹೇಳಿದ್ರೆ ರಾಘಣ್ಣ ಇಂಥ ಬೋಮರ್ಯಾದೆ ಮಾಡೋದಾ? ನೀನೇ ಹೇಳು. ನಾನೇನಾರ ರತ್ನಮ್ಮನ ತಲೆ ಒಡೀಲಿಕ್ಕೆ ಹೋಗಿದ್ನಾ? ಅಥವಾ ಈರಮ್ಮ ಕೊಟ್ಟ ಸಾಲ ಕೇಳಿದ್ದು ತಪ್ಪಾಯ್ತಾ ? ’

—ಎಂದು ಕೇಳಿದ.

ಚಿನ್ನೋಬಯ್ಯ ಅವನು ಹೇಳಿದುದನ್ನೆಲ್ಲ ಕೇಳಿ—

‘ ನೀನ್ಹೇಳೋದು ಸರಿ. ನೀನು ನಿನಗೆ ತೋಚಿದ ರೀತೀಲಿ ಉಪಕಾರಮಾಡ್ತೀನಿ ಅಂದದ್ದೂ ತಪ್ಪಲ್ಲ. ಈರಮ್ಮ ಬರಬೇಕಾದ ಬಾಕಿ ಕೇಳಿದ್ದೂ ತಪ್ಪಲ್ಲ. ಅವನಿಗೆ ಬೇಕಾದೋನಾಗಿ ರಾಘಣ್ಣ ಮಾತಾಡಿದ್ದೂ ತಪ್ಪಲ್ಲ....’

—ಎಂದ. ಆದರೆ ಅವನ ಮಾತು ಕೇಳಿದ ವಿಠೋಬ, ಅದು ಪೂರ್ತಿಯಾಗಲು ಬಿಡದೆ—

‘ ಇದೇನು ಖಾಜಿ ನ್ಯಾಯದ ಮಾತು ನಿಂದು ಚಿನ್ನೋಬಣ್ಣ....’

—ಎಂದ ಅಸಹನೆಯಿಂದ.

‘ನೋಡು ನನ್ನಮಾತು ಮುಗಿಸೊಕೇ ಬಿಡೋದಿಲ್ವಲ್ಲಾ ನೀನು. ನಾನು ಹೇಳೋ ಮಾತು ಕೊಂಚ ಸಮಾಧಾನ್ವಾಗಿ ಕೇಳು, ಯಾರ್ದೂ ತಪ್ಪಿಲ್ಲ ಅಂತ ಹೇಳ್ಲಿಲ್ಲ ನಾನು,ತಪ್ಪಾದದ್ದು ರಾಘಣ್ಣಾ ಈರವ್ವನ ಹತ್ತಿರ ಉಚಾಯಿಸಿ ಮಾತಾಡಿದ್ದು. ಹೌದೋ ಅಲ್ವೋ. ಅವರ ಶಾನಭೋಕಿ ನಿನಗೆ ಕೊಡೋ ಇಷ್ಟ ಇಲ್ಲದೆ ಹೋದರೆ ಬ್ಯಾಡ. ಈರವ್ವ ಕೇಳಿದ್ದು ಅನ್ಯಾಯ ಅಂದ್ರೆ ತಾನೇ ಮ್ಯಾಲೆ ಬೀಳಬಾರದಾಗಿತ್ತು. ಹಳ್ಳೀಲಿ ನಾವೆಲ್ಲಾ ಸತ್ತು ಹೋಗಿದ್ವಾ ? ತಪ್ಪಿದ್ರೆ ನಾವು ಸರಿಮಾಡ್ತಾ ಇದ್ವಿ.’

ಚಿನ್ನೋಬಯ್ಯನ ಮಾತು ಕೇಳಿ, ಅದು ತನಗೆ ಅರ್ಥವಾಗದ ಯಾವುದೋ ಹೊಸ ಜಾಡು ಹಿಡಿಯುತ್ತಿರುವುದನ್ನು ಅರಿತುಕೊಂಡು ವಿಠೋಬ ಆ ಮಾತಿಗೆ ತಲೆ ಹಾಕುತ್ತಾ—

‘ ಹೌದ್ಹೌದು, ಅದು ಸರಿ ’

—ಎಂದ.

‘ ಹೌದಲ್ಲೋ. ಈಗ ಹಳ್ಳೀಲಿ ನಾವು ನಾಲ್ಕು ಜನ ದೊಡ್ಡೋರು ಅಂತ ಬದುಕಿದ್ದೂ, ರಾಘಣ್ಣನೇ ಹೀಗೆ ದುಡುಕಿದರೆ, ನಾಳೆ ನಮಗೆ ಯಾರು ಮರ್ಯಾದೆ ಕೊಡ್ತಾರೆ ? ಅವನ ಸ್ವಭಾವಾನೇ ಹಿಂಗೆ. ಬಾಳ ಉಚಾಯಿಸಿ ಹೋಗ್ತಾನೆ. ನನ್ತವಾನೂ ಒಂದ್ಸಲ ಹಿಂಗೇ ಮಾತಾಡಿದ್ದ. ಹೋಗ್ಲೀಂತ ಸುಮ್ಕಿದ್ದೆ. ಆದರೆ ಇದು ಭಾಳ ಆಯ್ತು. ಒಂದ್ಸಲ ಹತ್ತುಜನರೆದುರೇ ಹಿಂಗೆ ಮಾಡೋದು ಅಲ್ಲ ಅಂತ ಹೇಳ್ದೆ ಹೋದ್ರೆ ಅವನಿಗೆ ಬುದ್ಧಿ ಬರೋಲ್ಲ; ಹಳ್ಳೀಲಿ ಬಿಕ್ಕಟ್ಟೂ ಉಳಿಯೊಲ್ಲ. ಈಗ ನೀನೊಂದು ಕೆಲ್ಸ ಮಾಡು ಮತ್ತೆ....’

—ಎಂದ ಚಿನ್ನೋಬಯ್ಯ.

‘ ಏನು ? ’

‘ ಈರವ್ವನಿಗ್ಹೇಳಿ, ಈ ವಿಷಯ ಪಂಚಾಯ್ತಿಗಿಡಿಸು.’

ಆ ಮಾತು ಕೇಳಿ ವಿಠೋಬನಿಗೆ ತನ್ನ ಕಿವಿಯನ್ನೇ ನಂಬಲಾಗದಷ್ಟು ಆಶ್ಚರ್ಯವಾಯಿತು. ಏಕೋ ಏನು ಕಾರಣಕ್ಕಾಗೋ ಚಿನ್ನೋಬಯ್ಯ ತನ್ನ

ಕಡೆಗೆ ಒಲಿಯುತ್ತಿದ್ದಾನೆ ಎನಿಸಿದರೂ ಅದನ್ನು ನಂಬಲಾಗದೆ ವಿಠೋಬ—

‘ ಪಂಚಾಯ್ತಿ ಇಡಸಿದರೆ, ಎಲ್ಲಾರೂ ಅವನ ಕಡೇನೇ, ಅಲ್ಲೂ ಅವಮಾನ ಮಾಡಿಸಿಕೋ ಅನ್ತೀಯಾ ? ’

—ಎಂದು ಕೇಳಿದ.

‘ ಅವಮಾನ ಯಾಕಾಗುತ್ತೆ ? ನಾವೆಲ್ಲಾ ಇರೋಲ್ವಾ ? ’

‘ ಇದ್ರೆ ಏನಾಯ್ತು ? ’

‘ಏನಾಗ್ಬೇಕೋ ಅದೇ ಆಗ್ತದೆ. ನಿನಗೆ ಯಾಕೆ ಆ ಯೋಚನೆ. ನಾನು ಹೇಳಿದಂಗೆ ಕೇಳು. ತಕಡಿ ನಿನ್ನ ಕಡೆ ತೂಗಿದ್ರಾಯ್ತಲ್ಲಾ’

‘ ಅಂದ್ರೆ ನಾನೇನ್ಮಾಡ್ಬೇಕು ? ’

—ಚಿನ್ನೋಬಯ್ಯನ ಮಾತಿನ ಅರ್ಥ ತಿಳಿಯದೆ ಕೇಳಿದ ವಿಠೋಬ.

‘ ನಿನ್ನ ಕೆಲಸ ನಾನು ಮಾಡಿಕೊಟ್ರೆ, ನನ್ನ ಕೆಲಸ ನೀನು ಮಾಡಿ ಕೊಡಬೇಕು.’

‘ ಅದೇನು ಹೇಳು ? ಆಗೋದಾದ್ರೆ ಮಾಡಿಕೊಟ್ಟೇನು.’

‘ ಆಗೋದೇ. ನಿನ್ನಿಂದಲೇ ಆಗೋ ಕೆಲ್ಸ.’

‘ ಈರಮ್ಮನ ಮನೇಲಿ ಒಂದು ಹಕ್ಕಿ ಇದಲ್ಲಾ....ಅದೇ. ಈರಮ್ಮನಿಗೊಂದು ಮಾತು ಹೇಳು, ಅದಾದ್ರೆ ಎಲ್ಲಾರ್ಗೂ ಲಾಭ ಆಗ್ತದೆ’

—ಎಂದ ಚಿನ್ನೋಬಯ್ಯ ವಿಠೋಬನತ್ತ ನೋಡಿ ಕಣ್ಣು ಹೊಡೆದು.

ವಿಠೋಬನಿಗೆ ಆ ಕುಣಿದ ರೆಪ್ಪೆಯನ್ನು ಕಂಡು ಚಿನ್ನೋಬಯ್ಯ ತನ್ನ ಕಡೆ ವಾಲಿದುದರ ಅರ್ಥ ಅರಿವಾಯಿತು.

‘ ಆದರೆ ಈರಮ್ಮ ಅದಕ್ಕೆ ಒಪ್ತಾಳೋ ಇಲ್ವೋ.’

—ಎಂಬ ಸಂದೇಹ ತೂಗಿದ ಧ್ವನಿಯಲ್ಲಿ.

‘ಒಪ್ಸೋದು ನಿನ್ನಭಾರ. ಈರಮ್ಮನಿಗೂ ನಾನು ಅನ್ಯಾಯ ಮಾಡೊಲ್ಲ. ನಾನೂ ಏನಾರ ಪ್ರತ್ಯುಪಕಾರ ಮಾಡ್ತೀನಿ. ಇವತ್ತಲ್ಲ ನಾಳೆ ಹೆಂಗಿದ್ರೂ ಯಾರಾರ ತಿನ್ನೋ ಹಣ್ಣು ಅದು. ನಾನು ತಿಂದ್ರೆ ತಪ್ಪಾ ? ಏನೇಳ್ತಾಳೋ ಕೇಳಿ ಹೇಳಿಕಳ್ಸು. ಒಪ್ಪಿದ್ರೆ, ಈ ವಿಷ್ಯ ಪಂಚಾಯ್ತಿರಮುಂದೆ ತರ್ಲಿ, ಗೆಲ್ಲಿಸಿ ಕೊಡೋ ಭಾರ ನಂಗಿರಲಿ.’

—ಎಂದ ಚಿನ್ನೋಬಯ್ಯ.

' ಆಯ್ತು, ಹೇಳಿ ನೋಡ್ತಿನಿ'

— ಎಂದು ವಿಠೋಬನೂ, ಚಿನ್ನೋಬಯ್ಯನ ಮಾತನ್ನು ಈರಮ್ಮನಿಗೆ ಮುಟ್ಟಿಸಲು ಒಪ್ಪಿಕೊಂಡ.

# ೧೦

ತನ್ನ ಬಯಕೆಯ ದಾರಿಯಲ್ಲಿ ಅಡ್ಡಗಲ್ಲಾಗಿ ನಿಂತ ರಾಘವೇಂದ್ರ ರಾಯನ ಮೇಲೆ ಕೆರಳಿ ಕುದಿಯುತ್ತಿದ್ದ ವಿಠೋಬನಿಗೆ ಚಿನ್ನೋಬಯ್ಯನ ನೆರವು ಸಿಕ್ಕಿದ್ದು ಮಳೆಗೆ ಗಾಳಿಯ ಬೆಂಬಲ ಸಿಕ್ಕ ಹಾಗಾಯಿತು. ಅಂಗಡಿ ಯಲ್ಲಾದ ಹಗರಣದಿಂದ ಈರಮ್ಮನೂ ರೇಗಿ ಕುದಿಯುತ್ತಿದ್ದಳು. ಎಂತಲೇ ತಮ್ಮಿಬ್ಬರ ಹಂಚಿಕೆಗೆ ಈರಮ್ಮನನ್ನು ಸುಲಭವಾಗಿ ಒಪ್ಪಿಸಬಹುದೆಂವೇ ನಂಬಿ, ಸಂತೋಷದಿಂದ ಆ ಸುದ್ದಿಯನ್ನು ಅವಳಿಗೆ ತಿಳಿಸಲು ಹೋದ ವಿಠೋಬ.

ಆದರೆ ಈ ವಿಷಯವನ್ನು ಪಂಚಾಯಿತಿಗೆ ತರುವುದಕ್ಕೆ, ಈರಮ್ಮ ವಿಠೋಬ ಊಹಿಸಿದಷ್ಟು ಸುಲಭವಾಗಿ ಒಪ್ಪಲಿಲ್ಲ ; ಹಿಂದೆ ಮುಂದೆ ನೋಡ ತೊಡಗಿದಳು. ಅದನ್ನು ಕಂಡು ವಿಠೋಬನಿಗೆ ಆಶ್ಚರ್ಯವಾಯಿತು.

‘ ನಿನ್ನೆ ಎಲ್ಲಾ ಅಷ್ಟು ಎಗರಾಡ್ತಿದ್ದೆ. ಇಷ್ಟು ಬ್ಯಾಗ ಮನಸ್ಸು ಬದಲಾಯಿಸ್ತಾ? ರಾಘಣ್ಣ ಏನಾದ್ರೂ ತಪ್ಪಾಯ್ತು ಅಂತ ಕೇಳಿಕೊಂಡ್ನಾ?’

—ಎಂದು ಕೇಳಿದ.

‘ ಊಹೂ.’

‘ ಮತ್ತೆ? ನಿನಗಷ್ಟು ಅವಮಾನ ಮಾಡಿದೋನ್ನ ಹಂಗೆ ಬಿಟ್ಬಿಡ್ತೀಯಾ ? ’

‘ ಅಂದೆಂಗಾಗ್ತದೆ ? ’

‘ ಮತ್ತೆ ? ನಿನ್ನ ಮಾತೇ ನಂಗೆ ಅರ್ಥ ಆಗ್ತಾ ಇಲ್ಲ. ಅವನ ಮೇಲೆ

ಸಿಟ್ಟೊ ಇದೆ ಅಂತಿ, ಪಂಚಾಯ್ತಿಗಿಟ್ಟು ಊರೋರ ಮುಂದೆ ಅವನ ಕೈಲಿ ತಪ್ಪು ದಂಡ ಇಡಸ್ತೀನಿ ಅಂದ್ರೆ ಅದಕ್ಕೂ ಬ್ಯಾಡಾ ಅಂತಿ. ಹಂಗಾದ್ರೇನು ಮಾಡ್ಬೇಕು ಅಂತೀಯ.'

'ರಾಘಣ್ಣನಿಗೆ ಏನಾದ್ರೂ ಮಾಡೋದಾದ್ರೆ ಬ್ಯಾಡ ಅನ್ನೋಲ್ಲ. ಆದ್ರೆ ಅವನ ಮ್ಯಾಲಿನ ಸಿಟ್ಟಿಗೆ ರತ್ನಕ್ಕನ್ನ ಪಂಚಾಯ್ತಿಗೆ ಎಳಿಯಾಕೆ ನಂಗೆ ಇಷ್ಟ ಇಲ್ಲ. ಇವನ ದಬಾವುಬಿಗೆ ಆಕೇಗೆ ಅವಮಾನ ಮಾಡೋದ. ರತ್ನಕ್ಕ ಎಂಥ ಮರ್ಯಾದೆ ಹೆಂಗಸು. ಒಂದು ದಿನಾನಾರ ಮನೆಕಟ್ಟೆ ಮೇಲೆ ಬಂದು ನಿಂತೋಳಲ್ಲ. ಅಂಥೋಳನ್ನ ಊರಿನ ಮುಂದೆ ತಂದುನಿಲ್ಲಿಸು ಅಂತೀಯಲ್ಲಾ ಎಲ್ಲಾರಾ ಉಂಟಾ ? ಯಾರೊಪ್ಪೋ ಮಾತು ಇದು.'

' ನಿನಗೆಲ್ಲೋ ಬುದ್ಧಿ ಕೆಟ್ಟುಹೋಗಿದೆ. ಅವನು ಬಂದು ಬೀದೀಲಿ ನಿನ್ನ ಮರ್ಯಾದೆ ಕಳೀಬಹುದು, ನೀನು ಮಾತ್ರ ಅವನನ್ನ ಬೀದೀಗೆಳೀ ಬಾರ್ದು. ಇದೆಂಥ ಮಾತು. ರತ್ನಕ್ಕ ಮರ್ಯಾದಸ್ಥೆ, ನಿಜ. ಹೇಗಂದ್ರೆ ಇವನನ್ನು ಯಾಕೆ ನಮ್ಮ ಮೇಲೆ ಛೂ ಬಿಡಬೇಕಾಗಿತ್ತು. ಮಾಡಿದ್ದಕ್ಕೆ ಅನುಭವಿಸ್ಲೀಳು,'

—ಎಂದ ವಿಠೋಬ, ತನಗಾದ ಅಪಮಾನದ ನೆನಪಿನಿಂದ ರೇಗುತ್ತಾ.

' ಎತ್ತಿನ ರೋಗಕ್ಕೆ ಎಮ್ಮೆಗೆ ಬರೆಹಾಕಿದ್ರು ಅಂತ, ರಾಘಣ್ಣ ಮಾಡಿದ ತಪ್ಪಿಗೆ ರತ್ನಕ್ಕನಿಗೆ ಅಪಮಾನ ಮಾಡು ಅಂತೀಯಾ ? ಪಾಪ— ರತ್ನಕ್ಕಂದೇನು ತಪ್ಪು, ಸೀತಾರಾಮಪ್ಪ ನಡುನೀರ್ನಾಗೆ ಕೈಬಿಟ್ಟು ಹೋದ. ಆ ಹೊತ್ನಾಗೆ ಆಕೆ ಯಾರ್ನಾರ ನಂಬ್ಕೋಬೇಕಾಗಿತ್ತು, ರಾಘಣ್ಣನ್ನ ನಂಬಿ ಕೊಂಡ್ಳು, ಅವನು ಹೀಗೆಲ್ಲಾ ಮಾಡ್ತಾನೇಂತ ಆಕೆಗೇನಾರ ಕನಸು ಬೀಳ್ಬೇಕಾಗಿತ್ತೇ ? '

' ಇಲ್ಲ. ನಿನ್ನ ನಂಬಿಕೊಂಡು ನಾನು ಭಾವೀಲಿ ಬೀಳಬೇಕು. ಅಷ್ಟೆ. ತುಂಗಾದ್ರೀಗೇನು ಮಾಡ್ತೀಯ ? '

' ಯಾವುದಕ್ಕೇನು ಮಾಡೋದು ? '

'ನಿನಗೆ ಬರೋ ದುಡ್ಡಿಗೆ? ಅದಕ್ಕೇನು ಎಳ್ಳುನೀರು ಬಿಟ್ಬಿಡ್ತೀಯಾ? '

' ಅದಕ್ಯಾಕೆ ಎಳ್ಳುನೀರು ಬಿಡಬೇಕು.'

' ಬಿಡದೆ ಮತ್ತೇನು ಮಾಡ್ತೀಯ, ಇಷ್ಟು ಮಾಡಿದೋನು ಅವನು

ನಿನ್ನ ದುಡ್ಡು ಬರೋಕೆ ಬಿಡ್ತಾನೆಯೇ ? '

' ನನ್ನ ದುಡ್ಡಿಗೂ ಅವನಿಗೂ ಏನು ಸಂಬಂಧ? ಕೊಟ್ಟೋನಲ್ಲ ತಗೊಂಡೋನಲ್ಲ, ಅದಕ್ಕೂ ಅವನಿಗೂ ಏನೂ ಸಂಬಂಧವಿಲ್ಲ. ಅವನ ಹೆಸರೇ ಹೇಳಬ್ಯಾಡ. ನೀನೇ ಏನು ಹೇಳ್ತೀಯೋ ಹೇಳು ಅಂತ ಕೇಳ್ತೀನಿ.'

' ಒಂದುವೇಳೆ–ರತ್ನಕ್ಕ ಎಲ್ಲಾ ರಾಘಣ್ಣನಿಗೇ ಗೊತ್ತು, ಅವನು ಹೇಳಿದಂಗೆ ಕೇಳ್ತೀನಿ ಅಂದರೆ....'

' ಆಕೆ ಅಂಥ ಗಂಟು ಎತ್ತಾಕೋ ಮಾತು ಆಡೋಕಿಲ್ಲ. ಅಂಥ ಹೆಂಗಸಲ್ಲ, ರತ್ನಕ್ಕ....'

' ಅದು ನನಗೂ ಗೊತ್ತು. ಆದರೂ ಒಂದುವೇಳೆ ಹಾಗೆ ಹೇಳಿದರೆ.... ಆಗೇನು ಮಾಡ್ತೀಯಾ ? ನಿಂಗೆ ನಾಚಿಕೆ ಹೇಚಿಕೆ ಇಲ್ಲ. ಕೊಡಬೇಕಾದ ದುಡ್ಡು ಕೇಳಿದ್ದಕ್ಕೆ ಇಷ್ಟೆಲ್ಲಾ ಹಾದಿರಂಪ, ಬೀದಿರಂಪ ಆಯ್ತು. ಬೇರೆ ಯವರು ಆಗಿದ್ರೆ ಅವರು ನಿಂತ ನೆಲದ ಮೇಲೆ ನಿಂತ್ಕೋತಾ ಇರಲಿಲ್ಲ. ಹಂಗಿದ್ರೂ ನೀನು ಮತ್ತೆ ಅವನ ಮನೆ ಬಾಗಿಲಿಗೆ ಹೋಗ್ತೀನಿ ಅಂತೀಯಲ್ಲ, ನಿನಗೇನು ಅಂಥ ದುರವಸ್ಥೆ ಬಂದಿರೋದು. ಹಿಂಗೆ ಮಾಡಿದರೆ, ನಾಳೆ ಬೀದಿ ನಾಯಿ ಕೂಡ ನಿನ್ನ ಕಂಡ್ರೆ ನಗ್ತದೆ. ಈಗಾಗಿರೋದೆ ಸಾಲ್ದ ? '

—ಎಂದು ವಿಠೋಬ, ಈರಮ್ಮನ ಹೃದಯದಲ್ಲಿ ಆರುತ್ತಿದ್ದ ಪ್ರತೀ ಕಾರದ ಉರಿಗೆ ನೆನಪಿನ ಗಾಳಿ ಬೀಸಿದ. ಈರಮ್ಮ ಅವನ ಪ್ರಶ್ನೆಗೆ ಉತ್ತರ ಕೊಡಲಾಗದೆ ಸುಮ್ಮನೆ ಕುಳಿತು ಕೇಳಿದಳು. ಅವಳ ಮೌನ ವಿಠೋಬನ ಪಾಲಿಗೆ ಪ್ರೋತ್ಸಾಹದಂತಾಯಿತು, ಅವನೇ ಮಾತನ್ನು ಮುಂದುವರಿಸಿ ಹೇಳಿದ—

' ಅವರೆಲ್ಲಾ ಮರ್ಯಾದೆ ಇರೋರು. ನೀನೊಬ್ಬಳೇ ಮರ್ಯಾದೆ ಇಲ್ಲದೆ ಇರೋಳು. ನೀನೂಂದ್ರೆ ಈಗಲೇ ರಾಘಣ್ಣನ ಪಾಲಿಗೆ ಕಸ. ಇನ್ನು ನೀನು ಸೋತು ಹೋದರೆ, ಇದ್ದದ್ದೂ ಲಾಘವ ಆಗಿ ಹೋಗ್ತೀಯಾ ? ಥೂ ಅಂದ್ರೆ ನನ್ನ ಬಾ ಅಂದ್ರು ಅಂತ ಹೋಗ್ತೀನಿ ಅನ್ತೀಯಲ್ಲಾ. ನೀನೇನು ತಿರುಪೆಯೋಳು ಕೆಟ್ಟು ಹೋದೆಯಾ ? ಪರಾರತ್ತು ಇದ್ದರೆ, ಅವನಷ್ಟೆ ಜೂರತ್ತು ಮಾಡಿ, ಬರೋ ದುಡ್ಡು ವಸೂಲು ಮಾಡಿಕೋ ಬೇಕು. ಇಲ್ದೆ ಹೋದ್ರೆ ಹೋಗ್ಲಿ ಅಂತ ಬರೋದುಡ್ಡಿಗೆ ಎಳ್ಳುನೀರು ಬಿಟ್ಟು ತೆಪ್ಪಗೆ ಮನೇಲಿ

ಕೊತುಕೋ ಬೇಕು. ಅದುಬಿಟ್ಟು ಇಂಥ ಎಡಬಿಡಂಗಿ ಮಾತು ಆಡೋದಾ? ನಿನಗೇನು ಅಂಥ ಗ್ರಾಚಾರ ಬಂದಿರೋದು ?'

—ಘಟ್ಟಿಸಿ, ಘಟ್ಟಿಸಿ ಕೇಳಿದ ವಿಠೋಬ. ಅವನ ಮಾತಿನಲ್ಲೂ ಸತ್ಯ ವಿಲ್ಲದೆ ಇರಲಿಲ್ಲ. ಅದಕ್ಕೆ ಸೋತರೂ, ರತ್ನಮ್ಮನನ್ನು ಪಂಚಾಯಿತಿ ಕಟ್ಟೆಗೆ ಎಳೆಯಲು, ಈರಮ್ಮನ ಹೆಣ್ಣು ಹೃದಯ ಒಪ್ಪಲಿಲ್ಲ.

' ನೀನು ಹೇಳೋದೆಲ್ಲಾ ನಿಜಾನೇ, ಆದ್ರೂ........'

—ಎಂದು, ಅನಿಶ್ಚಯತೆ ತುಳುಕಾಡುತ್ತಿದ್ದ ಧ್ವನಿಯನ್ನು ಎಳೆದಳು.

' ಏನು ಆದ್ರೂ....ನಾನು ಹೇಳೋದು ನಿಜ ಅಂದ್ರೆ, ನನ್ನ ಮಾತಿಗೆ ಒಪ್ಪಿಕೋ, ಹೆಂಗೂ ಈಗ ಚಿನ್ನೋಬಣ್ಣ 'ನಾನು ನಿಮ್ಮ ಕಡೆ' ಅಂತಿದಾನೆ. ಅಂಥ ಬಲಿಷ್ಟರಸಹಾಯ ಇರೋಹೊತ್ತಿನಲ್ಲೇ ಇವರನ್ನ ಬಗ್ಗುಬಡೀಬೇಕು.'

' ಪಾಪ ! ಚಿನ್ನೋಬಯ್ಯ ಧರ್ಮಕ್ಕೆ ಸಹಾಯ ಮಾಡ್ತಾನಲ್ಲವೇ ? ಮನೆಹುಡುಗೀನ ಅವನ ಪಕ್ಕಕ್ಕೆ ಕಳಿಸಿದ್ರೇ ತಾನೇ, ಅವನ ತಕ್ಕಡಿ ನಮ್ಮ ಕಡೆ ತೂಗೋದು. '

— ಕಠೋರ ಸತ್ಯ ತುಂಬಿ, ಕಹಿಯಾದ ಧ್ವನಿಯಲ್ಲಿ, ವಿಠೋಬನ ಮುಖಕ್ಕೆ ರಾಚಿದಂತೆ ಕೇಳಿದಳು ಈರಮ್ಮ. ಆ ಮಾತಿನ ಏಟಿಗೆ ಸಿಕ್ಕಿ ವಿಠೋಬನೂ ಒಂದು ಗಳಿಗೆ ಅಪ್ರತಿಭನಾದ.

' ಯಾವ ಲೋಕ ಗೆಲ್ಲೋಕೆ ಇಂಥ ಹಟ. ನಮ್ಮದು ಒಂದು ಕಣ್ಣು ಹೋದ್ರೂ ಹೋಗಲಿ,ಅವರದು ಎರಡು ಕಣ್ಣೂ ಹೋಗಲಿ ಅನ್ನೋಕೆ ರತ್ನಕ್ಕ ನಮಗೆ ಅಂಥಾದ್ದೇನು ಮಾಡಿದಾಳೆ. ನಿನ್ಮಾತು ನಂಗೆ ಯಾಕೋ ಒಪ್ಗೆ ಆಗಲಿಲ್ಲ '

—ಎಂದಳು ಈರಮ್ಮ.

' ಹುಂಗಾದ್ರೀಗ ಚಿನ್ನೋಬಯ್ಯನಿಗೆ ನಿನ್ನ ದಾರೀಗೆ ನೀನು ಹೋಗು ಅಂತೀರು. ಅಂಥೋರ ಸ್ನೇಹ ಸಿಗೋದು ಸುಲಭ ಅಲ್ಲ. ದಕ್ಕೇ ಅಲ್ಲ ಅಂಥೋರ ಸ್ನೇಹ ಇದ್ರೆ, ಯಾಪತ್ತಿಗಾರ ಒಳ್ಳೇದೇ. ನನ್ನ ಮನೇ ಮೇಲೆ ಚಿನ್ನದ ತಗಡು ಹಾಕಿಕೊಳ್ಳೋಕೆ, ನಾನು ಅವರ ಹತ್ತಿರ ಮಾತಾಡಿದೆನಾ ? ನಿನಗೋಸ್ಕರ ತಾನೇ. ನಿನಗೆ ಅವಮಾನ ಆದ್ರೂ ಒಂದೇ, ನನಗಾದ್ರೂ ಒಂದೇ ಅಂತ ನಾನು ಕೆಲಸ ಮಾಡಿದ್ದಕ್ಕೆ ಇದೇ ಮಾತೇನಾ ? ನೀನು

ಹೇಳೋದು. ಅವನಿಗೇನು ಹುಡುಗೇರ ಬರ ಬಂದು ನಿನ್ನ ಮನೆ ಬಾಗಿಲಿಗೆ ಬಂದಿದ್ನಾ? ನಿನ್ನ ಕಾಲ್ನಲ್ಲಿ ಒದ್ಕೋರ ಕಾಲಿಗೆ ಶರಣು ಅಂತ ಬಿದ್ದು, ಸಹಾಯ ಮಾಡ್ತೀನಿ ಅಂತ ಬಂದೋನ್ನ ಹೋಗು ಅಂತೀಯಲ್ಲ. ಇಷ್ಟೇನಾ ನಿನಗೆ ಬುದ್ಧಿ ಇರೋದು. ಏನೋ ನೀನು ನನ್ನ ಮಾತು ತಗದು ಹಾಕೊಲ್ಲ ಅಂತ, ಮಾತಾಡಿದ್ದಕ್ಕೆ ನನಗೂ ಒಳ್ಳೆ ಮರ್ಯಾದೆ ಮಾಡ್ದೆ, ಹಿಂಗೇಂತ ಗೊತ್ತಿದ್ರೆ ನಮ್ಮಪ್ಪನಾಣೆ ನಾನು ಈ ಮಾತಿಗೆ ಬರ್ತಿರಲಿಲ್ಲ. ನಿನ್ನಯಾಕೆ ಅನ್ನಲಿ. ಒಟ್ಟಿನಲ್ಲಿ ನಾನು ಈ ಊರ್ನಲ್ಲಿ ಮುಖ ಎತ್ತಿಕೊಂಡು ಬಾಳೋದು ಯಾರ್ಗೂ ಬೇಕಾಗಿಲ್ಲ. ನೀವು ನೀವೇ ಸುಕ್ವಾಗಿರಿ. ನಾನೇ ಎಲ್ಲಾದ್ರಾ ಹಾಳಾಗಿ ಹೋಗ್ತೀನಿ '

—ಎಂದ ವಿಠೋಬ, ತರ್ಕಬದ್ಧವಾದ ಈರಮ್ಮನ ಮಾತಿಗೆ ಅಷ್ಟೇ ತರ್ಕಬದ್ಧವಾದ ಉತ್ತರ ಕೊಡಲಾಗದೆ; ಸಿಟ್ಟು, ನಿರಾಶೆ, ಅಸಹಾಯಕತೆಗಳ ಸುಳಿಯಲ್ಲಿ ಸಿಕ್ಕಿ.

ಸೋತು, ನೆಲಕ್ಕೆ ಮುಖ ಮಾಡಿದ ವಿಠೋಬನನ್ನು ಕಂಡು ಈರಮ್ಮ ನಿಗೆ ಕನಿಕರವಾಯಿತು. ಅವನ ಹೆಗಲ ಮೇಲೆ ಕೈ ಹಾಕಿ, ಮೃದುವಾದ ಧ್ವನಿ ಯಲ್ಲಿ—

' ನೀನು ಹಾಳಾಗಿ ಹೋಗಬೇಕು ಅಂತ ನಾನು ಹೇಳಿದ್ನಾ? ನಿನ ಗೇಂತಲೇ ಅಲ್ವಾ ನಾನು ಈ ವ್ಯಾಜ್ಯ ಕಟ್ಟಿಕೊಂಡದ್ದು ? '

—ಎಂದು ಕೇಳಿದಳು.

' ನಿಜಾನೇ. ಹಂಗಾದ್ರೀಗ್ಯಾಕೆ ಈ ಅಡ್ಡಮಾತು ಆಡ್ತೀಯ? ಅವನು ನನ್ನ ಹೊಟ್ಟೆ ಎಷ್ಟು ಉರಿಸಿದಾನೆ ನಿಂಗೆ ಗೊತ್ತಿಲ್ವಾ? ನಾನು ಉಣ್ಣೋ ಅನ್ನಕ್ಕೆ ಅವನು ಮಣ್ಣು ಹಾಕಿದ್ರೂ, ಇನ್ನೂ ಅವನ ಮಾತೇ ಆಡ್ತಿಯಲ್ಲಾ? ಇಂಥಾ ಸಮಯ ಸಿಕ್ಕೀತೇ. ಹೆಂಗಾದ್ರೂ ಅವನ ಮೂಗು ಮುರಿದೇನೇ ಅಂತ ಇದ್ರೆ, ಒಳ್ಳೆ ಐನ್ ಸಮಯದಲ್ಲಿ, ನೀನು ಟಾಂಗ್ ಕೊಡ್ತೀಯಲ್ಲಾ. ನನ್ನ ಮಾತು ನೀನು ತೆಗೆದು ಹಾಕೊಲ್ಲಾಂತ ನಾನಿದ್ರೆ, ನೀನೇ ನನ್ನ ಮುಖ ಮುರಿಯೋದಾ? ಹಿಂಗಾದ್ಮೇಲೆ ನಾನು ಬದುಕಿದ್ದು ಏನು ಸಾರ್ಥಕ? ನಾನು ಸಂತೋಷ್ವಾಗಿರಬಾರ್ದು ಅಂತ ತಾನೇ ನಿನಗಿಂಥ ಬುದ್ಧಿ ಬಾದಿರೋದು. '

—ಈರಮ್ಮನಿಂದ ಕನಿಕರವನ್ನು ಪ್ರಾರ್ಥಿಸುವ ಧ್ವನಿಯಲ್ಲಿ ಕೇಳಿದ ವಿಠೋಬ.

‘ನೋಡು ಮತ್ತೆ, ನನ್ನ ತಪ್ಪಾಡ್ತೀಯಲ್ಲಾ? ದಾಘಣ್ಣನ ಮೊಕ ಮುರಿಯೋಕೆ ನಾನು ಬ್ಯಾಡ ಅನ್ನಿಲ್ಲ. ನೀನು ಹೇಳ್ದ ಚಿನ್ನೋಬಯ್ಯನ ಮಾತಿಗೂ ಬ್ಯಾಡ ಅನ್ಲಿಲ್ಲ, ಚಿಕ್ಕರುದ್ರಿ ಹಣೇಲಿ ಏನು ಬರದೈತೋ ಅದಾಗ್ತದೆ. ಆದ್ರೆ ಏನೂ ತಿಳೀದ ರತ್ನಕ್ಕನ್ನ ಪಂಚಾಯ್ತಿಗೆ ಎಳೆಯಾಕೆ ಬ್ಯಾಡ ಅಂದೆ. ಅಷ್ಟೇ ಅಲ್ವಾ, ನಾನು ಹೇಳಿದ್ದು, ರತ್ನಕ್ಕನ ಮೊಕ ನೋಡಿದ್ರೆ ಅಯ್ಯೋ ಪಾಪ ಅನ್ನಿಸ್ತದೆ. ಆವತ್ತು ಗಟ್ಟಿಯಾಗಿ ಮಾತಾಡಿ ಬಂದು, ಆಮ್ಯಾಲೆ ಒಂದು ಗಂಟೆ ಹೊತ್ತು ಪೇಚಾಡ್ದೆ.’

‘ನಿಜ. ಆದ್ರೆ ಆ ನಿಯತ್ತು ಅವರಿಗಿರಬೇಕೋ ಬ್ಯಾಡ್ವೋ. ನೀನು ಅಯ್ಯೋ ಪಾಪ ಅಂದಿದ್ದಕ್ಕೆ ಬಂದ ಫಲ ಏನು? ಬೀದೀಲಿ ನಾಳೆ ಅನ್ನಿಸಿಕೊಂಡು ಮರ್ಯಾದೆ ಕಳಕೊಂಡದ್ದೇ ಅಲ್ವಾ? ರತ್ನಕ್ಕನ ವಿಷಯದಲ್ಲಿ ನಿನ್ನಷ್ಟೇ ನಂಗೂ ವಿಶ್ವಾಸ ಇದೆ. ಆಕೆ ಇವನ ಮಾತು ಬಿಡ್ತಾಳೇನು ಕೇಳು. ಹಂಗಾರ ಬಂದ್ರೆ ಈ ಪಂಚಾಯ್ತಿ ಬೇಡ ಅನ್ನೋದು. ಆದ್ರೆ ಆಕೆಗೆ ಇವನ ಮಾತೇ ವೇದವಾಕ್ಯ.’

‘ಅದೂ ನಿಜ. ಹೋಗ್ಲಿ ನಾನೇಳೋದು ಒಂದು ಮಾತು ಕೇಳು.’

‘ಏನು?’

‘ಇದೊಂದ್ಸಲಾ ನೋಡೋಣ. ನಾನೂ ಅವನ್ತಾವ ಹೋಗಾಕಿಲ್ಲ. ನೀನು ಹೋಗೋದೂ ಬ್ಯಾಡ, ಚಿನ್ನೋಬಯ್ಯ ಮೂರನೇಯವನು ತಾನೇ, ಆತ ಇತ್ಯರ್ಥ ಮಾಡಿಸಲಿ.’

‘ಅವನ ಮಾತಿಗೂ ಕೇಳ್ದೆ ಹೋದ್ರೆ........?’

‘ಆಗಿನ್ನೇನು ಮಾಡೋದು ನೀನೇಳ್ದಂಗೆ ಆಗಲಿ.’

—ಎಂದಳು ಈರಮ್ಮ ಸೋಲುತ್ತಾ.

‘ಸರಿ. ಅದೂ ಒಂದು ಆಗಿ ಹೋಗ್ಲಿ’

—ಎಂದ ವಿಠೋಬ ಕಷ್ಟಪಟ್ಟು ಕೋಟೆಯನ್ನು ಗೆದ್ದವನ ಹಾಗೆ ನಿಟ್ಟುಸಿರು ಬಿಡುತ್ತಾ.




ಈರಮ್ಮನ ಅಂಗಡಿಯ ಬಳಿ ನಡೆದ ಹಗರಣವನ್ನು ರಾಘಣ್ಣನ ಬಾಯಿಂದಲೇ ಕೇಳಿದ ರತ್ನಮ್ಮನಿಗೆ ದಿಗ್ಭ್ರಮೆಯಾದಂತಾಗಿತ್ತು. ರಾಘಣ್ಣನೇನೋ 'ನೀನೇನೂ ಆ ಚಿಂತೆ ಹಚ್ಚಿಕೊಳ್ಳಬೇಡ ರತ್ನಕ್ಕ. ಅದೇನು ಮಾಡ್ತಾಳೋ ಮಾಡಲಿ' ಎಂದು ಧೈರ್ಯ ಹೇಳಿ ಹೋಗಿದ್ದರೂ, ರತ್ನಮ್ಮನ ಮನಸ್ಸಿಗೆ ಅವರಿಂದ ಸಮಾಧಾನವಾಗಿರಲಿಲ್ಲ. ಅದಕ್ಕೆ ಪ್ರತಿಯಾಗಿ ಅವಳ ಚಿಂತೆ ಹೆಚ್ಚಿತು. ಉಗುರಿನಲ್ಲಿ ಹೋಗಬಹುದಾದಂಥ ಸಣ್ಣ ಕೆಲಸ ಎಂದುಕೊಂಡುದು ಅಷ್ಟೇ ಸುಲಭವಾಗಿ ಪರಿಹಾರವಾಗದೆ, ದಿನದಿನಕ್ಕೆ ತೊಡಕಾಗುತ್ತಿರುವುದು, ಸ್ನೇಹದಲ್ಲಿ ಬಗೆಹರಿಸಲೆಣಿಸಿದ ಕೆಲಸ ದಿನದಿನಕ್ಕೆ ದ್ವೇಷಕ್ಕೆ ದಾರಿಯಾಗುತ್ತಿರುವುದನ್ನು ಕಂಡು, ರತ್ನಮ್ಮನಿಗೆ ಮೂಗುಬಾಯಿ ಹಿಡಿದಂತಾಗಿತ್ತು. ಹಾಗೆ ಆ ಅಸಮಾಧಾನ ದ್ವೇಷ ಬೆಳೆಯದಂತೆ, ಸೌಜನ್ಯದಲ್ಲೇ ಎಲ್ಲವನ್ನೂ ಮುಗಿಸುವುದಕ್ಕೂ, ಹಣವಿಲ್ಲದೆ ಬರಿಗೈಯಾದ ಅವಳಿಗೆ ಸಾಧ್ಯವಿರಲಿಲ್ಲ. ಅದಕ್ಕಿಂತಲೂ ಹೆಚ್ಚಾಗಿ, ರೇಗಿದ ರಾಘಣ್ಣನ ಮನಸ್ಸಿನಲ್ಲಿ ಸ್ನೇಹದ ಮಾತೇ ನಾಟುವಂತಿರಲಿಲ್ಲ. ದ್ವೇಷಕ್ಕೆ ಪ್ರತಿಯಾಗಿ ದ್ವೇಷವನ್ನೇ ಸಾಧಿಸಿ, ಅವನನ್ನು ಬಗ್ಗು ಬಡಿಯಬೇಕೆಂದು ಹಾತೊರೆಯುತ್ತಿದ್ದ ಅವನ ಮುಖವನ್ನು ಕಂಡಾಗ ಅವಳಿಗೆ ಗಾಬರಿಯಾಗುತ್ತಿತ್ತು. ಆದರೆ 'ಹಾಗಲ್ಲ, ಹೀಗೆ ಮಾಡು' ಎಂದು ರಾಘಣ್ಣನಿಗೆ ಹೇಳುವುದಕ್ಕೂ ಆಕೆಗೆ ಬಾಯಿ ಇರಲಿಲ್ಲ. ತಾನು ಹಾಗೆ ಹೇಳಿದರೆ, ರಾಘಣ್ಣ ಏನು ತಿಳಿದುಕೊಳ್ಳುತ್ತಾನೋ ಎಂಬ ಭಯ. ಈ ಇಬ್ಬಗೆಯ ಭೀತಿಯ ಸೆಳವಿನಲ್ಲಿ ಸಿಕ್ಕ ರತ್ನಮ್ಮನ ಸ್ಥಿತಿ, ಈಜು ಬರದವನು,

ತನಗೆ ಬೇಕಾದವನು ನೀರಿನಲ್ಲಿ ಮುಳುಗುತ್ತಿರುವುದನ್ನು, ಸುಮ್ಮನೆ ದಡ ದಲ್ಲಿ ನಿಂತು ನೋಡುವಾಗಿನ ಹಾಗಿತ್ತು. ನಾಲ್ಕು ಕಡೆಯಲ್ಲೂ ಕತ್ತಲು ಕವಿದ ಹೊತ್ತಿನಲ್ಲಿ, ದಾರಿ ತೋರುವವರೇ ಇಲ್ಲದೆ, ಅಸಹಾಯಕಳಾಗಿ, ಚಿಂತೆಗೆ ಮನತೆತ್ತು ಬಳಲುತ್ತಿದ್ದಳು ರತ್ನಮ್ಮ– 'ದೇವರೇ, ಹೇಗಾದರೂ ಇಷ್ಟಕ್ಕೆ ಇದು ಮುಗಿಯಲಿ' ಎಂದು ಪ್ರಾರ್ಥಿಸುತ್ತಾ. ಆ ಚಿಂತೆಯಲ್ಲಿ ಅವ ಳಿಗೆ ಊಟ ತಿಂಡಿಯೂ ಬೇಕಾಗಿರಲಿಲ್ಲ. ಮಾಡಿದ ಅಡಿಗೆಯಲ್ಲಿ ನಾರಾ ಯಣನಿಗೆ ಅಷ್ಟು ಊಟ ಮಾಡಿಸಿ, ತಾನು ಮಾತ್ರ ಊಟವೂ ಬೇಕಾಗದೆ, ನಿದ್ರೆ ಮಾಡುತ್ತಿದ್ದ ಮಗನನ್ನೂ ಪಕ್ಕದಲ್ಲಿ ಮಲಗಿಸಿಕೊಂಡು, ಹಾಗೇ ಚಾಪೆ ಯ ಮೇಲೆ ಉರುಳಿಕೊಂಡಿದ್ದಳು, ಗವಾಕ್ಷದಲ್ಲಿ ತೂರಿ ಬರುತ್ತಿದ್ದ ಬಿಸಿಲಿನ ಕೋಲಿನ ನಡುವೆ ಸುತ್ತುತ್ತಿದ್ದ ಧೂಳಿನ ಕಣಗಳನ್ನೇ ನೋಡುತ್ತಾ. ಹಾಗೇ ಚಿಂತಿಸುತ್ತಾ ಚಿಂತಿಸುತ್ತಾ ಬಳಲಿದ ಮನಸ್ಸು ಅರನಿದ್ದೆಯ ಮಂಪರದಲ್ಲಿ ರುವಾಗ, ಹೊರಗೆ ಯಾರೋ ಬಾಗಿಲು ತಟ್ಟಿ ರಾಘಣ್ಣನ ಹೆಸರು ಕೂಗಿ ದುದು ಕೇಳಿಸಿತು. ಎಚ್ಚರವಾದ ರತ್ನಮ್ಮ ಮಲಗಿದಲ್ಲಿಂದಲೇ 'ಯಾರು?' ಎಂದು ಕೇಳಿದಳು

'ನಾನು, ಚಿನ್ನೋಬಯ್ಯ'

—ಎಂದಿತು ಹೊರಗಿನ ಧ್ವನಿ.

ಚಿನ್ನೋಬಯ್ಯನ ಹೆಸರು ಕೇಳಿ ರತ್ನಮ್ಮ ಭ್ರಾಂತಳಾದಳು.

ಚಿನ್ನೋಬಯ್ಯ ಯಾರೆಂಬುದು ರತ್ನಮ್ಮನಿಗೆ ತಿಳಿದಿತ್ತು. ಸೀತಾ ರಾಮಯ್ಯ ಬದುಕಿದ್ದಾಗ ಒಂದೆರಡುಬಾರಿ ಚಿನ್ನೋಬಯ್ಯನನ್ನು ನೋಡಿಯೂ ಇದ್ದಳು. ಆದರೆ ಸೀತಾರಾಮಯ್ಯ ತೀರಿಕೊಂಡ ದಿನದಿಂದ ಇಂದಿನವರೆಗೆ, ಒಂದು ಸಲವಾದರೂ ಬರದಿದ್ದ ಚಿನ್ನೋಬಯ್ಯ ಈಗ ಏಕೆ ಬಂದಿರಬಹು ದೆಂದು ಅವಳಿಗೆ ಆಶ್ಚರ್ಯವಾಯಿತು. ಆ ಆಶ್ಚರ್ಯದೊಂದಿಗೇ ಕೊಂಚ ದಿಗಿಲೂ ಆಯಿತು. ಹಾಗೇ ಎದ್ದು ಹೊರಗೆಬಂದು ಬಾಗಿಲು ಮರೆಯಲ್ಲೇ ನಿಂತು—

'ರಾಘಣ್ಣ ಇಲ್ಲಿಗೆ ಬಂದಿಲ್ಲ. ಅವನ ಮನೆಯಲ್ಲೇ ಇರಬಹುದು.'

—ಎಂದಳು.

'ರಾಘಣ್ಣ ಇಲ್ವಾ. ಇದ್ದಿದ್ರೆ ಚಂದಾಗಿತ್ತು. ಹೋಗ್ಲಿ, ಏನ್ಮಾಡೋ ಕಾಗ್ತದೆ.'

—ಎಂದು ಮಾತನ್ನು ಎಳೆದು ಹೇಳಿದ ಚಿನ್ನೋಬಯ್ಯ.

'ಏನಾದರೂ ಹೇಳುವುದಿದ್ದರೆ, ನನಗೆ ಹೇಳಿದರೆ ರಾಘಣ್ಣ ಬಂದಾಗ ಹೇಳ್ತಿನಿ.'

—ಎಂಥಳು ರತ್ನಮ್ಮ, ಮಾತನ್ನು ಅಲ್ಲಿಗೇ ಮುಗಿಸಲು ಯತ್ನಿಸಿ.

'ನಿಮ್ತಾನೇ ನಸಿ ಮಾತಾಡೋದಿತ್ತು....'

—ಎಂದ ಚಿನ್ನೋಬಯ್ಯ ಮಾತು ಅಲ್ಲಿಗೇ ಮುಗಿಯಲು ಬಿಡದೆ.

ಅವನು ಆ ಮಾತು ಹೇಳಿದ ಮೇಲೆ ಬೇರೆ ದಾರಿಯೇ ಕಾಣದೆ, ರತ್ನಮ್ಮ ಬಾಗಿಲು ತೆಗೆದು, ಪಡಸಾಲೆಯಲ್ಲಿ ಅವನು ಕುಳಿತುಕೊಳ್ಳಲು ಚಾಪೆ ಹಾಸಿ, ತಾನು ಹೋಗಿ, ನಡುಮನೆಯ ಬಾಗಿಲ ಹಿಂದೆ ಕುಳಿತುಕೊಂಡಳು, ಚಿನ್ನೋಬಯ್ಯನೇ ಮಾತು ಮುಂದುವರಿಸಲೆಂದು ಕಾಯುತ್ತಾ.

ಚಿನ್ನೋಬಯ್ಯ ಸ್ವಲ್ಪ ಹೊತ್ತು ಸುಮ್ಮನೆ ಕುಳಿತು, ಪಂಚೆಯ ತುದಿಯಿಂದ ಮುಖದ ಮೇಲಿನ ಬೆವರನ್ನು ಒರಸಿಕೊಂಡು, ಬಿಸಿಲಿನಲ್ಲಿ ಬಂದ ದಣಿವನ್ನು ಆರಿಸಿಕೊಂಡು—

'ಇಷ್ಟೆಲ್ಲ ರಗಳೆ ಮಾಡ್ಕೊಳ್ಳೋಕೆ ಮುಂಚೆ ನಮಗೊಂದು ಮಾತು ಹೇಳಿದ್ರೆ ಆಗ್ತಾ ಇರಲಿಲ್ವಾ ರತ್ನಕ್ಕ'

—ಎಂದ, ತಾನು ಆಡಬೇಕೆಂದಿದ್ದ ಮಾತಿಗೆ ಪೀಠಿಕೆ ಹಾಕಿಕೊಂಡು.

ಅವನು ಆ ಮಾತು ಹೇಳುತ್ತಿದ್ದ ಹಾಗೇ ರತ್ನಮ್ಮನಿಗೆ ಚಿನ್ನೋಬಯ್ಯ ಬಂದದ್ದು ಏಕೆಂಬುದು ಅರಿವಾಗಿ, ಎದೆಯಲ್ಲಿ ದಿಗಿಲು ತುಂಬಿತು. ಆದರೂ ಅದನ್ನು ತೋರಗೊಡದೆ—

'ಏನು ವಿಷಯ ಚಿನ್ನೋಬಣ್ಣ'

—ಎಂದು ಕೇಳಿದಳು.

'ಮತ್ತೆ ಯಾವದು? ಈರಮ್ಮನ ಸಾಲದ ವಿಷಯ. ಅವಳ ಸಾವಾಸ ಎಂಥಾದೂಂತ ನಿಮಗೆ ತಿಳಿಯದಾ? ಮುಳ್ಳಿನ ಮೇಲೆ ಹಾಕಿದ ಬಟ್ಟೆ ಹಂಗೆ ಹೆಂಗೋ ಹಂಗೆ ಬಿಡಿಸಿಕೊಂಡು ಹೋಗೋದು ಬಿಟ್ಟು, ಕೋತಿ ಹುಣ್ಣು, ಬ್ರಹ್ಮರಾಕ್ಷಸ ಮಾಡಿಕೊಂಡ ಹಾಗೆ ಮಾಡ್ಕೊಳ್ಳೋದಾ?'

‘ ಆಕೆ ಸಾಲ ತೀರಿಸೊಲ್ಲಾಂತ ನಾನು ಹೇಳಲಿಲ್ಲವಲ್ಲ ಚಿನ್ನೋಬಣ್ಣ. ಆದಷ್ಟು ಬೇಗ ತೀರಸ್ತೀನಿ ಅಂತ ಹೇಳಿದೆ.’

‘ ಅಷ್ಟೆ ಆಗಿದ್ರೆ ಇಷ್ಟೆಲ್ಲಾ ರಾಮಾಯಣ ಯಾಕಾಗ್ತಿತ್ತು. ರಾಘಣ್ಣನ ಬುದ್ಧಿ ಎಂಥಾದೂಂತ ತಿಳ್ದೂ ತಿಳ್ದೂ ಅವನ್ನ ಈ ಮಾತಿಗೆ ಬಿಡೋದಾ?’

—ಎಂದ ಚಿನ್ನೋಬಯ್ಯ ಅಸಮಾಧಾನದ ಧ್ವನಿಯಲ್ಲಿ. ಅವನ ಮಾತಿನಲ್ಲಿದ್ದ ರಾಘಣ್ಣನ ನಡತೆಯ ಟೀಕೆಯನ್ನು ಅರಿತು, ರತ್ನಮ್ಮನ ಮನಸ್ಸಿಗೆ ಬೇಸರವಾಯಿತು. ಆದರೆ ಅದನ್ನು ತೋರಿಸಿಕೊಳ್ಳುವುದು ಸರಿಯಲ್ಲವೆಂದು ಕೊಂಡು—

‘ ಹೌದು, ಎಲ್ಲಾ ನನಗೂ ತಿಳಿಯಿತು. ಏನು ಮಾಡುವುದು. ರಾಘಣ್ಣನದು ಕೊಂಚ ಮುಡುಕಿನ ಸ್ವಭಾವ, ಆದರೆ ಹೀಗಾಗುತ್ತೇಂತ ನಾನೂ ಅಂದು ಕೊಂಡಿರಲಿಲ್ಲ. ಏನೋ ಆಗಿಹೋಯಿತು. ರಾಘಣ್ಣನೂ ಬೇಕಂತ ಏನೂ ಮಾಡಲಿಲ್ಲ. ಅವರೂ ಹಾಗೇ ಮಾತಾಡಿದರಂತೆ.’

—ಎಂದಳು, ರಾಘಣ್ಣನನ್ನು ಬಿಟ್ಟುಕೊಡದೆ.

‘ ಮುಡುಕೊ ದುರಹಂಕಾರಾನೊ, ಅದೆಲ್ಲಾ ಯಾರು ಕೇಳ್ತಾರೆ ರತ್ನಕ್ಕ. ನಮ್ಮ ಕೈ ಸಡಿಲವಾಗಿರೋವಾಗ ನಾಲಗೆ ಹಿಡ್ದು ಬಸ್ತಿನಲ್ಲಿಟ್ಟುಕೋಳ್ಳಬೇಕು. ಹಾಗಲ್ಲದೆ, ನಾಲಿಗೆ ನನ್ನದೂಂತ ಬೇಕಾದ ಹಾಗೆ ಮಾತಾಡಿದರೆ, ನಾಳೆ ಕೆಡೋರು ಯಾರು ? ಈ ಪರಿಜ್ಞಾನ ಬೇಡವೇ ? ಅವನ ಮುಡುಕು ಅವನ್ನೇ ತಿಂದಿದ್ದರೆ, ಯಾರೇನು ಹೇಳಬೇಕಾಗಿರಲಿಲ್ಲ. ಆದರೆ ಮುಡುಕಿದೋನು ಅವನು, ಅನುಭವಿಸಬೇಕಾದೋಳು ನೀನು.’

—ಎಂದ ಚಿನ್ನೋಬಯ್ಯ ಕೊಂಚ ಕಟುವಾದ ಧ್ವನಿಯಲ್ಲಿ.

‘ ಈಗ ಮತ್ತೇನಾಯ್ತು ಚಿನ್ನೋಬಣ್ಣ ? ’

—ಚಿನ್ನೋಬಯ್ಯನ ಮಾತನ್ನು ಕೇಳಿ, ಹೆದರಿ ಕೇಳಿದಳು ರತ್ನಮ್ಮ.

‘ ಆಗೋದೇನು- ಈಗ ನಿನ್ನ ಕತ್ತಿಗೇ ಬಂದಿದೆ. ಈರಮ್ಮ ರಾಂಗು ರಾಂಗಾಗಿ ಕೂತಿದಾಳೆ— ’

‘ ಅಂದ್ರೆ........’

‘ ಈ ವಿಷ್ಯ ಎಲ್ಲಾ ಪಂಚಾಯ್ತಿರ ಮುಂದೆ ತೀರ್ಮಾನ ಆಗಬೇಕು. ಮಾನ ನಷ್ಟಕ್ಕೆ ದಂಡ ಕೊಡಿಸಬೇಕು’ ಅಂತ ಕೂತಿದಾಳೆ. ಅದಕ್ಕೇ ನನ್ನ

ಹತ್ತಿರ ಬಂದಿದ್ದಳು. ಒಳ್ಳೇರ ಮಾನ ಹಳ್ಳೀಲಿ ಹೋಯ್ತು ಅಂದಹಾಗೆ, ನಿನಗೆ ಇಪ್ಪೆಲ್ಲಿ ಗ್ರಹಚಾರ ಬಂತು ಅಂತ, ನಾನೇ ಅವಳಿಗೆ ಸಮಾಧಾನ ಹೇಳಿ, ನಿನ್ನ ಹತ್ತಿರ ಬಂದೆ. ನಿನಗಂತೂ ನಾವೆಲ್ಲಾ ಬದುಕಿದ್ದೂ ಸತ್ತಹಾಗೆ, ಆದ್ರೆ ನಾವು ಹಂಗಂದುಕೊಂಡ್ರೆ ಯಾವ ದೇವರು ಮೆಚ್ತಾನೆ ಹೇಳು. ನೀನು ಬ್ಯಾಡ ಅಂದ್ರೂ, ಸತ್ತೋನ ಸ್ನೇಹ ನೆನಕೊಂಡು ಬರಬೇಕಾಯಿತು.

—ಎಂದ ಚಿನ್ನೋಬಯ್ಯ ಅಸಮಾಧಾನ ತುಳುಕುವ ಧ್ವನಿಯಲ್ಲಿ.

‘ನಾನು, ಅವರ ಸ್ನೇಹಿತರು ಯಾರನ್ನೂ ಬಿಟ್ಟುಕೊಂಡು ಹೋಗಿಲ್ಲ ಚಿನ್ನೋಬಣ್ಣ’

—ರತ್ನಕ್ಕ ಚಿನ್ನೋಬಯ್ಯನ ಅಸಮಾಧಾನವನ್ನು ತಣಿಸುವಂತೆ ಹೇಳಿದಳು.

‘ಬಿಟ್ಟುಕೊಂಡು ಹೋಗಿಲ್ಲ. ಅದು ಯಾರುನಂಬೋಮಾತು ರತ್ನಕ್ಕ?’

‘ಏಕೆ?’

‘ಬಿಟ್ಟುಕೊಂಡು ಹೋಗದಿದ್ರೆ ಎಲ್ಲಾದಕ್ಕೂ ರಾಘಣ್ಣನನ್ನೇ ನಂಬಿಕೊಂಡು ಕುಣೀತಿದ್ದೆಯಾ? ಹೀಗೆಲ್ಲಾ ಆದಾಗ ನಮಗೂ ಒಂದು ಮಾತು ಹೇಳ್ತಾ ಇರಲಿಲ್ವಾ? ಈರಮ್ಮ ಹಣಕ್ಕೆ ತಗಾದೆ ಮಾಡಿದ್ರರೆ, ನಾವೆಲ್ಲಾ ಏನು ಸತ್ತುಹೋಗಿದ್ದೆವಾ? ಅಷ್ಟಕ್ಕೆ ಬಂದಿದ್ರೆ ಅವಳ ಹಣ ತೆಗೆದು ಮುಖದ ಮೇಲೆ ಎಸೀ ಬಹುದಾಗಿತ್ತು. ಅದುಬಿಟ್ಟು, ರಾಘಣ್ಣ ಎಲ್ಲಾ ಮಾಡ್ತಾನೆ ಅಂತ ನಂಬಿ ಮುಂದೆ ಬಿಟ್ಟಿದ್ದಕ್ಕೆ ಈಗೇನಾಗಿದೋ ನೋಡು. ಎಲ್ಲಾ ಆಲಕಿ ಕುಲಗೆಡಿಸಿ ಬಿಟ್ಟಿದಾನೆ. ಸಣ್ಣ ಜನಾನ ರೇಗಿಸಿದ್ರೆ ನಮ್ಮ ಮಾನತಾನೇ ಹೋಗೋದು.’

‘ಇದು ಹೀಗೆಲ್ಲಾ ಆಗುತ್ತೇಂತ ನಾನು ತಿಳಿದುಕೊಂಡಿರಲಿಲ್ಲ ಚಿನ್ನೋಬಣ್ಣ........’

‘ತಿಳುಕೊಂಡಿದ್ಯೋ ಬಿಟ್ಟಿದ್ಯೋ—ಈಗೇನ್ಮಾಡ್ತಿ ಹೇಳು.’

—ಪಟ್ಟು ಹಿಡಿದು ಕೇಳಿದ ಚಿನ್ನೋಬಯ್ಯ.

‘ನನಗಂತೂ ಒಂದೂ ತೋಚ್ತಾಇಲ್ಲ ಚಿನ್ನೋಬಣ್ಣ. ಏನು ಮಾಡಬೇಕೋ ನೀವೇ ಹೇಳಿ.’

‘ನಾನು ಹೇಳಿದ್ರೆ....ಹಂಗೆ ಕೇಳ್ತೀಯಾ?’

‘ ಹೂ. ನೀನು ರಾಘಣ್ಣ ಇಬ್ಬರೂ ಹೇಗೆ ಸರಿ ಅಂತ ಹೇಳಿದರೆ ಹಾಗೆ ಮಾಡ್ತೀನಿ.’

‘ ಮತ್ತದೇ ನೋಡು ! ಈ ವಿಷಯದಲ್ಲಿ ಮತ್ತೆ ನೀನು ರಾಘಣ್ಣನ್ನ ಮುಂದೆ ಮಾಡಿದ್ರೆ ಯಾವುದೂ ನಡೆಯೋದಿಲ್ಲ.’

‘ ಯಾಕೆ ? ’

‘ ಅವನ ಹೆಸರು ಕೇಳಿದರೇ ಈರಮ್ಮ ಸಿಡಿಮಿದ್ದಾಗ್ತಾಳೆ. ಅವಳಿಗೆ ಅವನ ತಲೆ ಕಂಡರೆ ಆಗದ್ಹಂಗಾಗಿದೆ. ಅಂಥಾದ್ರಲ್ಲಿ ಮತ್ತೆ ಅವನು ಹೇಳಲಿ ಅಂತೀಯಲ್ಲ. ಅವನ್ನ ನಂಬಿಕೊಂಡೇ ಈ ಮಾತಾಡಿದ್ರೆ, ನಿನ್ನ ಮಾನ ಉಳಿಯೋಲ್ಲ.’

‘ ಹಾಗಾದ್ರೇನು ಮಾಡ್ಬೇಕು ಅಂತೀಯ ?’

‘ ಅವನಿಗೆ ಈ ವಿಷಯದಲ್ಲಿ ನೀನು ಬರಬೇಡ ಅಂತ ಹೇಳ್ಬಿಡು.’

‘ ಹೇಳಿ........ಆಮೇಲೆ........’

‘ಆಮೇಲೆ—ಈ ವಿಷಯ ನನಗೆ ಬಿಡು. ನಾನೆಲ್ಲಾ ಸಲೀಸಾಗಿ ಇತ್ಯರ್ಥ ಮಾಡಿಸಿಕೊಡ್ತೀನಿ. ಈರಮ್ಮನೂ ಇದಕ್ಕೆ ಒಪ್ಪಿನಾಳೆ.’

‘ ಇರಬಹುದು. ಆದರೆ........’

‘ ಮತ್ತೇನಾವರೆ........’

‘ ನೀನೇನೂ ತಿಳಿದುಕೊಳ್ಳೊಲ್ಲಾಂದರೆ ಒಂದು ಮಾತು ಹೇಳ್ತೀನಿ ಚಿನ್ನೋಬಣ್ಣ........’

‘ ಅದೇನು ಹೇಳು ? ’

‘ ರಾಘಣ್ಣ ಈ ಭಾರಾನೆಲ್ಲಾ ತಾನಾಗೆ ತನ್ನ ತಲೇ ಮೇಲೆ ಹೊತ್ತು ಕೊಳ್ಳಲಿಲ್ಲ. ನಾನೇ ಇದನ್ನ ಅವನ ತಲೆಯ ಮೇಲೆ ಹೊರೆಸಿ, ಮನೇ ಲಿದ್ದೋರು ಬಯಲಿಗೆ ಬರೋಹಾಗೆ ಮಾಡಿದೆ. ನನ್ನ ಅದೃಷ್ಟವೇ ಅಂಥದು. ಅವನಿಂದ ಇದು ಇಷ್ಟೆಲ್ಲಾ ರಾದ್ಧಾಂತಕ್ಕೆ ಇಟ್ಟುಕೊಂಡು, ನನಗಾಗಿ ರಾಘಣ್ಣ ಕೆಟ್ಟೋನಾಗಬೇಕಾಯಿತು. ಈಗ ಅವನಿಗೆ ನಾನೇ ‘ ಇದಕ್ಕೂ ನಿನಗೂ ಸಂಬಂಧ ಇಲ್ಲ. ಸುಮ್ಮನಿರು ’ ಅಂತ ಯಾವ ಮುಖ ಇಟ್ಟು ಕೊಂಡು ಹೇಳಲಿ. ರಾಘಣ್ಣನ ಸ್ಥಿತೀಲಿ ನೀನೇ ಇದ್ದಿದ್ರೆ ಏನು ಹೇಳ್ತಾ ಇದ್ದೆ ಹೇಳು.’

—ಎಂದಳು ರತ್ನವ್ವ ಚಿನ್ನೋಬಯ್ಯನನ್ನು ತನ್ನ ತರ್ಕಕ್ಕೆ ಒಲಿಸಿ ಕೊಳ್ಳುವ ರೀತಿಯಲ್ಲಿ.

' ನೀನು ಹೇಳೋದೆಲ್ಲಾ ಸರಿ ರತ್ನಕ್ಕ, ಆದರೆ ಅದನ್ನೆಲ್ಲಾ ಯಾರು ಕೇಳ್ತಾರೆ ಹೇಳು. ನಿನ್ನ ನೀತಿ, ನಿಯತ್ತು ಕಟ್ಟಿಕೊಂಡು ಅವರಿಗೆಲ್ಲಾ ಏನಾ ಗಬೇಕಾಗಿದೆ. ಲೋಕ ಎಲ್ಲಾ ನಿನ್ನಹಾಗಿದ್ರೆ ಬೇಕಾದ್ದು ಮಾಡಬಹುದಾ ಗಿತ್ತು. ಆದರೆ ಅವರ ರೀತಿನೇ ಬ್ಯಾರೆ. ಮನೇಲಿರೋ ಹೆಂಗಸು ನಿನಗ ದೆಲ್ಲಾ ತಿಳಿಯೋದಿಲ್ಲ. ಈಗ ನಿನ್ನ ಕೆಲಸ ಆಗಬೇಕೂಂತ ಇದ್ದರೆ, ನಾನು ಹೇಳಿದ ಹಾಗೆ ಕೇಳು.'

—ಚಿನ್ನೋಬಯ್ಯ ರತ್ನವ್ವನ ತರ್ಕವನ್ನು ಒಪ್ಪದೆ, ತನ್ನ ದಾ ಯನ್ನೇ ಹಿಡಿದು ಹೇಳಿದ.

' ಹಾಗಾದ್ರೀಗ ಏನು ಮಾಡಬೇಕು ಅಂತೀಯ ? '

' ಇದೆಲ್ಲಾ ಮುಗಿದು, ಸಮಾಧಾನಕ್ಕೆ ಬರೋವರಗೂ ರಾಘಣ್ಣನಿಗೆ ಇದರಲ್ಲಿ ತಲೆ ಹಾಕಬ್ಯಾಡ ಅಂತ ಹೇಳು.'

' ಹಾಗಂದ್ರೆ ರಾಘಣ್ಣನಿಗೆ ಅಸಮಧಾನ ಆಗೋದಿಲ್ಲವೇ ? '

' ಆಗ್ಬೋದು. ಆದ್ರೆ ರಾಘಣ್ಣ ನೀನು ಅಂದು ಕೊಂಡ ಹಾಗೆ ನಿನ್ನ ಹಿತೈಷಿ ಆದ್ರೆ ಸಂದರ್ಭ ಅರ್ಥಮಾಡಿಕೊಂಡು ಸುಮ್ಮನಿರಬೇಕು ತನ್ನ ಕೈಲಿ ಆಗದ ಕೆಲಸಾನ, ಮಾಡೋಕೆ ಶಕ್ತಿ ಇರೋರು ಮಾಡಲಿ ಅಂತ ಸುಮ್ಮನಿರಬೇಕು, ಅದು ಬಿಟ್ಟು ತನ್ನ ಕೋಡು ಕೊರೆಯಾಗ್ತದೆ ಅಂದ್ರೆ, ನೀನು ಊರು ಪಂಚಾಯ್ತಿ ಮುಂದೆ ಬರಬೇಕಾಗ್ತದೆ. ಇವೆರಡರಲ್ಲಿ ಯಾವುದು ಒಳ್ಳೇದು ಹೇಳು, ಪಂಚಾಯ್ತಿ ಆಗಬಾರದು. ಹತ್ತು ಜನದ ಮುಂದೆ ಮನೆ ವಿಷಯ ಬಯಲಾಗಬಾರದು ಅಂತ ನನ್ನಿಷ್ಟ. ಅದಕ್ಕೇ ಈರಮ್ಮನಿಗೆ ಸಮಾಧಾನ ಹೇಳಿ ಬಂದೆ. ಆದ್ರೆ ನೀನು ರಾಘಣ್ಣನೇ ಆಗ ಬೇಕು ಅಂದ್ರೆ ಇದು ಊರ ಪಂಚಾಯ್ತಿ ಆಗೋದು ಖಂಡಿತ. ಅದಕ್ಕೇ ನಾನು ಹೇಳೋದು—ರಾಘಣ್ಣನಿಗೆ ಸ್ವಲ್ಪ ಅಸಮಾಧಾನ ಆದ್ರೂ ಆಗ್ಲಿ. ಅವನಿಗೆ ಸ್ವಲ್ಪ ಸುಮ್ನಿರು ಅಂತ ಹೇಳು. ರಾಘಣ್ಣನಷ್ಟೇ ನಾವೂ ಸೀತಾರಾ ಮಯ್ಯನ ಸ್ನೇಹಿತರು. ನಾವೂ ನಿನ್ನ ಮುಳುಗೋಕೆ ಬಿಡೋದಿಲ್ಲ.'

' ಆ ನಂಬಿಕೆ ನನಗೂ ಇದೆ ಚಿನ್ನೋಬಣ್ಣ. ಆ ನಂಬಿಕೆ ಇರೋ

ಹೊತ್ತಿಗೆ ತಾನೇ ನಾನು ಇಲ್ಲಿ ನಿಂತದ್ದು'

'ಸರಿ, ಮತ್ತೆ, ಸಂಜ್ಯೆ ಇದೆ ಅಂದ್ರೆ ಆಗೋಯ್ತು. ನಾನು ಹೇಳಿದ್ದಕ್ಕೆ ನಿನ್ನ ಒಪ್ಪಿಗೆ ಇದೆ ಅಂತ ಈರಮ್ಮನಿಗೆ ಹೇಳಲೇನು?'

—ಎಂದು ಮಾತನ್ನು ಮುಕ್ತಾಯದ ಘಟ್ಟಕ್ಕೆ ತಂದು ಕೇಳಿದ ಚಿನ್ನೋಬಯ್ಯ.

ಆ ಪ್ರಶ್ನೆಗೆ ರತ್ನಮ್ಮನಿಗೆ ಕೂಡಲೇ ಉತ್ತರ ಹೇಳಲು ತೋಚಲಿಲ್ಲ. ಈರಮ್ಮನಿಗೆ ಹಾಗೆ ಹೇಳಬೇಡ ಅಂದರೆ, ಆತನಿಗೆ 'ನಿನ್ನಲ್ಲಿ ನನಗೆ ನಂಬಿಕೆ ಇಲ್ಲ' ಎಂದೇ ಹೇಳಿದ ಹಾಗಾಗಿ ಚಿನ್ನೋಬಯ್ಯ ಅಸಮಾಧಾನ ಪಟ್ಟು ಕೊಳ್ಳಲು ಕಾರಣವಾಗುತ್ತದೆ. ಹಾಗಲ್ಲದೆ ಆತನ ಮಾತಿಗೆ ಸಮ್ಮತಿಸಿದರೆ, ತನಗಾಗಿ ಇಷ್ಟೆಲ್ಲಾ ನಿಷ್ಠೂರಕ್ಕೆ ಗುರಿಯಾದ ರಾಘಣ್ಣನಿಗೆ ಮುಖ ಮುರಿ ದಂತಾಗಿ, ಆತನಿಗೆ ಅಸಮಾಧಾನಕ್ಕೆ ಕಾರಣವಾಗುತ್ತದೆ. ಹೇಗೆ ಮಾಡು ವುದು, ಯೋಚನೆಗೂ ಅವಕಾಶವಿಲ್ಲದಂತೆ ನೆತ್ತಿಯ ಮೇಲೆ ಕವಿದು ಬಂದ ಈ ಸಂದಿಗ್ಧದಿಂದ ಹೇಗೆ ಪಾರಾಗುವುದು, ಯಾರಿಗೂ ಅಸಮಾಧಾನವಾಗದಂತೆ ನಡೆದುಕೊಳ್ಳುವ ದಾರಿ ಏನು—ಎಂದು ಚಿಂತಿಸುತ್ತಾ ಕುಳಿತಳು. ಎಷ್ಟು ಚಿಂತಿಸಿದರೂ ಸೂಕ್ತವಾದ ದಾರಿ ಕಾಣಲಿಲ್ಲ.

ತನ್ನ ಪ್ರಶ್ನೆಗೆ ರತ್ನಮ್ಮ ಏನೂ ಉತ್ತರ ಕೊಡದೆ ಸುಮ್ಮನೆ ಕುಳಿತು ದನ್ನು ಕಂಡು, ತಾನೂ ಅಷ್ಟುಹೊತು ಸುಮ್ಮನಿದ್ದ ಚಿನ್ನೋಬಯ್ಯ, ಬಳಿಕ—

'ಅಂದ್ರೆ—ಈಗ ನನ್ನ ಮಾತಿಗೆ ಏನು ಉತ್ತರಹೇಳಿದ್ದಂಗಾಯ್ತು ರತ್ನಕ್ಕ?' ನನ್ನ ಕೆಲಸ ನಿನ್ನದು, ಮಾಡು ಅಂತೀಯಾ, ಅಥವಾ 'ನನ್ನ ಕೆಲಸ ಹೇಗಾದರೂ ನಾನು ಮಾಡಸ್ತೀದೀನಿ. ನಿನ್ನದೇನೂ ಮಧ್ಯಸ್ತಿಕೆ ಬೇಡ, ಅಂತೀಯಾ?'

—ಎಂದು ಕೇಳಿದ.

ರತ್ನಮ್ಮನಿಗೆ ಅವಳ ಜೀವನದಲ್ಲೇ ಎಂದೂ ಇಂಥ ಸಂದಿಗ್ಧ ಒದ ಗಿರಲಿಲ್ಲ. ಅತ್ತ ದರಿ—ಇತ್ತ ಪುಲಿ ಎಂದು ಬೆದರಿಸುತ್ತಿರುವ ಈ ಸಮಸ್ಯೆಗೆ ಏನು ಉತ್ತರ ಹೇಳುವುದು? ಉತ್ತರವನ್ನೇ ಹೇಳದೆ ಸುಮ್ಮನೆ ಕುಳಿತು ಕೊಳ್ಳುವುದೂ ಸಾಧ್ಯವಿರಲಿಲ್ಲ. ಮನೆಯನ್ನು ಕವಿದಿದ್ದ ಮೌನವೇ ಅವಳ ಮುಖವನ್ನು ಪರಚಿ ಉತ್ತರ ಹೇಳು ಎಂದು ಕೇಳುವಂತಿತ್ತು. ಈ

ಹೊತ್ತಿನಲ್ಲಿ ರಾಘಣ್ಣನಾದರೂ ಇಲ್ಲಿರಬಾರದಾಗಿತ್ತೇ ಎಂದು ಚಿಂತಿಸಿದಳು. ಆದರೆ ರಾಘಣ್ಣ ಅಲ್ಲಿರದೆ, ಆ ಬಯಕೆಗೆ ಏನೂ ಬೆಲೆ ಇರಲಿಲ್ಲ. ' ರಾಘಣ್ಣ ಬರಲಿ, ಆತನನನ್ನು ಕೇಳಿ ಹೇಳುತ್ತೇನೆ ' ಎಂದು ಚಿನ್ನೋಬಯ್ಯನಿಗೆ ಹೇಳುವುದೂ ಸಾಧ್ಯವಿರಲಿಲ್ಲ, ಏನುಹೇಳುವುದು, ಹೇಗೆ ಹೇಳುವುದು, ಎಂದು ಚಿಂತಿಸಿ, ಚಿಂತಿಸಿ, ಕಡೆಗೆ ರಾಘಣ್ಣ ತನ್ನಲ್ಲಿಟ್ಟ ವಿಶ್ವಾಸವನ್ನೇ ನಂಬಿ—

' ಆಗಲಿ, ಚಿನ್ನೋಬಣ್ಣ, ನೀವೂ ರಾಘಣ್ಣನಷ್ಟೇ ನನಗೆ ಬೇಕಾದವರು; ಅವರಿಗೂ ಸ್ನೇಹಿತನಾಗಿದ್ದವರು. ನೀವು ಯಾರೂ ನನಗೆ ಕೆಡಕು ಮಾಡುವುದಿಲ್ಲ ಎಂದು ನಂಬಿಕೊಂಡಿದ್ದೇನೆ. ನಾನು ಏನೂ ತಿಳಿಯದವಳು. ನೀವು ಹೇಳಿದ ಹಾಗೆ ಕೇಳುತ್ತೇನೆ '

—ಎಂದಳು.

ಆ ಮಾತಾಡುವಾಗ ಅವಳ ಬಲಗಣ್ಣು ಅದುರಿದಂತಾಯಿತು.

ರತ್ನಮ್ಮ ಹೇಳಿದುದನ್ನು ಕೇಳಿ ಚಿನ್ನೋಬಯ್ಯನಿಗೆ ಸಂತೋಷವಾಯಿತು. ತನ್ನ ಮಾತಿಗೆ ಅವಳು ಅಷ್ಟು ಸುಲಭವಾಗಿ ಒಪ್ಪಬಹುದು ಎಂದು ಅವನು ನಿರೀಕ್ಷಿಸಿರಲಿಲ್ಲ. ಹಾಗಾಗುವುದಕ್ಕೆ ಮತ್ತೆ ಅಷ್ಟು ಬೆವರಿಕೆಯನ್ನು ಉಪಯೋಗಿಸಬೇಕಾಗಬಹುದೋ ಏನೊ, ಇನ್ನು ಎರಡು ದಿನ ಕಾಯಬೇಕಾಗಬಹುದೋ ಏನೋ, ಆ ಮಧ್ಯೆ ತನಗೂ ರಾಘಣ್ಣನಿಗೂ ಮನಸ್ತಾಪ ಆದರೂ ಆಗಬಹುದು ಎಂದೆಲ್ಲಾ ಯೋಚಿಸಿಕೊಂಡಿದ್ದ. ಆದರೆ ಅದಾವ ಚಿಂತೆಯೂ ಅಗತ್ಯವಾಗದೆ ಬಹು ಸುಲಭವಾಗಿ ಅವನು ಅಂದುಕೊಂಡು ಬಂದ ಕೆಲಸ ಆಗಿ ಅವನು ಸವರದೆಯೆ ಅವನ ಮೀಸೆಯ ಕುಡಿಗಳು ನಿಮಿರಿದವು.

' ಅದು ಬುದ್ಧಿವಂತರಾಡೋ ಮಾತು ರತ್ನಕ್ಕ. ಒಬ್ಬ ದೇವರನ್ನೇ ನೆಚ್ಚಿಕೊಂಡರೆ ಕೆಲಸವಾಗೋ ಕಾಲ ಅಲ್ಲ ಇದು. ಯಾವ ಹೊತ್ತಿಗೆ ಯಾವ ದೇವರೆಂದರೆ, ಅದಕ್ಕೆ ಹಣ್ಣು ಕಾಯಿ ಮಾಡಿಸಬೇಕು '

—ಎಂದ ಸಂತೋಷದ ಧ್ವನಿಯಲ್ಲಿ.

ರತ್ನಮ್ಮ ಆ ಮಾತಿಗೆ ಏನೂ ಉತ್ತರ ಕೊಡಲಿಲ್ಲ.

' ಆಯ್ತು, ಹಾಗಾದ್ರೆ ನಾನು ಈರಮ್ಮನ ಹತ್ತಿರ ಮಾತಾಡಿ ಏನಾಯ್ತೂಂತ ಬಂದು ಹೇಳ್ತೀನಿ. ನೀನೇನೂ ಹೆದರ್ಕೋಬೇಡ, ರತ್ನಕ್ಕ

ನಾನಿನ್ನು ಬರಲೆ........'

—ಎಂದವನು—

' ಅಂದ್ಹಾಗೆ....ಯಾಕೋ ಬಾಳ ಬಾಯಾರಿಕೆ ಆಗ್ತದೆ, ಒಂದ್ಲೋಟ ನೀರು ಕೊಡು'

—ಎಂದು ಕೇಳಿದ.

ರತ್ನಕ್ಕ ಮಾತಾಡದೆ, ಎದ್ದು ಒಳಗೆ ಹೋಗಿ, ಒಂದು ತಂಬಿಗೆಯಲ್ಲಿ ಕುಡಿಯುವ ನೀರನ್ನು ತಂದು ಚಿನ್ನೋಬಯ್ಯನ ಮುಂದಿಟ್ಟು ಒಳಗೆ ಮರೆಯಾದಳು.

ಒಂದೇ ಒಂದುಗಳಿಗೆ ತನ್ನ ಮುಂದೆ ಬಂದು ಮರೆಯಾದ ರತ್ನಕ್ಕನ ಮುಖವನ್ನು ನೋಡಿ ಚಿನ್ನೋಬಯ್ಯ ತಂಬಿಗೆಯಲ್ಲಿದ್ದ ನೀರನ್ನು ಎತ್ತಿ ಗಂಟಲಿಗೆ ಸುರಿದುಕೊಂಡ.

ಅವನ ಮನಸ್ಸು ದೂರದ ಅಸ್ಪಷ್ಟ ಚಿತ್ರವನ್ಯಾವುದನ್ನೋ ಕಂಡು ತೃಪ್ತಿಪಟ್ಟಿತು. ' ಇರಲಿ ' ಎಂದು ತೇವವಾದ ಮೀಸೆಯನ್ನು ಸಂಚೆಯ ಕುಡಿಯಿಂದ ಒರಸಿಕೊಂಡು—

' ಹಂಗಾದ್ರೆ ನಾನು ಬರ್ತೀನಿ ರತ್ನಕ್ಕ '

—ಎಂದು ಹೇಳಿ ಹೊರಗೆ ಹೊರಟ.

ಅವನು ಹೋದ ಬಳಿಕ ತಲೆ ಬಾಗಿಲನ್ನು ಹಾಕದೆ, ರತ್ನಮ್ಮ ಕುಳಿತಲ್ಲಿಯೇ ಕುಳಿತಿದ್ದಳು. ಏಕೋ ಅವಳ ಬುದ್ಧಿ ಬರಿದಾಗಿ, ಎದೆಯಲ್ಲಿ ಭೀತಿತುಂಬಿದ ಶೂನ್ಯ ಆವರಿಸಿತ್ತು. ಅವಳ ಹೃದಯದೊಳಗಿನ ಸುಪ್ತ ಧ್ವನಿಯೊಂದು, ರಚ್ಚೆ ಹಿಡಿದು ಅವಳನ್ನು ಕೇಳುತ್ತಿತ್ತು—

' ಈಗ ನೀನು ಮಾಡಿದುದು ಸರಿಯಾಯಿತೇ ? '—ಎಂದು.

ಆ ಪ್ರಶ್ನೆಗೆ, ರತ್ನಮ್ಮ ಉತ್ತರ ಹೇಳುವ ಸ್ಥಿತಿಯಲ್ಲಿರಲಿಲ್ಲ.

' ದೇವರೇ, ನೀನೇ ನನಗೆ ದಿಕ್ಕು'

—ಎಂದು ಕಾಣದ ದೇವರಿಗೆ ಕೈಮುಗಿದು, ನೆಲಕ್ಕೆ ಕೀಲಿಸಿದಂತೆ ಕುಳಿತಿದ್ದಳು.

## ೧೨

ಈರಮ್ಮನಅಂಗಡಿಯ ಮುಂದಿನ ಓಣಿಯಲ್ಲಿ ರಾಘಣ್ಣ ಬರುತ್ತಿರವಾಗ, ಅಂಗಡಿಯಲ್ಲಿ ಕುಳಿತಿದ್ದ ಈರಮ್ಮ ರಾಘಣ್ಣನತ್ತ ನೋಡಿ, ಕಿಸಿ ಕಿಸಿ ನಕ್ಕು—

'ಇಷ್ಟುದಿನ ಹಾರಾಡಿದ್ದಾಯ್ತು. ಇನ್ನೇನು ಪಾರಾಡ್ತಾನೊ ಹಾರಾಡ್ಲಿ'

—ಎಂದು ಅವನ ಕಿವಿಗೆ ಬೀಳುವಂತೆ ಹೇಳಿ ನಕ್ಕಳು.

ಅವಳ ಮಾತು, ನಗು ಯಾವುದೂ ರಾಘಣ್ಣನಿಗೆ ಅರ್ಥವಾಗಲಿಲ್ಲ. ಆ ನಗು ಅವನ ಕಿವಿಯಲ್ಲಿ ಕಾದ ಸೀಸದ ರಸದಂತೆ ಬಿದ್ದು, ಅವನನ್ನು ಕೆರಳಿಸಿತು. ಆದರೂ, ತನ್ನನ್ನೇ ಕುರಿತು ಆಡಿದರೂ, ಬೇರಾರಿಗೋ ಹೇಳಿದಂತೆ ಹೇಳಿದ ಆ ಮಾತಿಗೆ ಉತ್ತರ ಕೊಡಲಾಗದೆ, ಹಿಂದಿನ ದಿನದಂತೆ ಮತ್ತೊಂದು ಹಗರಣವನ್ನು ಮಾಡಲು ಇಚ್ಛೆಯಿಲ್ಲದೆ, ಆ ಮಾತು ಕೇಳಿಸಿಯೂ ಕೇಳಿಸದವನಂತೆ ಮುಂದೆ ನಡೆದ, ಏಕೆಂದು ಅರ್ಥವಾಗದ ನಗು, ಹಿನ್ನೆಲೆ ತಿಳಿಯದ ಮಾತು, ಮುಳ್ಳಿನ ಮೊನೆಯಂತೆ ಅವನ ಮಿದುಳನ್ನು ಇರಿಯುತ್ತಿತ್ತು. ಹಿಂದಿನ ದಿನ ಅಂಗಡಿಯ ಬಳಿ ಗದ್ದಲವಾದ ಬಳಿಕ ಈರಮ್ಮ ಸ್ವಲ್ಪ ದಿನವಾದರೂ, ಮತ್ತೆ ನಾಲಗೆಯನ್ನು ಹಗುರಮಾಡದೆ ಅಡಗಿಕೊಂಡಿರಬಹುದು ಎಂದು ನಿರೀಕ್ಷಿಸಿದ್ದ ರಾಘಣ್ಣ . ಆದರೆ ಅವನ ನಿರೀಕ್ಷೆ ವಿಫಲವಾದುದೇ ಅಲ್ಲದೆ, ಈರಮ್ಮನ ರೀತಿಯನ್ನು ನೋಡಿದರೆ, ಅವಳಿಗೆ ಮತ್ತಾವುದೋ ಹೊಸ ಬಲ ಬಂದಿರುವಂತಿತ್ತು. ಅದಿಲ್ಲದೆ, ಅವಳು ತನ್ನನ್ನು ಈ ರೀತಿ ಕೆಣಕುವ ಸಾಹಸ ಮಾಡುತ್ತಿರಲಿಲ್ಲ. ಅಂಥ ಬಲ ಅವಳಿಗೆ ಎಲ್ಲಿಂದ ಬಂದಿರಬಹುದು, ಯಾರು ಅವಳಿಗೆ ಬೆಂಬಲವಾಗಿ ನಿಂತಿರ

ಬಹುದು, ತನಗೆ ತಿಳಿಯದ ಹಾಗೆ ಮತ್ತೇನು ನಡೆದಿರಬಹುದು ಎಂದು ಚಿಂತಿಸುತ್ತಲೇ ಹೆಜ್ಜೆ ಹಾಕಿದ. ಆ ಚಿಂತೆಗಿಂತ ಹೆಚ್ಚಾಗಿ, ಅವಳ ಕೆಣಕು ನಗು ಅವನ ಹೃದಯವನ್ನು ಛೇದಿಸಿ, ಸಿಟ್ಟನ್ನು ಕೆರಳಿಸುತ್ತಿತ್ತು. ಸಿಟ್ಟು-ಚಿಂತೆಗಳಲ್ಲಿ ತೂಗುಯ್ಯಾಲೆಯಾಡುತ್ತಾ, ತಲೆ ತಗ್ಗಿಸಿ ನಡೆದ.

ಈರಮ್ಮನ ಅಂಗಡಿಯಿಂದ ಅಷ್ಟುದೂರ ನಡೆದು, ಮುಂದೆ ಬಂದರೆ ಚೆನ್ನೋಬಯ್ಯನ ಮನೆ. ಮನೆಯ ಮುಂದೆ, ಕರುವಿನ ಮೈಯಲ್ಲಿದ್ದ ಉಣ್ಣೆಯನ್ನು ಹುಡುಕಿ ಕೀಳುತ್ತಿದ್ದ ಚೆನ್ನೋಬಯ್ಯ ರಾಘಣ್ಣನನ್ನು ನೋಡಿ—

'ಏ, ರಾಘಣ್ಣ, ಸ್ವಲ್ಪ ಹಿಂಗೇ ಬಂದ್ಹೋಗು'

—ಎಂದು ಕೂಗಿದ.

'ಈಗ ನನಗೆ ಪುರುಸೊತ್ತಿಲ್ಲ. ಇನ್ನೊಂದ್ಸಲ ಬರ್ತೀನಿ'

—ಈರಮ್ಮನ ನಗೆಯಿಂದ ಇರಿಸುಮುರಿಸಾದ ಮನಸ್ಸಿನ ರಾಘಣ್ಣ, ಚೆನ್ನೋಬಯ್ಯನೊಂದಿಗೂ ಮಾತಾಡಲು ಮನಸ್ಸಿಲ್ಲದೆ ಅಷ್ಟೇ ಹೇಳಿ, ಹಾಗೇ ಮುಂಪಕ್ಕೆ ನಡೆದ.

'ನನ್ನ ಕೆಲಸಕ್ಕೇನು ಕರೀತಾ ಇಲ್ಲ. ನಿನ್ನ ಕೆಲಸಕ್ಕೇ ಕರೀತಾ ಇರೋದು. ಒಂದು ಗಳಿಗೆ ಬಂದ್ಹೋಗು. ಹೇಳೋ ಮಾತಿದೆ.'

—ಎಂದು ಚೆನ್ನೋಬಯ್ಯ, ರಾಘಣ್ಣನನ್ನು ಹೋಗಲು ಬಿಡದೆ ಬಲವಂತಮಾಡಿದ.

ಅವನು ಅಷ್ಟು ಕರೆದ ಮೇಲೂ ಹೊತ್ತಿಲ್ಲವೆಂದು ಹೇಳಿ ಮುಂದೆ ಹೋಗಲಾಗದೆ ರಾಘಣ್ಣ ಮುಂದೆ ನಡೆಯುತ್ತಿದ್ದ ಕಾಲುಗಳನ್ನು ಚೆನ್ನೋಬಯ್ಯನ ಮನೆಯುತ್ತ ತಿರುಗಿಸಿ ಕಟ್ಟೆಯ ಮೇಲೆ ಕುಳಿತು—

'ಏನು ಸಮಾಚಾರ?'

—ಎಂದು, ಅವನು ಹೇಳುವ ಸುದ್ದಿಯಲ್ಲಿ ತನಗೆ ಆಸಕ್ತಿ ಇಲ್ಲವೆನ್ನುವ ಧ್ವನಿಯಲ್ಲಿ ಕೇಳಿದ.

'ಇನ್ನೇನು ಸಮಾಚಾರ. ಊರು ತುಂಬಾ ನಿನ್ನದೇ ಸಮಾಚಾರ ಆಗಿ ಹೋಗಿದೆ'

'ಹಾಗೇ. ಏನು?'

'ಏನೊಂದೆ, ಏನು ಹೇಳೋದು ರಾಘಣ್ಣ. ಎಲ್ಲಾ ಬಿಟ್ಟು ಈರ

ಮ್ಮನ್ನ ಕೆಣಕಲಿಕ್ಕೆ ಹೋಗೊದೇ ನೀನು ? '

'ನೀನು ಹಾಗೆ ಮಾಡಬಾರದಿತ್ತು' ಎಂದು ಸೂಚಿಸುವ ಅಧಿಕಾರ ವಾಣಿಯಲ್ಲಿ ಕೇಳಿದ ಚಿನ್ನೋಬಯ್ಯ.

'ಈರಮ್ಮನ್ನ ನಾನು ಕೆಣಕಿದೆನೇ ? ಯಾರು ಹೇಳಿದರು ನಿನಗೆ ? '

—ತನಗೆ ಆ ಸುದ್ದಿಯೇ ತಿಳಿಯದೆಂಬಂತೆ ಕೇಳಿದ ರಾಘಣ್ಣ,

'ಯಾರು ಹೇಳೊದೇನು ? ಊರೆಲ್ಲಾ ಅದೇ ಗುಲ್ಲಾಗಿದೆ. ಹೋ ಅಂತ ಅತ್ತಾ ಈರಮ್ಮನೇ ನನ್ನ ಹತ್ತಿರ ಬಂದಿದ್ದಳು.'

'ಹಾಗಾದರೆ ಎಲ್ಲಾ ವಿಷಯ ನಿನಗೂ ತಿಳಿದಿರಬೇಕಲ್ಲಾ ? '

'ಹೂ. ಎಲ್ಲಾ ವಿಷಯಾನೂ ತಿಳೀತು.'

'ಹಾಗಾದರೆ ಎಲ್ಲಾ ತಿಳಿದ ಮೇಲೆ ನನ್ನ ಕೇಳೋದು ಏನಿದೆ ? '

—ಆ ಮಾತನ್ನು ಅಲ್ಲಿಗೇ ಮುಗಿಸಲೆತ್ನಿಸಿ ಕೇಳಿದ ರಾಘಣ್ಣ.

'ಹಂಗಂದ್ರೆ ಆಗ್ಲೋಯ್ತಾ. ಎಲ್ಲಾ ತಿಳಿದೋನು ನೀನು ಹೀಗೆಮಾಡ್ಬಾರ್ದಾಗಿತ್ತು. ತಿಳ್ದೂ ತಿಳ್ದೂ, ಅವಳನ್ನ ಕೆಣಕಿ ನಿನ್ನ ಮರ್ಯಾದೆ ಕಳೆದು ಕೊಳ್ಳೋದರಲ್ಲಿ ಏನು ಅರ್ಥ ಇದೆ ಹೇಳು. ಮೊದಲೇ ಅದು ಕೆಟ್ಟ ನಹ ವಾಸ. ಅದನ್ನು ಎಷ್ಟು ಹುಷಾರಾಗಿ ಕಡಿಮುಕೋ ಬೇಕೋ ಅಷ್ಟು ಹುಷಾ ರಾಗಿ ಕಡಿಮುಕೋ ಬೇಕು. ಅದು ಬಿಟ್ಟು ವಬಾದುಬಿಗೇ ಇಳಿದರೆ ಯಾರು ಕೇಳ್ತಾರೆ ಹೇಳು ? ಅದರಲ್ಲೂ ನೀನು....ಊರಿನಲ್ಲಿ ದೊಡ್ಡಮನುಷ್ಯ ಅನ್ನಿ ಸಿಕೊಂಡೋನು ನೀನೇ ಹೀಗೆ ಮಾಡಿದರೆ, ನಾಳೆ ಹಳ್ಳೀಲಿರೋ ಪುಂಡರು ಪೋಕರಿಗಳು ಮತ್ತಷ್ಟು ಕುಣೀತಾರೆ. ಹಾಗಾದ ಮೇಲೆ ನಾವೆಲ್ಲಾ ಊರಿಗೆ ಮುಖ್ಯಸ್ಥರು ಅನ್ನಿಸಿಕೊಂಡು ಇದ್ದರೆಷ್ಟು ಸತ್ತರೆಷ್ಟು ಅಂದ ಹಾಗಾಗುತ್ತೆ. ಅದೆಲ್ಲಾ ಚಂದಾಕಿಲ್ಲ, ಏನೋ ನೀನು ನನಗೆ ಬೇಕಾದೋನು, ರತ್ನಕ್ಕನೂ ಹೊರಗಿನವಳಲ್ಲ ಅಂತ ಈರಮ್ಮನಿಗೆ ಸಮಾಧಾನ ಹೇಳಿ ಕಳಿಸಿದೆ- ಸುಮ್ಮನೆ ಊರು ಪಂಚಾಯ್ತಿ ಆಗೋದು ಯಾಕೆ ಅಂತ.'

'ಈರಮ್ಮ ಪಂಚಾಯಿತಿ ಮಾಡಿಸಬೇಕು.ಅಂತ ಇದ್ದಳೆ ? '

—ಗಡುಸಾದ ಧ್ವನಿಯಲ್ಲಿ ಕೇಳಿದ ರಾಘಣ್ಣ.

'ಹೂ, ಅವಳ ಅಂಗಡೀ ಮುಂದೇ ಅವಳ ಮರ್ಯಾದೆ ತೆಗೆದರೆ ಬಿಡ್ತಾಳೆಯೇ ? '

‘ ಇರಬಹುದು. ಇಷ್ಟೆಲ್ಲಾ ಗಲ್ಲಾಟೆ ಯಾಕಾಯ್ತು ಅಂತ ಅವಳನ್ನು ಕೇಳಿದೇನು ? ’

‘ ಕೇಳಿದೆ. ಎಲ್ಲಾ ತಿಳೀತು.’

‘ ತಿಳಿದಿದ್ಮೇಲೆ ನನ್ನದೇ ತಪ್ಪು ಅಂತೀಯ.’

‘ ಹೌದು ’

‘ ನಿಜವಾಗಿಯೂ....? ’

—ಚಿನ್ನೋಬಯ್ಯನ ಮಾತನ್ನು ನಂಬಲಾಗದವನಂತೆ ಕೇಳಿದ ರಾಘಣ್ಣ.

‘ ಹೌದೂಂದೆ. ಅವರು ಕೊಟ್ಟ ದುಡ್ಡಿನ ಬಂದೋಬಸ್ತಿಗೆ ಅವರು ಬೇಕಾದ್ದು ಕೇಳ್ತಾರೆ. ದುಡ್ಡು ಕೊಟ್ಟೋರ ಕಷ್ಟ ಸುಖ ಕೊಟ್ಟೋರಿಗೆ ಗೊತ್ತು. ಅದು ನಿನಗೆ ಒಪ್ಪಿಗೆ ಆದ್ರೆ ಆಗ಼್ಿ ಅನ್ನ ಬೇಕಾಗಿತ್ತು. ಇಲ್ಲಾಂದ್ರೆ ಅವರ ದುಡ್ಡನ್ನ ಹೇಗೆ ತಗೊಂಡು ಹೋಗಿದ್ರೋ ಹಾಗೆ ಕೊಡಬೇಕಾಗಿತ್ತು. ಕೊಡೋ ದುಡ್ಡೂನೂ ಕೊಡದೆ, ಗಂಟುಕಳ್ಳ ವ್ಯಾಜ್ಯ ಮಾಡಿ, ಸಾಲ ಕೊಟ್ಟೋರಿಗೆ, ಹಾಗೆ ಮಾಡ್ತೀನಿ, ಹೀಗೆ ಮಾಡ್ತೀನಿ ಅಂತ ಬೆದರಿಸಿದರೆ, ದೊಡ್ಡ ಮನುಷ್ಯ ಆದದ್ದಕ್ಕೆ ಸಾರ್ಥಕ ಆಯ್ತಾ ? ಇದೆಲ್ಲಾ ಮರ್ಯಾದೆ ಅಲ್ಲ.’

—ರಾಘಣ್ಣನ ಮುಖದ ಮೇಲೆ ಹೊಡೆದಂತೆ ಹೇಳಿದ ಚಿನ್ನೋಬಯ್ಯ.

ಈರಮ್ಮನ ಕೆಣಕು ನಗೆಯಿಂದ ಮೊದಲೇ ಖಾರವಾಗಿದ್ದ ರಾಘಣ್ಣನ ಪಿತ್ತ, ಚಿನ್ನೋಬಯ್ಯನ ದಂಡಿಸುವ ಮಾತುಗಳನ್ನು ಕೇಳಿ ಉರಿಯಿತು. ಒಳಗಿನ ಉದ್ವೇಗದಿಂದ ಮುಖ ಕೆಂಪಾಯಿತು.

‘ ಅಷ್ಟೇನೋ. ಮುಗೀತೋ ನಿನ್ನ ಮಾತು, ಅಥವಾ ಇನ್ನೂ ಏನಾದರೂ ಇದೆಯೋ ? ’

—ಎಂದು ಸಿಡಿದು ಕೇಳಿದ.

‘ನೀನೇ ಆಗಿದ್ರೆ ಅಷ್ಟೇ ಆಗಿತ್ತು. ಪಂಚಾಯ್ತಿಗೇ ಇದು ಏನಾಗ್ತದೋ ಆಗಲಿ ಎಂದು ಹೇಳಿ, ಒಂದು ಸಲವಾದರೂ ನಿನಗೆ ಬುದ್ಧಿ ಕಲಿಸುವ ಹಾಗೆ ಮಾಡುತ್ತಿದ್ದೆ, ಆದ್ರೆ—ಇದರಲ್ಲಿ ನೀನು ಮುಖ್ಯ ಅಲ್ಲ.’

—ಆ ಮಾತು ಅಲ್ಲಿಗೇ ಮುಗಿಯಲಿಲ್ಲವೆಂಬಂತೆ, ಮತ್ತಷ್ಟು ಕಟು

ವಾದ ಧ್ವನಿಯಲ್ಲಿ ಹೇಳಿದ ಚಿನ್ನೋಬಯ್ಯ.

'ನಾನಲ್ಲ. ಇನ್ನು ಯಾರು ಮುಖ್ಯ'

'ಏನೂ ತಿಳೀದ ಹೆಂಗಸು ರತ್ನಕ್ಕ. 'ದೊಡ್ಡ ಮನಷ್ಯ. ನಿನ್ನನ್ನ ನಂಬಿಕೊಂಡರೆ ಎಲ್ಲಾ ಕೆಲಸಾನು ಮಾಡಿಕೋಡ್ತೀಯ' ಅಂತ ಎಲ್ಲಾ ಜವಾಬ್ದಾರಿನೂ ನಿನ್ನ ಮೇಲೆ ಹಾಕಿದರೆ, ಹೀಗಾ ನೀನು ಮಾಡೋದು. ಮನೇಲ್ಲ, ತನ್ನ ಪಾಡಿಗೆ ತಾನು ರಾಮ ಕೃಷ್ಣ ಅಂದುಕೊಂಡಿದ್ದೋಳನ್ನ ಬೀದಿಗೆ ತರೋ ಅಂಥ ಕೆಲಸಾನಾ ನೀನು ಮಾಡೋದು. ನಿನ್ನ ನೆಚ್ಚಿಕೊಂಡಿದ್ದರೆ ನಿನ್ನ ಜೊತೇಲಿ ರತ್ನಕ್ಕನೂ ಬೀದಿಗೆ ಬರಬೇಕಾಗಿತ್ತು. ಸದ್ಯ–ಈರಮ್ಮ ನನ್ನ ಹತ್ತಿರ ಬಂದದ್ದಕ್ಕೆ ಬದುಕಿಕೊಂಡಳು. ಇದರಲ್ಲಿ ರತ್ನಕ್ಕನ ದೇನೂ ತಪ್ಪಿಲ್ಲ, ಎಲ್ಲಾ ನಿನ್ನದೇ ಕಿತಾಪತಿ ಅಂತ ನನಗೆ ಮೊದಲೇ ಅನುಮಾನ ಇತ್ತು. ಹಾಗೇ ಆಯ್ತು.'

ಧ್ವನಿಯನ್ನು ಮತ್ತಷ್ಟು ಏರಿಸಿ ಹೇಳಿದ ಚಿನ್ನೋಬಯ್ಯ.

'ಹೂ. ಮುಂದೆ........'

ಹಲ್ಲು ಕಡಿಯುತ್ತಾ ಕೇಳಿದ ರಾಘಣ್ಣ.

'ರತ್ನಕ್ಕ ಏನು ನಾನು ಕಾಣದೋಳೇ. ಆಕೇನೇ ಹೋಗಿ ಕೇಳಿದೆ ಇದೆಲ್ಲಾ ಏನು ರಾದ್ಧಾಂತ ಅಂತ. 'ನನಗೇನೂ ತಿಳೀದು. ಎಲ್ಲಾ ರಾಘಣ್ಣನಿಗೇ ಬಿಟ್ಟಿದೀನಿ' ಅಂದಳು. ಆಗ ನಿನ್ನ ಬಣ್ಣ ಎಲ್ಲಾ ಬಯಲಿಗೆ ಬಂತು.'

'ಏನು ಬಣ್ಣ ಬಯಲಿಗೆ ಬಂತು ?'

'ವಿಠೋಬ, ಅಕಸ್ಮಾತ್ತಾಗಿ ಶಾನುಭೋಕಿ ಮಾಡಿಕೊಂಡರೆ ನಿನಗೆ ಬರೋದು ತಪ್ಪಿ ಹೋಗುತ್ತೇಂತ ಇಷ್ಟೆಲ್ಲಾ ಆಟ ಕಟ್ಟಿದೀ ಅಲ್ವೆ? ವಿಠೋಬ ರತ್ನಕ್ಕನ್ನ ಹಾಳು ಮಾಡ್ತಾ ಇದ್ದ. ನೀನು ಉದ್ಧಾರ ಮಾಡ್ತಾ ಇದೀಯ. ಇದೇ ಅಲ್ವಾ ಉದ್ಧಾರ ಮಾಡೋರ ಲಕ್ಷಣ.'

—ರಾಘಣ್ಣನ ಮುಖಕ್ಕೆ ಅಪ್ಪಳಿಸಿದಂತೆ ಕೇಳಿದ ಚಿನ್ನೋಬಯ್ಯ. ಆ ಮಾತು ಕೇಳಿ ರಾಘಣ್ಣನಿಗೆ ಕೂಡಲೇ ಚಿನ್ನೋಬಯ್ಯನ ಮುಖದ ಮೇಲೇ ಹೊಡೆಯ ಬೇಕು ಎನ್ನಿಸಿತು. ಆದರೆ ಅಷ್ಟು ದೂರಕ್ಕೆ ಹೋಗಲು ಇಚ್ಛೆಯಿಲ್ಲದೆ, ಬಿಗಿಯುತ್ತಿದ್ದ ಮುಷ್ಟಿಯನ್ನು ತಡೆಹಿಡಿದು—

‘ ನಿನಗ್ಯಾಕೊ ಬೆಳಗ್ಗೆ ಎದ್ದು ಜಗಳ ಮಾಡಬೇಕು ಅಂತಲೇ ಇರೋ ಹಾಗಿದೆ. ಆದರೆ ನನಗೆ ಅದು ಇಷ್ಟವಿಲ್ಲ. ನಾನೊಂದು ಮಾತು ಹೇಳ್ತೀನಿ ಕೇಳ್ತೀಯೊ ಚಿನ್ನೋಬಯ್ಯ....’

—ಎಂದ ಸಿಟ್ಟಿನಿಂದ ಬಿರುಸಾದ ಧ್ವನಿಯಲ್ಲಿ.

‘ ಏನು ? ’

‘ ನೀನು, ನಿನ್ನ ವಿಠೋಬ, ಈರಮ್ಮ—ನೀವು ಏನು ಬೇಕಾದ್ರೂ ಮಾಡಿಕೊಳ್ಳಿ. ಅದಕ್ಕೆ ನಾನು ಅಡ್ಡಿ ಬರೋದಿಲ್ಲ. ಪಂಚಾಯ್ತೀನಾದರೂ ಮಾಡಿಸಿ, ದಶಾಯಿತಿನಾದರೂ ಮಾಡಿಸಿ—ಆದರೆ, ರತ್ನಮ್ಮನ ವಿಷಯಕ್ಕೆ ಮಾತ್ರ ಕೈ ಹಾಕಬೇಡ. ಅದಕ್ಕೂ ನಿನಗೂ ಸಂಬಂಧವಿಲ್ಲ.’

‘ ಆ ಮಾತು ಹೇಳೋಕೆ ನಿನಗೇನೂ ಅಧಿಕಾರವಿಲ್ಲ. ಸೀತಾರಾಮಯ್ಯ ಸತ್ತಾಗ ‘ ನೀನೊಬ್ಬನೇ ನನ್ನ ಸ್ನೇಹಿತ. ನನ್ನ ಹೆಂಡರು ಮಕ್ಕಳನ್ನೆಲ್ಲ ನಿನಗೆ ಒಪ್ಪಿಸಿದ್ದೀನಿ ’ ಅಂತೇನೂ ಬರೆದು ಕೊಟ್ಟು ಹೋಗಿಲ್ಲ. ನಿನ್ನಷ್ಟೇ ನಾವೂ ಅವನಿಗೆ ಸ್ನೇಹಿತರಾಗಿದ್ದೋರು. ಅವರ ಯೋಗಕ್ಷೇಮ ವಿಚಾರಿಸಿಕೊಳ್ಳೋಕೆ ನಿನ್ನಷ್ಟೇ ನಮಗೂ ಅಧಿಕಾರವಿದೆ. ನಿನ್ನ ಮನೆವಾರ್ತೆ ವಿಷಯಕ್ಕೆ ಬಂದಾಗ ‘ ನಿನಗೇನೂ ಅಧಿಕಾರ ಇಲ್ಲ ’ ಎಂತ ಹೇಳು. ಎಲ್ಲಾ ಕಡೇಲೂ ನಿನ್ನ ಮಾತೇ ನಡೆಯಾಕೆ ನೀನೇನು ಕಿರೀಟಪತಿಯ ಮೊಮ್ಮಗನಲ್ಲ.’

‘ ಇರಬಹುದು. ಸೀತಾರಾಮಯ್ಯ ಏನೂ ಬರದಿಟ್ಟು ಹೋಗದೇ ಇರಬಹುದು. ಆದರೆ ರತ್ನಮ್ಮ ಆ ಜವಾಬ್ದಾರೀನ ನನಗೆ ವಹಿಸಿಕೊಟ್ಟಿದ್ದಾಳೆ.’

‘ ನಿನ್ನೊಬ್ಬನಿಗೇನೇ ? ’

‘ ಹೌದು—ನನ್ನೊಬ್ಬನಿಗೇನೆ.’

—ಸವಾಲು ಹಾಕುವ ಧ್ವನಿಯಲ್ಲಿ ಹೇಳಿದ ರಾಘಣ್ಣ.

‘ ನಿನಗೆ ಬೇಕಾದ ಹಾಗೆ ನೀನು ತಿಳಿದುಕೋಬಹುದು. ಅದಕ್ಕೆ ಯಾರೇನು ಮಾಡಲಿಕ್ಕಾಗುತ್ತೆ.’

‘ ನಾನು ಹೇಳುತ್ತಿರುವುದೂ ಅದೇ. ಯಾರೂ ಏನು ಮಾಡುವುದೂ ಬೇಕಾಗಿಲ್ಲ.’

‘ ಹಾಗಂತ ರತ್ನಕ್ಕ ಹೇಳಲಿಲ್ಲವಲ್ಲ.’

‘ ಮತ್ತೇನು ಹೇಳಿದಳು ? ’

—ಚಿನ್ನೋಬಯ್ಯನ ಮಾತು ಕೇಳಿ ಚಕಿತನಾಗಿ ಕೇಳಿದ ರಾಘಣ್ಣ.

‘ ಏನು ಹೇಳೋದು. ಬುದ್ಧಿ ಇದ್ದೋರು ಹೇಳುವಂಥ ಮಾತೇ ಹೇಳಿದಳು. ನಿನ್ನ ಹಾಗೆ ಆಕೆ ಊರಿನಲ್ಲಿ ಎಲ್ಲರ ದ್ವೇಷಾನೂ ಕಟ್ಟಿಕೊಳ್ಳ ಲಿಕ್ಕೆ ತಯಾರಾಗಿಲ್ಲ. ಎಲ್ಲಾ ಬೇಕಾದೋರೇ, ನೀವೆಲ್ಲಾ ಹೇಗೆ ಹೇಳಿದರೆ ಹಾಗಾಗಲಿ ಅಂತ ಹೇಳಿದಳು.’

‘ ನಿಜವಾಗಿಯೂ.’

—ರಾಘಣ್ಣ ಚಿನ್ನೋಬಯ್ಯನ ಮಾತನ್ನು ನಂಬಲಾಗದೆ ಕೇಳಿದ.

‘ ಬೇಕಾದರೆ ರತ್ನಕ್ಕನ್ನೇ ಹೋಗಿ ಕೇಳು. ನಾನೇ ಎಲ್ಲಾ ಸುದ್ದೀನೂ ಹೇಳಿದೆ. ‘ರಾಘಣ್ಣ ಹೀಗೆಲ್ಲಾ ಮಾಡ್ತಾನೇಂತ ನನಗೆ ಗೊತ್ತಿರಲಿಲ್ಲ. ಏನೋ ಆಗಿ ಹೋಯಿತು. ನೀವೂ ಅವರಷ್ಟೇ ಬೇಕಾದವರು. ನೀವೆಲ್ಲಾ ಹೇಗೆ ಹೇಳಿದರೆ ಹಾಗೆ ಕೇಳ್ತೀನಿ ’ ಅಂದಳು. ಗೊತ್ತಾಯ್ತೆ. ಇಲ್ಲಿ ನೋಡು ರಾಘಣ್ಣ—ಇವತ್ತೊಂದು ಮಾತು ಹೇಳ್ತೀನಿ ಕೇಳು. ಇವತ್ತಿಗೆ ಆದದ್ದು ಆಗಿ ಹೋಯ್ತು. ರತ್ನಕ್ಕನ ಮುಖ ನೋಡಿಕೊಂಡು, ಸತ್ತೋನ ಸ್ನೇಹ ನೆನಸಿಕೊಂಡು, ಇದು ಮತ್ತಷ್ಟು ಕೆದರಿಕೊಳ್ಳದ ಹಾಗೆ ಮಾಡಿದ್ದೇನೆ. ಆಯಿತೇ. ಇನ್ನು ಮುಂದಾದರೂ ಊರಿಗೆಲ್ಲಾ ಕೋಡಿರೋನು ನಾನೊಬ್ಬನೇ ಅನ್ನೋ ಹಾಗೆ ಮೆರೆಯೋದನ್ನ ಬಿಟ್ಟುಬಿಡು. ಹಾಗೆ ಮಾಡಿದರೆ ಮರ್ಯಾದೆ ಬರೋದಿಲ್ಲ, ಒಳ್ಳೇ ತಂದೆತಾಯಿ ಮಗ. ಅವರಿಗೆ ಹೆಸರು ಬರೋ ಹಾಗೆ ನಡೆದುಕೊ. ಬರೀ ದಬಾದುಬಿ ಮಾಡಿ, ನೀನೂ ಕೆಟ್ಟು ಅವರಿಗೂ ಕೆಟ್ಟ ಹೆಸರು ತರಬೇಡ.’

—ಎಂದ ಚಿನ್ನೋಬಯ್ಯ, ತಪ್ಪುಮಾಡಿದ ಸಣ್ಣ ಹುಡುಗರಿಗೆ ಬೈಯ್ದು ಹೇಳುವ ಹಾಗೆ.

ಅವನ ಮಾತಿಗೆ ರಾಘಣ್ಣ ಏನೂ ಉತ್ತರಕೊಡಲಿಲ್ಲ. ಒಂದುಗಳಿಗೆ ಸುಮ್ಮನೆ ಚಿನ್ನೋಬಯ್ಯನ ಮುಖವನ್ನು ದುರುಗುಟ್ಟಿ ನೋಡಿ, ಮರುಗಳಿಗೆಯೇ ತಲೆಯನ್ನು ತಗ್ಗಿಸಿ, ಬಿರುಗಾಳಿ ಬೆನ್ನಟ್ಟಿದವನಂತೆ, ದಾಪುಗಾಲು ಹಾಕುತ್ತಾ ಮನೆಯತ್ತ ನಡೆದ. ಚಿನ್ನೋಬಯ್ಯ ದುರ್ದಾನ ತೆಗೆದು.

ಕೊಂಡಂತೆ ಹೊರಟು ಹೋದ ರಾಘಣ್ಣನತ್ತ ನೋಡಿ, ಹುಸಿನಗೆ ನಕ್ಕು, ಪಕ್ಕದಲ್ಲಿ ನಿಂತಿದ್ದ ಕರುವಿನ ಬೆನ್ನು ನೇವರಿಸತೊಡಗಿದ.

# ೧೩

ಮನೆಗೆ ಬಂದವನೇ, ಎಂದಿನಂತೆ ಕೈಕಾಲು ತೊಳೆದುಕೊಂಡು ಊಟಕ್ಕೇಳದೆ, ಮೈಮೇಲಿದ್ದ ಕೋಟನ್ನು ತೆಗೆದು, ರೊಯ್ಯನೆ ಒಂದು ಮೂಲೆಗೆ ಬಿಸುಟು, ಯಾವ ಮಾತೂ ಆಡದೆ, ಸುಮ್ಮನೆ ನಡುಮನೆಯ ಕಂಭಕ್ಕೆ ಒರಗಿಕೊಂಡು ಬೀಡಿಸೇದುತ್ತಾ ಕುಳಿತ ಮಗನನ್ನು ಕಂಡು ಕಮಲಮ್ಮನಿಗೆ ಆಶ್ಚರ್ಯವಾಯಿತು. ಅವನ ಕೆಂಪೇರಿದ ಮುಖ, ತಿದಿಯಂತೆ ಒತ್ತುತ್ತಿದ್ದ ಮೂಗಿನ ಹೊಳ್ಳೆಗಳು, ನೋಡಿದವರು ಭಯಪಡುವಂತೆ ಹೊಳೆಯುತ್ತಿದ್ದ ಅವನ ಕಣ್ಣುಗಳನ್ನು ಕಂಡು ಕಮಲಮ್ಮನಿಗೆ 'ಏನಾಗಿರಬಹುದು' ಎಂದು ಆಶ್ಚರ್ಯದೊಂದಿಗೆ ಚಿಂತೆಯೂ ಆಯಿತು.

'ಯಾಕೋ ರಾಘು ಹೀಗಿದೀಯ ?'

—ಎಂದು ಆಕೆಯೇ ಬಾಯಿ ಬಿಟ್ಟು ಕೇಳಿದರೂ ರಾಘಣ್ಣ ಆ ಪ್ರಶ್ನೆಯೇ ತನ್ನ ಕಿವಿಯ ಮೇಲೆ ಬೀಳದಂತೆ ಇದ್ದುಬಿಟ್ಟ. ಏಕೋ ಅವನ ಮನಸ್ಸಿಗೆ ಸಮಾಧಾನವಿಲ್ಲ, ಸುಮ್ಮನೆ ಕೆಣಕಿ ಕೇಳುವುದೇಕೆ, ಹೇಳುವ ವಿಷಯವಾದರೆ ಅವನೇ ಹೇಳುತ್ತಾನೆ ಎಂದುಕೊಂಡು ಕಮಲಮ್ಮ ಸುಮ್ಮನಾದರೂ, ಬಿಸಿಲಿನಲ್ಲಿ ಸುತ್ತಾಡಿ ಬಂದವನು ಊಟ ಮಾಡದೆ ಸುಮ್ಮನೆ ಕುಳಿತಿದ್ದವನ್ನು ಕಂಡು ಆಕೆಯ ತಾಯಿಕರಳು ತಡೆಯಲಿಲ್ಲ.

'ಯಾವುದು ಎಲ್ಲಾದರೂ ಹೋಗಲಿ, ಊಟಕ್ಕೇಳು.'

—ಎಂದು ಮಗನನ್ನು ಆ ಚಿಂತೆಯ ಬಲೆಯಿಂದ ಬಿಡಿಸಲು ಯತ್ನಿಸಿದಳು.

‘ ಊಟ....ಊಟ....ಊಟ....ಮೂರುಹೊತ್ತೂ ನಿನಗೆ ಊಟದ ಚಿಂತೆಯೇ ಆಯಿತು. ಬೆಂಕಿ ಬಿತ್ತು ನಿನ್ನ ಊಟಕ್ಕೆ ಯಾರಿಗೆಬೇಕಾಗಿದೆ ಅದು.’

—ಎಂದು ಗದರಿಕೊಂಡ ರಾಘಣ್ಣ, ತನ್ನ ಪಾಡಿಗೆ ತನ್ನನ್ನೂ ಬಿಡದ ತಾಯಿಯನ್ನು ಕಂಡು.

‘ ಛಿ. ಅದೇನು ಮಾತೂಂತ ಆಡ್ತೀಯೋ. ತಪ್ಪಾಯ್ತು ಅನ್ನು. ಅನ್ನಾನ ಬೈಯೋದೂಒಂದೇ ದೇವರನ್ನ ಬೈಯೋದೂ ಒಂದೇ. ಎಲ್ಲೆಲ್ಲಿದ್ದೋ ಹಾಳಾದ ಚಿಂತೆ ಹಚ್ಚಿಕೊಂಡು ಬಂದು, ಹೊಟ್ಟೇನ ಒಣಗಿಸಿಸೋದು ಯಾವ ದೇವರಿಗೆ ಪ್ರೀತಿ. ಚಿಂತೆ ಇದ್ದರೆ, ಊಟಮಾಡಿ ಬೇಕಾದ ಚಿಂತೆ ಮಾಡಿಕೊ, ನಿನ್ನ ಚಿಂತೆಗೆ ಯಾರೂ ಅಡ್ಡಿ ಬರೋದಿಲ್ಲ ’

—ಎಂದಳು ಕಮಲಮ್ಮ.

ಆ ಮಾತಿಗೆ ಬೇರೇನೂ ಎದುರು ಹೇಳಲಾಗದೆ ಹೋಗಿ, ರಾಘಣ್ಣ ಕೈಕಾಲು ತೊಳೆದುಕೊಂಡು ಬಂದು ಎಲೆಯ ಮುಂದೆ ಕೂತ. ರಾಘಣ್ಣನಿಗೆ ಬಡಿಸಿದ ಎಲೆಯ ಪಕ್ಕದಲ್ಲೇ ಕಮಲಮ್ಮ ಪುಟ್ಟದೊಂದು ಬೆಳ್ಳಿಯ ತಟ್ಟೆಯಲ್ಲಿ ಊಟಕ್ಕೆ ಬಡಿಸಿದ್ದುದನ್ನು ಕಂಡು ರಾಘಣ್ಣ—

‘ ಇದು ಯಾರಿಗೆ ? ’

—ಎಂದು ಕೇಳಿದ.

‘ ಇನ್ನು ಯಾರಿಗೆ, ನಾರಾಯಣನಿಗೆ. ನಿನಗಿಂತ ಅವನು ಹಟಮಾರಿ ಇಲ್ಲೇ ಊಟಮಾಡಲಿ ಅಂತ ತಟ್ಟೆಹಾಕಿದರೆ, ನೀನು ಬರಲಿ ಅಂತ ಕಾದ.’

‘ ಈಗ ಎಲ್ಲಿಗೆ ಹೋದ ?’

‘ ಎಷ್ಟೊತ್ತೂಂತ ಕಾಯುತ್ತೆ ಮಗು. ಹಾಗೇ ಹಸಿದು ಮಲಗಿ ಕೊಂಡಿತು. ನೀನು ಊಟಕ್ಕೆ ಕೂತುಕೋ. ನಾನು ಅವನನ್ನು ಎಬ್ಬಿಸಿ ಕರೆದುಕೊಂಡು ಬರುತ್ತೇನೆ ’

—ಎಂದಳು ಕಮಲಮ್ಮ.

‘ ಮೊದಲು ಹೋಗಿ, ಅವನನ್ನು ಕರೆದುಕೊಂಡು ಬಂದು ಊಟ ಮಾಡಿಸು ’

—ಎಂದ ರಾಘಣ್ಣ.

ಅವನ ಮಾತಿನಂತೆ ಕಮಲಮ್ಮ ಹೋಗಿ ಮಲಗಿದ್ದ ನಾರಾಯಣ ನನ್ನು ಎಬ್ಬಿಸಿ ಕರೆದುಕೊಂಡು ಬಂದು ಅವನನ್ನು ಊಟಕ್ಕೆ ಕೂಡಿಸಿದಳು. ಹಸಿದಿದ್ದ ನಾರಾಯಣ ಕಮಲಮ್ಮ ಕಲಸಿಟ್ಟ ಅನ್ನವನ್ನು ಊಟಮಾಡಿದ. ಆದರೆ ರಾಘಣ್ಣ ಮಾತ್ರ ತಾನು ಊಟಮಾಡದೆ, ಸುಮ್ಮನೆ ಕುಳಿತಿದ್ದುದನ್ನು ಕಂಡು–

'ಯಾಕೆ ನೀನು ಊಟಮಾಡೋದಿಲ್ಲವೇ ?'

—ಎಂದು ಕೇಳಿದಳು ಕಮಲಮ್ಮ.

'ಅವನದಾಗಲಿ– ಆ ಮೇಲೆ ನಾನು ಮಾಡುತ್ತೇನೆ'

—ಎಂದ ರಾಘಣ್ಣ.

'ಇದ್ಯಾಕೋ ಇವತ್ತು ಒಂದು ಥರಾ ವಿಚಿತ್ರವಾಗಿ ಆಡ್ತಾ ಇದೀಯ– ರಾಘು. ಅವನು ಊಟ ಮಾಡ್ತಾ ಇದ್ರೆ ನಿನ್ನ ಊಟಕ್ಕೆ ಅಡ್ಡೀನೇ, ನಿನ್ನ ಪಾಡಿಗೆ ನೀನು ಊಟ ಮುಗಿಸು. ಅವನ ಪಾಡಿಗೆ ಅವನದು ಮುಗಿಯುತ್ತೆ.'

'ಸುಮ್ಮನೆ ಎಲ್ಲಾದಕ್ಕೂ ಏಕೆ, ಏನು. ಹಾಗೆ ಅಂತ ಪ್ರಶ್ನೆಕೇಳ ಬೇಡ ಅಮ್ಮ. ಒಂದು ಸ್ವಲ್ಪ ಹೊತ್ತು ನನಗೆ ಹ್ಯಾಗೆಬೇಕೋ ಹಾಗಿರೋಕೆ ಬಿಡು'

—ಎಂದು ಬೇಸರದ ಸಿಡುಕಿನ ಧ್ವನಿಯಲ್ಲಿ ಹೇಳಿದ ರಾಘಣ್ಣ.

ಎಂದೂ ಮಗನಿಂದ ಆ ರೀತಿ ಮಾತಾಡಿಸಿಕೊಳ್ಳದ ಕಮಲಮ್ಮ, ನೊಂದುಕೊಂಡು ಸುಮ್ಮನಾಗಿ ನಾರಾಯಣನಿಗೆ ಊಟಮಾಡಿಸಿ, ಕೈ-ಬಾಯಿ ತೊಳೆಸಿದಳು. ನಾರಾಯಣನ ಊಟ ಮುಗಿಯುತ್ತಿದ್ದಹಾಗೇ ರಾಘಣ್ಣ ಎದ್ದು ಹೋಗಿ, ನಾರಾಯಣನ ಅಂಗಿಯನ್ನು ತಂದುಹಾಕಿ–

'ಏಳು ಮನೆಗೆ ಹೋಗೋಣ'

—ಎಂದ.

'ಎತ್ತಿಕೊ'

—ಎಂದ ನಾರಾಯಣ.

ನಾರಾಯಣನನ್ನು ಎತ್ತಿಕೊಂಡು ರಾಘಣ್ಣ–

'ಅಮ್ಮ, ಇವನನ್ನು ಕರದುಕೊಂಡು ಹೋಗಿ, ಅವರ ಮನೇಲಿ ಬಿಟ್ಟುಬಂದು ನಾನು ಊಟಮಾಡ್ತೀನಿ. ಹಾಗೇ–ಈ ಮನೆ ಊಟಾನೇ

ಕಡೇದು ನಾರಾಯಣನಿಗೆ. ಇವತ್ತಿನಿಂದ ನಮ್ಮ ಮನೆಗೆ ಇವನು ಬರಕೂಡದು. ರತ್ನಕ್ಕನಿಗೂ ಹೇಳಿಬರುತ್ತೇನೆ.'

ಎಂದ ರಾಘಣ್ಣ ಕಟುವಾದ ಧ್ವನಿಯಲ್ಲಿ,

ಅವನಾಡಿದ ಮಾತನ್ನು ಕೇಳಿ ಕಮಲಮ್ಮನಿಗೆ ಸಿಡಿಲು ಹೊಡೆದಂತಾಯಿತು.

' ಇದೇನು ಮಾತೋ ರಾಘು........'

—ಎಂದು ಕೇಳಿದಳು.

ಆದರೆ ರಾಘಣ್ಣ ಆಕೆಯ ಪ್ರಶ್ನೆಗೆ ಉತ್ತರ ಕೊಡಲು ಅಲ್ಲಿ ನಿಲ್ಲಲಿಲ್ಲ. ಆಕೆಯ ಮಾತು ಮುಗಿಯುವುದರೊಳಗೇ ಅವನು ತಲೆ ಬಾಗಿಲನ್ನು ದಾಟಿದ್ದ.

## ೧೪

‘ ರತ್ನಕ್ಕಾ....ರತ್ನಕ್ಕಾ ’

—ಎಂದು ಕೂಗಿದ ರಾಘಣ್ಣನ ಧ್ವನಿಯನ್ನು ಕೇಳಿ, ಒಂಟಿಯಾಗೇ ಊಟಕ್ಕೆ ಕುಳಿತಿದ್ದ ರತ್ನಮ್ಮ, ಹಾಗೇ ಎದ್ದು ಬಂದು ಬಾಗಿಲನ್ನು ತೆಗೆದು—

‘ಬಾ, ರಾಘಣ್ಣ. ಕೂತುಕೊ, ಎಲೇಲಿ ಅನ್ನ ಹಾಕಿಕೊಂಡಿದೀನಿ. ಊಟ ಮಾಡಿ ಬಂದುಬಿಡ್ತೀನಿ. ಅವನ್ನ ಕೆಳಗಿಳಿಸು, ‘ ನಿನ್ನ ಊಟ ಆಯಿತೇ ? ’

—ಎಂದು ಕೇಳಿದಳು ರತ್ನಮ್ಮ.

‘ ಆ ಮಾತಿಗೆಲ್ಲ ಈಗ ಹೊತ್ತಿಲ್ಲ ರತ್ನಕ್ಕ. ನಿನ್ನನ್ನೊಂದು ಪ್ರಶ್ನೆ ಕೇಳೋದಿತ್ತು. ಅದಕ್ಕೇ ಬಂದೆ.’

—ಎಂದ ರಾಘಣ್ಣ ನಾರಾಯಣನನ್ನು ಕೆಳಕ್ಕೆ ಇಳಿಸಿ, ರತ್ನಮ್ಮನ ಮುಖ ನೋಡದೆ, ಬೇರೆತ್ತಲೋ ನೋಡುತ್ತಾ.

‘ ಅಂಥ ಅವಸರದ ಮಾತೇನು ರಾಘಣ್ಣ. ಕೂತುಕೋ. ಒಂದು ಗಳಿಗೇಲಿ ಬಂದುಬಿಡ್ತೀನಿ.’

—ಎಂದಳು ರತ್ನಮ್ಮ, ರಾಘಣ್ಣನ ಮಾತಿನ ವಿಚಿತ್ರ ಧ್ವನಿಯಿಂದ ಗಾಬರಿಯಾಗಿ.

‘ ನನ್ನ, ಪ್ರಶ್ನೆಗೆ ಉತ್ತರ ಹೇಳಿಬಿಟ್ಟು ಆಮೇಲೆ ನಿಧಾನವಾಗಿ ಊಟ ಮಾಡು ರತ್ನಕ್ಕ’

‘ಏನು ರಾಘಣ್ಣ ?’

‘ಚಿನ್ನೋಬಯ್ಯ ಇಲ್ಲಿಗೆ ಬಂದಿದ್ದನೇ ? ’

'ಯಾಕೆ ? '

'ಅದೆಲ್ಲಾ ನನಗೆ ಬೇಕಾಗಿಲ್ಲ. ಬಂದಿದ್ದನೋ ಇಲ್ಲವೋ ಹೇಳು. '

'ಹೂ. ಬಂದಿದ್ದ.'

—ಪಿಸ್ತೂಲಿನ ಗುಂಡುಗಳಂತೆ ಸಲಸಲ ಹಾರುವ ಅವನ ಪ್ರಶ್ನೆಗಳ ರೀತಿಯನ್ನು ಕಂಡು, ಹೆದರಿ, ಭೀತಿತುಂಬಿದ ಕಣ್ಣುಗಳಿಂದ ಅವನ ಮೊಗವನ್ನೇ ನೋಡುತ್ತಾ, ನಡುಗುವ ಧ್ವನಿಯಲ್ಲಿ ಹೇಳಿದಳು ಗತ್ನಮ್ಮ.

' ಯಾತಕ್ಕಂತೆ ?'

ಈರಮ್ಮನ ಸಾಲದ ವಿಷಯ ಮಾತನಾಡಲಿಕ್ಕೆ....'

'ಆ ವಿಷಯ ಅವನಿಗೆ ಒಪ್ಪಿಸಿದೆಯಾ ?'

ರತ್ನಮ್ಮನ ಮಾತನ್ನು ನಡುವೆಯೇ ತಡೆದುಕೇಳಿದ ರಾಘಣ್ಣ.

' ಒಪ್ಪಿಸಿದೇಂತ ಅಲ್ಲ ರಾಘಣ್ಣ, ಆತ........'

' ಅದೆಲ್ಲಾ ವಿವರಣೆ ನನಗೆ ಬೇಡ ರತ್ನಕ್ಕ. ಆ ವಿಚಾರದಲ್ಲಿ ಮಾತಾಡಲಿಕ್ಕೆ ಅವನಿಗೆ ಹೇಳಿದೆಯೋ ಇಲ್ಲವೋ ಅಷ್ಟು ಹೇಳು.'

' ಹೂ '

' ಅಷ್ಟೇ ನನಗೆ ಬೇಕಾದದ್ದು. ಇನ್ನು ನೀನುಂಟು,ನಿನ್ನ ಸಂಸಾರವುಂಟು, ನಿನಗೆ ಬೇಕಾದವರುಂಟು, ನಿನ್ನ ಕೆಲಸ ಯಾರಿಂದಬೇಕೋ ಅವರಿಂದ ಮಾಡಿಸಿಕೊ. ನನಗೆ ಏನೂ ಹೇಳಬೇಡ. ಇಂದಿನಿಂದ ನನಗೂ, ನಿನ್ನ ವಿಷಯಕ್ಕೂ ಏನೂ ಸಂಬಂಧವಿಲ್ಲ. ನಾನು ಹೊತ್ತುಕೊಂಡ ಭಾರಾನ ನೀನೇ ಇಳಿಸಿಬಿಟ್ಟೆ. ಸಂತೋಷ. ಇಂದಿನಿಂದ ನಾನು ನಿನ್ನ ಮನೆಯಕಡೆ ಕಾಲುಹಾಕುವುದಿಲ್ಲ. ನಿನ್ನ ಪರ ವಹಿಸಿದ್ದಕ್ಕೆ ಒಳ್ಳೇ ಮರ್ಯಾದೆ ಬರೋಹಾಗೆ ಮಾಡಿದೆ. ಇನ್ನು ಹಾಯಾಗಿ ಹೋಗಿ ಊಟಮಾಡು.'

—ಎಂದು ಅಷ್ಟು ಮಾತನ್ನು ಉಸಿರುಕೂಡಾ ತಿರುಗಿಸಿಕೊಳ್ಳದೆ ಧಡಧಡನೆ ಹೇಳಿ, ಆ ಬಳಿಕ ಒಂದು ಗಳಿಗೆಯೂ ಅಲ್ಲಿ ನಿಲ್ಲದೆ, ಅಡ್ಡವಾದ ತಲೆಬಾಗಿಲನ್ನು ಧಡಾರನೆ ತೆಗೆದು ಮುಚ್ಚಿಕೊಂಡು ಹೊರಟುಹೋದ.

ರತ್ನಮ್ಮ ಒಂದು ಗಳಿಗೆ ಗರಬಡಿದಂತೆ ನಿಂತಿದ್ದಳು—ಯಾವುದೂ ಅರ್ಥವಾಗದೆ, ಎಲ್ಲೋ ಕನಸಿನಲ್ಲಿದ್ದವಳಂತೆ. ಮರುಗಳಿಗೆಯಲ್ಲೇ ನೆಲಕ್ಕೆ ಕುಸಿದು ಬಿಕ್ಕಿಬಿಕ್ಕಿ ಅಳತೊಡಗಿದಳು.

ರಾಘಣ್ಣನ ಗಟ್ಟಿಯಾದ ಮಾತುಗಳಿಂದ ಗಾಬರಿಯಾದ ನಾರಾಯಣ, ಅಳುತ್ತಿದ್ದ ತಾಯನ್ನು ನೋಡಿ, ಅವಳನ್ನು ತಬ್ಬಿಕೊಂಡು ತಾನೂ ಅಳ ತೊಡಗಿದ.

ಮಳೆನಿಂತ ಮರುಗಳಿಗೆಯ ಮೌನ ಕವಿದ ಮನೆ, ನಿಶ್ಶಬ್ದವಾಗಿ ತಾಯಿಮಕ್ಕಳ ಅಳುವನ್ನು ಪ್ರತಿಧ್ವನಿಸುತ್ತಿತ್ತು.



ತನ್ನ ಜೀವನದಲ್ಲಿ ಇಂತಹ ದಿನವೊಂದು ಬರಬಹುದೆಂದು ಯಾರಾದರೂ ಆಣೆ ಇಟ್ಟು ಹೇಳಿದ್ದರೂ ನಂಬುತ್ತಿರಲಿಲ್ಲ. ಆದರೆ ಇಂದು ಆ ಊಹಾತೀತವಾದ ಪರಿಸ್ಥಿತಿಯೇ ಸತ್ಯವಾಗಿತ್ತು.

ಯಾವ ಚಿಂತೆ, ಭೀತಿಗಳೂ, ಯಾವ ಬಗೆಯ ಹೊಣೆಗಾರಿಕೆಯೂ ಬೀಳದ ಜೀವನ ತನ್ನದಾಗುವುದು ಎಂದು ಊಹಿಸಿದ್ದಳಾಕೆ. ಯಾವ ಬಗೆಯ ಅಪಾಯ ಚಿಂತೆಯೂ, ಅಶುಭ ಭೀತಿಗಳೂ, ಇಣಿಕುಹಾಕದ ಕೊಡೆಯಲ್ಲಿದ್ದಂತ್ತಿತ್ತು, ಆ ಬಾಳು. ಅದೇ ಸ್ಥಿರವೆಂದೂ ನಂಬಿದ್ದಳಾಕೆ. ಅದೇ ಸ್ಥಿರವಾಗಿರಲಿ ಎಂದು ಹಾರೈಸಿದ್ದಳು. ದಿನನಿತ್ಯವೂ ಅದನ್ನೇ ಪ್ರಾರ್ಥಿಸಿದ್ದಳು.

ಆದರೆ ಆ ಎಲ್ಲ ಬಯಕೆ, ಭರವಸೆ, ಪ್ರಾರ್ಥನೆಗಳು ಗಾಳಿಪಾಲಾಗಿ, ತನ್ನ ಜೀವನದಲ್ಲಿ ಏನು ಆಗದಿರಬಹುದು ಎಂದು ನಂಬಿದ್ದಳೋ ಅದೇ ಫಲಿಸಿತ್ತು.

ಬಾಳಿನಲ್ಲಿ ಆಕೆ ನಂಬಿದ ಒಂದೊಂದು ಆಸರೆಯೂ, ಕಾಡಾನೆಗಳ ತುಳಿತಕ್ಕೆ ಸಿಕ್ಕಿದ್ದ ಕಬ್ಬಿನ ಗದ್ದೆಯಂತೆ ನೆಲದ ಪಾಲಾಗಿ ಹೋಗಿ, ಬಳ್ಳಿ ನಂಬಿದ ಮರ ನೆಲಕ್ಕುರುಳಿದಾಗ ಆದಂತಾಗಿತ್ತು ಆಕೆಯ ಜೀವನ. ನಿರಭ್ರ ನೀಲ ಮುಗಿಲಿನಲ್ಲಿ, ಹಾಯಾಗಿ ಆಡುತ್ತಿದ್ದ ಗಾಳಿಪಟದ ಸೂತ್ರದ ದಾರವೇ ಕಳಚಿಹೋಗಿ, ಹಾರಲರಿಯದೆ ಹೊಯ್ದಾಡುವ ಪಟದಂತಾಗಿತ್ತು ಆಕೆಯ ಬಾಳು.

ಹೀಗೇಕಾಯಿತು, ಇದಕ್ಕೇನು ಕಾರಣ ಎಂದು, ಮುಂದೆ ನಾನು ಚಿಂತಿಸುವುದು ಸಾಧ್ಯವಿಲ್ಲ ಎಂದು ಮಿದುಳು ಮುಷ್ಕರ ಹಿಡಿಯುವವರೆಗೂ ಚಿಂತಿಸಿದಳು. ಆದರೆ ಆಕೆಯ ಸಮಸ್ಯೆಗೆ ಉತ್ತರ ಸಿಗಲಿಲ್ಲ.

ಈ ಬಿರುಗಾಳಿ ತನ್ನ ಬಾಳಿನಲ್ಲೇ ಏಕೆ ಬೀಸಬೇಕು? ಯಾವ ಅಪರಾಧಕ್ಕಾಗಿ ಈ ಶಿಕ್ಷೆ ಎಂದು ಚಿಂತಿಸಿದಳು.

ಆಕೆ ತನ್ನ ಬಾಳಿನಲ್ಲಿ ಯಾವ ಅಪರಾಧವನ್ನೂ ಮಾಡಿರಲಿಲ್ಲ; ಯಾರಿಗೂ ಕೆಡಕು ಬಗೆದಿರಲಿಲ್ಲ; ಯಾರಿಗೂ ದ್ರೋಹ ಚಿಂತನೆ ಮಾಡಿರಲಿಲ್ಲ. ಎಲ್ಲರನ್ನೂ ನಂಬಿ ನಡೆದಿದ್ದಳು. ಯಾರಿಗೂ ಕೆಡಕನ್ನು ಮಾಡದ ತನಗೆ ಯಾರಿಂದಲೂ ತೊಂದರೆಯಾಗದಿರಬಹುದು ಎಂದೇ ನಂಬಿದ್ದಳು.

ಆದರೂ....ಆದರೂ....ಆಕೆ ನಂಬಿದ್ದವರೆಲ್ಲಾ ಒಬ್ಬೊಬ್ಬರಾಗಿ ಆಕೆಯಿಂದ ದೂರವಾಗಿದ್ದರು;

ಒಬ್ಬೊಬ್ಬರೂ ಆಕೆಯ ಬಾಳನ್ನು ಬರಿದು ಮಾಡಿ ತೆರಳಿದ್ದರು;

ತನ್ನ ಬಾಳಿನ ಭಾಗ್ಯ ವಿಧಾತ ಎಂದು ನಂಬಿದ ಪತಿ–

ಕೈಹಿಡಿದವನಿಗಿಂತಲೂ ಮಿಗಿಲಾದ ಅಕ್ಕರೆಯಿಂದ ಕಾಪಾಡುವ ಅಣ್ಣ ಎಂದು ನಂಬಿದವನು–

ಒಬ್ಬೊಬ್ಬರೂ ತೆರಳಿದ್ದರು;

ಒಬ್ಬೊಬ್ಬರೂ ಹೋಗುವಾಗಲೂ ಮತ್ತಷ್ಟು ಭಾರವನ್ನು, ಮತ್ತಷ್ಟು ಹೊಣೆಗಾರಿಕೆಯನ್ನೂ ಆಕೆಯ ತಲೆಯ ಮೇಲೆ, ಹೃದಯದ ಮೇಲೆ ಹೊರೆಸಿ ತೆರಳಿದ್ದರು.

ಈ ಹೊಣೆಗಾರಿಕೆ ತನಗೆ ಬೇಕು ಎಂದು ಆಕೆ ಎಂದೂ ಬೇಡಿರಲಿಲ್ಲ.

ಆದರೂ ಆಕೆಗೆ ಬೇಡವಾದ, ಆಕೆಯಿಂದ ಹೊರಲಾಗದ ಭಾರವನ್ನು ಆಕೆಯ ಮೇಲೆ ಹೊರಸಿ, ಆಕೆಯಬಾಳನ್ನು ಕತ್ತಲ ಪಂಜರವಾಗಿ ಮಾಡಿ ತೆರಳಿದ್ದರು.

ಇದೇನು ? ಹೀಗೇಕೆ ?

ಇದು ಪಾಪಕ್ಕೆ ಪ್ರಾಯಶ್ಚಿತ್ತವೇ ? ಅಪರಾಧಕ್ಕೆ ಶಿಕ್ಷೆಯೇ ?

ಏನು ಪಾಪ ? ಏನು ಅಪರಾಧ ? ಯಾರು ಶಿಕ್ಷೆ ಅನುಭವಿಸಬೇಕಾದವರು?

ಒಂದು ಕಡೆ ಈ ಕೊನೆಕಾಣದ ಚಿಂತೆ.

ಮತ್ತೊಂದುಕಡೆ ಇದಕ್ಕಿಂತಲೂ ಭೀಕರವಾದ, 'ಇಷ್ಟಾಯಿತು. ಮುಂದೇನು ?' ಎಂಬ ಸಮಸ್ಯೆ.

ಈ ಚಿಂತೆ-ಸಮಸ್ಯೆಗಳು ಆಕೆಯ ಹೃದಯವನ್ನು ಹೋದತ್ತ ಬಂದತ್ತ ಗರಗಸದಂತೆ ಕೊಯ್ಯುತೊಡಗಿದವು. ಊಟ, ಚಿಂತೆಗೂ, ಬಿಡುವುಕೊಡದೆ, ಹಿಂಡಿ, ಹಿಂಡಿ, ಗಾಣಕ್ಕೆ ಸಿಕ್ಕಿದ ಕಬ್ಬಿನಂತಾಯಿತು ಆಕೆಯ ಬಾಳು.

ಚಿಂತಿಸಿ ಚಿಂತಿಸಿ ಹಣ್ಣಾದಳು;

ಚಿಂತಿಸಲಾಗದೆ ಕಂಬನಿಗರೆದಳು;

ಚಿಂತಿಸಿ, ಚಿಂತಿಸಿ ಮಿದುಳು ಮಸಣಿಸಿತ್ತು; ಕರೆಕರೆದು ಕಣ್ಣಲ್ಲಿಯ ಕಂಬನಿಯ ಚಿಲುಮೆ ಬತ್ತಿತು.

ಆದರೆ ಮುಂದಿನ ದಾರಿ ಕಾಣಲಿಲ್ಲ.

ಈ ಚಿಂತೆ ಬಲವಾದಾಗ ಕಳೆದುಹೋದ, ಮತ್ತೆ ಎಂದೆಂದೂ ಹಿಂದಿರುಗಿ ಬರದಂಥ ಕಳೆದ ಬಾಳಿನ ಸುಖದಿನಗಳನ್ನು ನೆನೆಸಿಕೊಂಡಳು. ಹೇಗಿತ್ತು-ಹೇಗಾಯಿತು ಎಂದು ಹೋಲಿಸಿ ನೋಡಿದಳು. ಹೋಲಿಕೆಯಿಂದ, ಮರುಕಳಿಸಿದ ನೆನಪಿನಿಂದ ಮನಸ್ಸಿಗೆ ಹಿತವಾಗಲಿಲ್ಲ; ಹೃದಯಕ್ಕೆ ಹಾಯೆನಿಸಲಿಲ್ಲ.

ಜಾರಿ ಹೋದ ಸುಖದ ನೆನಪಿನ ಹಿನ್ನೆಲೆಯ ಮೇಲೆ, ಇಂದಿನ ಬದುಕು ಮತ್ತಷ್ಟು ದುರ್ಭರವೆನಿಸಿತು; ಈ ಬದುಕೇ ಬೇಡ ಎನಿಸಿತು.

ಬದುಕು ಯಾರಿಗಾಗಿ. ಯಾವುದಕ್ಕಾಗಿ ಈ ಬದುಕು ?

ಕೆರಳಿಸಿದ ಹಾವಿನಂತೆ ಈಪ್ರಶ್ನೆ ತನ್ನ ಹೆಡೆಯನ್ನು ಎತ್ತಿದ ಹೊತ್ತಿನಲ್ಲಿ, ತನ್ನಮುಂದೆ, ತನ್ನಷ್ಟೇ ನಿಷ್ಪಾತನಾಗಿ, ನಿರಪರಾಧಿಯಾಗಿ, ಅಸಹಾಯಕನಾಗಿ ಕುಳಿತ, ಕಂದನ ನೆನಪು, ಆ ಪ್ರಶ್ನೆಯನ್ನು ತಳಿಯಿತು.

ಅವನ ನೆನಪು ಬಂದಾಗ, ಅವನ ಭವಿಷ್ಯದ ಚಿಂತೆ ಬಲವಾದಾಗ, ಇಂದಿನ ಸಮಸ್ಯೆಯೊಂದಿಗೆ, ಮುಂದೇನು ಎಂಬ ಚಿಂತೆಯೊಂದಿಗೆ ಅದೂ ಬೆರೆತು, ಬಾಳು ಮತ್ತಷ್ಟು ದುರ್ಭರವೆನಿಸಿತು.

ತನ್ನ ಬಾಳಿನಲ್ಲಿ ದಾರಿ ಕಾಣದೆ, ಮಗನ ಭವಿಷ್ಯದ ದಾರಿಯನ್ನೂ ಕಾಣಲಾಗದೆ, ಮಗನನ್ನೇ ತಬ್ಬಿಕೊಂಡು ಚಿಂತಿಸಿದಳು; ಕಂಬನಿಗರೆದಳು.

ತಾಯಿ ಅಳುವುದನ್ನು ಕಂಡಾಗ ನಾರಾಯಣ ತಾನೂ ಅತ್ತು ಆಕೆಯ

ದುಃಖಕ್ಕೆ ಗಾಳಿ ಬೀಸಿದ.

ದಿನದಿನಕ್ಕೆ ಹೆಚ್ಚಿದ ದುಃಖದೊಂದಿಗೆ, ಬಗೆಹರಿಸಲಾಗದ ಸಮಸ್ಯೆಯ ಚಿಂತೆ, ಅಸಹಾಯಕತೆಗಳೂ ಬೆರೆತು, 'ತನ್ನ ಯೋಚನೆಗೆ ಏನೂ ಕೊನೆಯಿಲ್ಲ; ತನ್ನ ಬಯಕೆಗೆ ಏನೂ ಬೆಲೆಯಿಲ್ಲ' ಎಂಬ ಜಡತೆಯನ್ನೂ ತಾತ್ಸಾರವನ್ನೂ ಮೂಡಿಸಿದುವು;

ಯಾರನ್ನು ನಂಬಿದರೂ ತನ್ನ ಉದ್ಧಾರವಾಗುವುದಿಲ್ಲ ಎಂಬ ನಿರಾಶೆಯನ್ನೂ ಕವಿಸಿದುವು;

ಯಾರಿಗೂ ತಾನು ಬೇಡವಾದ ಮೇಲೆ, ಎಲ್ಲರಿಗೂ ಅವರವರ ಸ್ವಾಭಿಮಾನ, ಸ್ವಾರ್ಥ, ಕ್ರೋಧಗಳೇ ಹೆಚ್ಚಾದ ಮೇಲೆ, ಯಾರಿಂದ ತನಗಾಗಬೇಕಾದುದೇನು? ಎಲ್ಲರೂ ಅವರವರ ದಾರಿ ಹಿಡಿದಾಗ,ತನ್ನ ದಾರಿ ತನಗೆ ಎನ್ನುವ ಭಾವನೆಯನ್ನು ಪ್ರೇರೇಪಿಸಿದುವು.

ಚಿಂತಿಸಿ, ಚಿಂತಿಸಿ, ಊಟ, ನಿದ್ರೆಬಿಟ್ಟು ಯೋಚಿಸಿಯೂ ದಾರಿಕಾಣದೆ, ಕಂಬನಿಗರೆದೂ ಫಲ ಕಾಣದೆ, 'ಹಾಳಾಗಿ ಹೋಗಲಿ; ಯಾವುದು ಏನಾದರಾಗಲಿ. ಹೇಗಾಗಬೇಕೆಂದು ವಿಧಿಯ ಇಷ್ಟವಿದೆಯೋ ಹಾಗಾಗಲಿ'

—ಎಂಬ ನಿರ್ಧಾರಕ್ಕೆ ಬಂದು, ಎಲ್ಲಿಯೋ ಹುಟ್ಟಿ, ತನ್ನಿಚ್ಛೆ ಬಂದಂತೆ ಹರಿಯುವ ಬಾಳ ಜಲದಲ್ಲಿ ತನ್ನ ಬದುಕಿನ ಗುರಿಯನ್ನು ತೇಲಿಬಿಟ್ಟಳು ರತ್ನಮ್ಮ.

* * *

ಚಿನ್ನೋಬಯ್ಯನ ಕೆಡಕು ಮಾತುಗಳಿಂದ ಉರಿದೆದ್ದ ಕ್ರೋಧದ ಗಳಿಗೆಯಲ್ಲಿ, ತನ್ನ ಹೆಗಲ ಮೇಲೆ ಹೊತ್ತಿದ್ದ ರತ್ನಮ್ಮನ ಚಿಂತೆಯನ್ನು ಕಿತ್ತೊಗೆದು ಬಂದ ರಾಘಣ್ಣನೂ, ಚಿಂತೆ ಕಳೆಯಿತೆಂದು ಸುಖಿಯಾಗಲಿಲ್ಲ.

ಗಂಡ ಸತ್ತಗಳಿಗೆಯಲ್ಲಿ, ಬದುಕು ಬರಿದಾದ ಗಳಿಗೆಯಲ್ಲಿ, ಎಲ್ಲರೂ ಸೋಮನಹಳ್ಳಿಯಿಂದ ಆಕೆಯ ಸಂಸಾರವನ್ನು ಕದಲಿಸಬೇಕೆಂಬ ನಿರ್ಧಾರ ಮಾಡಿದ ಹೊತ್ತಿನಲ್ಲಿ—

'ನೀನೊಬ್ಬ ನನಗೆ ಬೆಂಬಲನಾಗಿರು ರಾಘಣ್ಣ,ನಿನ್ನದೊಂದೇ ನಂಬಿಕೆ'

—ಎಂದ ರತ್ನಮ್ಮನ ಮುಖದ ನೆನಪು, 'ಅಣ್ಣ' ಎಂದು ಕರೆದು ತನ್ನ ಹೃದಯವನ್ನು ಸೂರೆಗೊಂಡ ಆ ತಂಗಿತನದ ಅಕ್ಕರೆಯ ನೆನಪು ಅವನ ಹೃದಯವನ್ನು ಹಿಂಡುತ್ತಿತ್ತು.

‘ ಎಷ್ಟಾದರೂ ರತ್ನಕ್ಕ ಲೋಕ ವ್ಯವಹಾರವನ್ನು ತಿಳಿಯದ ಹೆಂಗಸು. ಏನೋ ಹೆದರಿಕೆಯಲ್ಲಿ ಇದನ್ನು ಮಾಡಿದಳು. ಆ ಹೊತ್ತಿನಲ್ಲಿ ಎಲ್ಲ ವಿಚಾರವನ್ನೂ ತಿಳಿದ ನಾನು ತಾಳ್ಮೆ ತಪ್ಪಬೇಕಾಗಿತ್ತೇ? ಈ ಕಾಡಿನಲ್ಲಿ ಆಕೆಯನ್ನು, ಒಂಟಿಯಾಗಿ, ‘ ನಿನ್ನ ಗತಿ ಏನಾದರಾಗಲಿ ? ’ ಎಂದು ಬಿಟ್ಟು ಬರಬಹುದೇ ? ವಿಶ್ವಾಸ, ಸ್ನೇಹ, ಅಂತಃಕರಣಗಳಿಗೆ ಇಷ್ಟೇನೇ ಬೆಲೆ ? ’

—ಎಂದು ಅವನ ಮನಸ್ಸು ಅವನನ್ನೇ ಜರಿಯುತ್ತಿತ್ತು.

‘ ನಿನ್ನದು ದುಡುಕು, ನಿನ್ನದು ಮುಂಗೋಪ, ನಿನ್ನ ದಬಾದುಬಿಯ ಸುಳಿಯಲ್ಲಿ ಆಕೆಯನ್ನು ಸಿಕ್ಕಿಸಿ ಬಳಲಿಸಿದೆಯಲ್ಲಾ, ಅದು ಸರಿಯಾಯಿತೇ?’

—ಎಂದು ಕುಳಿತತ್ತ ಅವನ ಹೃದಯವನ್ನು ಮುಳ್ಳಿನಂತೆ ಇರಿಯುತ್ತಿತ್ತು; ಪಶ್ಚಾತ್ತಾಪದ ಕಂಬನಿಗರೆಯುವಂತೆ ಮಾಡುತ್ತಿತ್ತು. ಪಶ್ಚಾತ್ತಾಪದ ಬೆಂಕಿ ಅವನ ಎದೆಯನ್ನು ಸುಡುವ ವೇಳೆಯಲ್ಲೇ, ಅವನ ಸ್ವಾಭಿಮಾನವೂ ಕೆರಳಿ—

‘ ನಾನೇನು ಆಕೆಯಿಂದ ಏನಾದರೂ ಲಾಭ ಪಡೆಯಬೇಕೆಂದು ಇಷ್ಟೆಲ್ಲಾ ಮಾಡಿದೆನೇ ? ಏನಾದರೂ ಸ್ವಾರ್ಥಸಾಧಿಸಬೇಕೆಂದು ಊರವರ ದ್ವೇಷ ಕಟ್ಟಿಕೊಂಡೆನೇ ? ಆಕೆಯನ್ನು ಉಳಿಸುವುದಕ್ಕಾಗಿಯೇ ತಾನೇ ನಾನು ಮಾತನಾಡಿಸಬಾರದವರನ್ನೂ ಮಾತನಾಡಿಸಿದ್ದು; ಅವರ ಅಪಮಾನ, ತಿರಸ್ಕಾರಗಳನ್ನು ಸಹಿಸಿದ್ದು; ದ್ವೇಷ ಕಟ್ಟಿಕೊಂಡದ್ದು. ಈ ಪರಿವೆ ಆಕೆಗೆ ಇರಬಾರದಾಗಿತ್ತೇ? ಯಾರಿಗೋಸ್ಕರ ನಾನಿಷ್ಟು ಪರಿಪಾಟಲು ಪಡುತ್ತಿದ್ದೇನೆ. ಎಂಬ ಪ್ರಜ್ಞೆ ಆಕೆಗೆ ಇರಬಾರದಾಗಿತ್ತೆ ? ನನ್ನನ್ನು ನಂಬಿದೇನೆ ಎಂದ ಆಕೆ, ತಟಕ್ಕನೆ ಆ ನಂಬಿಕೆಯನ್ನು ಬೇರೆಯವರಿಗೆ, ಅದೂ ತನ್ನನ್ನು ಕಂಡು ಅಸಹನೆಯಿಂದ ಕುದಿಯುತ್ತಾ, ಇವನು ಬಿದ್ದರೆ ಸಾಕು, ನಾವು ನಗೋಣ' ಎಂದು ಕಾದು ಕುಳಿತವರಿಗೆ ನೀಡುವುದೇ ? ಆಕೆಗಾಗಿ ನಾನು ಯಾರ ಹಗೆತನವನ್ನು ಕಟ್ಟಿ ಕೊಂಡೆನೋ, ಅಂಥವರಿಗೇ ತನ್ನ ನಂಬಿಕೆಯನು ಒಪ್ಪಿಸಿ, ಅವನ ಮುಂದೆ ತನ್ನ ಮಾತಿಗೆ ಬೆಲೆ ಇಲ್ಲದಂತೆ ಮಾಡಿ, ನಗುವವರ ಮುಂದೆ ನಾನು ಜಾರಿಬೀಳುವಂತೆ ಮಾಡಿದಳಲ್ಲಾ. ತಂಗೀ ಎಂದು ತಾನು ಕರೆದ ಹೆಣ್ಣು, ನನ್ನನ್ನುಅಣ್ಣಾ ಎಂದು ಕರೆದವಳು ಹೀಗೆ ಮಾಡಬಹುದೇ ? ನನ್ನ ಪ್ರೀತಿ, ನಂಬಿಕೆ, ನಿಸ್ವಾರ್ಥ ಅಂಥಃಕರಣಕ್ಕೆ ಈ ಅಪಮಾ

ನವೇ ಬೆಲೆಯೇ? ಆಕೆಯ ಕಷ್ಟಕ್ಕೆ ಹೆಗಲು ಕೊಟ್ಟು, ನಾನಾಗಿಯೇ ಅಪಮಾನವನ್ನು ಒಳಗೆ ಬಾ ಎಂದು ಕರೆದ ಹಾಗಾಯಿತಲ್ಲ. ಈ ಲಾಭವಿಲ್ಲದ ಹೊಣೆಗಾರಿಕೆಯನ್ನು ಹೊತ್ತು, ನನ್ನನ್ನು ಕಂಡು ಹೆದರುತ್ತಿದ್ದವರೂ ಹಲ್ಲು ಕಿಸಿದು ನಗುವಂತಾಯಿತಲ್ಲಾ? ಈ ಎಚ್ಚರಿಕೆ, ಅಭಿಮಾನ ಆಕೆಗೆ ಇರಬಾರದಾಗಿತ್ತೇ? ಕೂಡದು, ಕೂಡದು, ಇನ್ನಾಕೆ ತನ್ನ ಬಾಳಿಗೆ ಬೆಂಕಿ ಹಚ್ಚಿಕೊಂಡರೂ, ಇಷ್ಟಾದಮೇಲೆ ಇನ್ನು ಆಕೆಯನ್ನು ನೋಡಬಾರದು, ಮಾತಾಡಿಸಬಾರದು.'

—ಎಂದು ಚೀರಿ ಚೀರಿ ಹೇಳುತ್ತಿತ್ತು.

ಎದೆಯಲ್ಲಿ ಆ ಕಹಿ ಕಲಕಿದ ಹೊತ್ತಿನಲ್ಲಿ, ಮತ್ತಾವುದೋ ಒಂದು ಮೃದುವಾದ ವಾಣಿ—

'ಯೋಚನೆ ಮಾಡು, ಅಭಿಮಾನ ದೊಡ್ಡದೋ, ಅಕ್ಕರೆ ದೊಡ್ಡದೋ? ಅಭಿಮಾನದ ಸೆಳವಿಗೆ ಸಿಕ್ಕು ಅಕ್ಕರೆಯನ್ನು ಬಲಿಕೊಡಬೇಡ. ಏನೂ ಅರಿಯದ ಹೆಣ್ಣು, ಏನೋ ಭಯದ ಮಂಪರ ಕವಿದ ಹೊತ್ತಿನಲ್ಲಿ ಸ್ವಲ್ಪ ಹೆಜ್ಜೆ ತಪ್ಪಿದರೆ, ಆ ಒಂದು ಮಾತಿಗಾಗಿ, ಎಲ್ಲ ವಿಶ್ವಾಸವನ್ನೂ ಕತ್ತರಿಸುತ್ತೀಯಾ? ಆಕೆ ನಂಬಿದವನು ನೀನೊಬ್ಬನೂ ಆಕೆಯನ್ನು ಕೈಬಿಟ್ಟರೆ, ಶುದ್ಧ ಸ್ವಾರ್ಥದ ಪಶುಗಳು ತುಂಬಿದ ಈ ಕಾಡಿನಲ್ಲಿ ಆಕೆ ಬದುಕುವುದು ಸಾಧ್ಯವೆ? ಅಲ್ಪ ಅಪರಾಧಕ್ಕಾಗಿ ಆಕೆಯ ಬಾಳೇ ನಷ್ಟವಾಗಬೇಕೇ? ಅದಕ್ಕೆ ಉರಿ ಹೊತ್ತಿದರೆ ಸುಮ್ಮನೆ ನಿಂತು ನೋಡುತ್ತೀಯಾ ನೀನು?'

—ಎಂದು ಅಭಿಮಾನದ ಮಬ್ಬು ಕವಿದ ಅವನಲ್ಲಿ ವಿವೇಚನೆಯನ್ನು ಕೆಣಕುತ್ತಿತ್ತು.

'ಆಯಿತು. ತಪ್ಪೇ ಮಾಡಿದಳು ರತ್ನಕ್ಕ. ತಮ್ಮ ಜೀವನದಲ್ಲಿ ಒಂದಾದರೂ ತಪ್ಪನ್ನು ಮಾಡದಂಥ ಹಿರಿಯರು ಯಾರೂ ಈ ಭೂಲೋಕದಲ್ಲಿಲ್ಲ. ತಪ್ಪು ಮಾಡಿ ರತ್ನಕ್ಕ ಸಣ್ಣವಳಾದಳು. ಅದಕ್ಕಾಗಿ ಆಕೆಯನ್ನು ಇಷ್ಟು ಪೀಡಿಸುವ ನಿನ್ನದು ಹಿರಿತನವೇ, ಚಿಂತಿಸು'

—ಎಂದು ಕಿಡಿ ನುಡಿಯುತ್ತಿತ್ತು.

'ನಿಜ, ತಪ್ಪಾಯಿತು. ಆಕೆ ಈರೀತಿ ಮಾಡಿದುದು ತಪ್ಪು. ನನ್ನದು ತಪ್ಪಾಯಿತು ಎಂದು ಆಕೆ ಬೇಡಿಕೊಳ್ಳಲಿ, ಆಗ ನಾನೂ ಅದನ್ನು ಮರೆಯುತ್ತೇನೆ. ಹಾಗಲ್ಲದೆ, ನನಗೂ ನಿನಗೂ ಸಂಬಂಧವಿಲ್ಲ ಎಂಬಂತೆ ನಡೆದುಕೊಂಡು

ಆಕೆಂದೇನನ್ನು, ನಾನೇ ಹಚ್ಚಿಕೊಂಡು ಹೋದರೆ, ಥೂ ಅಂದರೆ ನನ್ನ ಬಾ ಎಂದರು ಎಂತ ಹೋದ ಎಂಬ ನಗೆಗೀಡಾಗುವುದಿಲ್ಲವೇ ತನ್ನ ಬಾಳು. ತಪ್ಪು ಮಾಡಿದ ರತ್ನಕ್ಕ ನನ್ನದು ತಪ್ಪಾಯಿತು ಎನ್ನಲಿ, ಅಷ್ಟು ಹೇಳಲಿ ಸಾಕು. ಎಲ್ಲವನ್ನೂ ಮರೆತು ಮೊದಲಿನ ಹಾಗಿರಬಲ್ಲೆ. ಅದಿಲ್ಲದೆ ಸಾಧ್ಯವಿಲ್ಲ. ಆಕೆಯೇ ಕರೆಯದೆ, ಮತ್ತೆ ಆಕೆಯ ಮನೆಯ ಮೆಟ್ಟಲು ತುಳಿಯುವುದಿಲ್ಲ.'

—ಎಂದು ಸ್ವಾಭಿಮಾನ ಗದರಿಸಿ, ಗರ್ಜಿಸಿ ನುಡಿಯುತ್ತಿತ್ತು.

ಆ ಹೊತ್ತಿನಲ್ಲಿ ರತ್ನಕ್ಕ ತನ್ನನ್ನು ಅಣ್ಣನಂತೆ ಕಂಡು, ಹಾಗೇ ನಡೆಸಿ ಕೊಂಡ ಹತ್ತಾರು ನೆನಪುಗಳು ನುಗ್ಗಿ ಬಂದು, ಸ್ವಾಭಿಮಾನದಿಂದ ಬಿಗುಸಾದ ಅವನ ಹೃದಯದ ಮೇಲೆ ಧಾಳಿಮಾಡಿ, ನುಗ್ಗಿಬರುವ ಪ್ರೀತಿಗೆ ಹೃದಯದ ಹೆಬ್ಬಾಗಿಲನ್ನು ತೆರೆಯುತ್ತಿದ್ದವು.

ಅಕ್ಕರೆ—ಅಭಿಮಾನ ;

ರತ್ನಮ್ಮನ ಕಂಬನಿದುಂಬಿದ ಮುಖ-ಚಿನ್ನೋಬಯ್ಯನ ಕೀಚು ನಗೆ;

'ಅಣ್ಣಾ' ಎಂಬ ಕರೆ—ಈರಮ್ಮನ ಕುಹಕ ನುಡಿ

ಈ ಇಬ್ಬಗೆಯ ಸೆಳೆತದಲ್ಲಿ ಸಿಲುಕಿ, ಬಳಲಿದ ರಾಘಣ್ಣ.

ವಿರುದ್ಧ ದಿಕ್ಕಿನಲ್ಲಿ ಸೆಳೆದೊಯ್ಯುವ ಪ್ರವಾಹಗಳೊಂದಿಗೆ, ಸೆಣಸಿ, ಸೆಣಸಿ, ಪ್ರಾಣವಾಗಿ, ಸ್ನೇಹ, ಸ್ವಾಭಿಮಾನವನ್ನು ಬಗ್ಗಿಸಿ—

'ಒಂದು ಬಾರಿ, ಒಂದೇ ಒಂದು ಬಾರಿ, ರತ್ನಕ್ಕ 'ಏನೋ ಆಯಿತು ರಾಘಣ್ಣ, ಆದದ್ದನ್ನು ಮರೆತುಬಿಡು' ಎಂದು ಹೇಳಬಾರದೆ, 'ನನ್ನದು ತಪ್ಪಾಯಿತು ರಾಘಣ್ಣಾ, ಬಾ' ಎಂದು ಕರೆಯ ಬಾರದೆ? ಒಂದು ಬಾರಿ, ಒಂದೇ ಒಂದು ಬಾರಿ— ಅಷ್ಟು ಸಾಕು. ಕರೆದ ಕೂಡಲೇ, ಎಲ್ಲವನ್ನೂ ಮರೆತು ಪಕ್ಷಿಯಂತೆ ಹಾರಿ ಹೋಗುತ್ತೇನೆ.'

—ಎಂದು ಹಾರೈಸಿತು ಅವನ ಹೃದಯ.

—ಆದರೆ ರತ್ನಮ್ಮ ಅವನನ್ನು ಕರೆಯಲಿಲ್ಲ.

ಯಾವ ಗಳಿಗೆಯಲ್ಲಾದರೂ ರತ್ನಮ್ಮನ ಕರೆ ಬರಬಹುದೆಂದು ಕಾದ.

—ಆದರೆ ರತ್ನಮ್ಮನಿಂದ ಕರೆ ಬರಲಿಲ್ಲ.

ತನ್ನೊಳಗೆ ಸಿಡಿಯುತ್ತಿದ್ದ ಆತ್ಮಾಭಿಮಾನದ ಬೆಂಕಿ ದಳ್ಳುರಿಯಾಗ ದಂತೆ,ಅಂತಃಕರಣದ ಜಲಸೇಚನೆ ಮಾಡುತ್ತಾ,ದಿನದಿನವೂ ಕಾದ ರಾಘಣ್ಣ.

ದಿನದ ಮೇಲೆ ದಿನ ಕಳೆದವು.

ರತ್ನಮ್ಮ ರಾಘಣ್ಣನ ಮನೆ ಬಾಗಿಲತ್ತ ಸುಳಿಯಲಿಲ್ಲ.

ಸ್ನೇಹ ಜಲಸೇಚನೆಯಿಂದ ಮೃದುವಾಗಿದ್ದ ಅಭಿಮಾನ ದಿನ ದಿನದ ನಿರಾಶೆಯಿಂದ ಮತ್ತೆ ಬಿರುಸಾಗಿ, ಕಲ್ಲಾಗಿ, ಸೆಟೆದು ನಿಂತು ಸವಾಲು ಹಾಕಿ ಕೇಳಿತು—

'ಅಬ್ಬಾ! ಅಸಹಾಯಕಳಾದ ಹೆಂಗಸಿಗೇ ಇಷ್ಟು ಅಭಿಮಾನ! ಆ ಹೆಂಗಸಿಗಿರುವಷ್ಟು ಅಭಿಮಾನವೂ ನಿನಗಿಲ್ಲವೇ? ಆಕೆಗೇ ನಿನ್ನ ವಿಶ್ವಾಸ ಬೇಡವಾದ ಮೇಲೆ ನಿನಗೇಕೆ ಆಕೆಯ ವಿಶ್ವಾಸ? ಆಕೆಗೆ ಬೇಡವಾದ ಸ್ನೇಹ ನಿನಗೇಕೆ ಬೇಕು? ಆಕೆ ನಿನ್ನನ್ನು ಮರೆತು ಇರಬಹುದಾದರೆ, ನಿನಗೇಕೆ ಆಕೆಯ ನೆನಪು?'

ದಿನ ದಿನವೂ ಈ ಕೆಣಕು ಮಾತುಗಳನ್ನು ಕೇಳಿ ಕೇಳಿ, ದ್ರವಿಸು ತ್ತಿದ್ದ ಅವನ ಎದೆ ಕಲ್ಲಾಯಿತು; ಕಣ್ಣಲ್ಲಿ ಆಗೊಮ್ಮೆ, ಈಗೊಮ್ಮೆ ಮಿನುಗು ತ್ತಿದ್ದ ಕಂಬನಿ, ಆರಿ ಹೋಗಿ, ಅಭಿಮಾನದ ಬೆಂಕಿ ಉರಿಯಿತು.

'ಈ ಋಣಾನುಬಂಧ ಇನ್ನು ಕಡಿದುಹೋಯಿತು. ಹಾಳಾಗಲಿ'

—ಎಂದು ಕೈಯಲ್ಲಿ ಕೊನೆಗಾಣದೆ ಉರಿಯುತ್ತಿದ್ದ ಬೀಡಿಯನ್ನು ಕ ರ್ಕಶತೆಯಿಂದ ನೆಲಕ್ಕೆ ಹಾಕಿ ಹೊಸಕಿದ. ಅದರೊಂದಿಗೆ ಎದೆಯಲ್ಲಿದ್ದ ಸ್ನೇಹದ ಕಿಡಿಯೂ ಆರಿಹೋಗಿ, ಕುಳಿತ ಕಡೆ, ನೆಲದಲ್ಲಿ ಸುತ್ತಲೂ, ಹೊಸಕಿದ ಬೀಡಿಯ ತುಂಡುಗಳು, ಬೂದಿ ಬಿದ್ದಿದ್ದಂತೆ, ಸ್ನೇಹ ಆರಿದ ಎದೆಯಲ್ಲಿ ತಳೆದ ಬಿಸುಲ ನೆನಪುಗಳು ಉರುಳಿದವು.

ಇವನ ಮನದಲ್ಲಾಗುತ್ತಿದ್ದ ತುಯ್ದಾಟ, ಹೋರಾಟಗಳನ್ನು, ಇವನು ಬಾಯಿಬಿಟ್ಟು ಹೇಳದೆಯೇ ಅರ್ಥ ಮಾಡಿಕೊಂಡು, ತಾನೂ ಕಂಬನಿ ಮಿಡಿ ಯುತ್ತಿದ್ದಳು ಕಮಲಮ್ಮ. ರಾಘಣ್ಣ ಏನಾಯಿತೆಂದು ಹೇಳದೆಯೇ, ಅವನ ಚರ್ಯೆಯಿಂದಲೇ ಏನೋ ವಿರಸವಾಗಿರಬೇಕು ಎಂದು ಊಹಿಸಿ, ಅವನ ಮಿಡುಕಾಟವನ್ನು ಕಂಡು ತಾನೂ ಕೊರಗುತ್ತಿದ್ದಳು. ಆಕೆಗೆ ರತ್ನಮ್ಮನ ಸ್ವಭಾವವೂ ಗೊತ್ತು, ಮಗನ ಸ್ವಭಾವವೂ ತಿಳಿದಿತ್ತು. ಮುಂಗೋಪಕ್ಕೆ ವಶ ನಾದ ಮಗ, ತಾನೊಬ್ಬನೇ ಕೊರಗದೆ, ಜೊತೆಗೆ ಮೊದಲೇ ದುಃಖ ಭಾರ ವಾದ ರತ್ನಮ್ಮನ ಹೆಗಲ ಮೇಲೆ ಮತ್ತೊಂದು ದುಃಖದ ಬೆಟ್ಟವನ್ನು ಹೊರಿ

ಸುತ್ತಿದ್ದಾನಲ್ಲಾ ಎಂದು ದುಃಖಿಸಿ, ಏನಾಯಿತು ಎಂದು ಖಚಿತವಾಗಿ ತಿಳಿಯಲು ಅವನನ್ನೇ ನೇರವಾಗಿ ಕೇಳಲಾರದೆ, ಹೇಗಾದರೂ ಈ ವಿಷಮ ಪರಿಸ್ಥಿತಿಯನ್ನು ನಿವಾರಿಸಬೇಕು ಎಂಬ ಬಯಕೆಯಿಂದ—

'ಇವೇನೋ ರಾಘು. ನಾಲ್ಕೈದು ದಿನ ಆಯಿತು. ರತ್ನಕ್ಕನೂ ಈ ಕಡೆ ಬರಲಿಲ್ಲ. ನಾರಾಯಣನೂ ಈ ಕಡೆ ಬರಲಿಲ್ಲ. ಏನಾಯಿತೋ ಏನೋ ?'

—ಎಂದಳು.

'ಏನಾಗುತ್ತೆ. ಏನಾದರೂ ಇದ್ದರೆ ಬಂದು ಹೇಳ್ತೋಳು.'

—ಎಂದು ಆ ಮಾತಿನ ಅಂತರಾಳವನ್ನು ಅರಿತೂ ಕರ್ಕಶವಾಗಿ ಉತ್ತರ ಕೊಟ್ಟ ರಾಘಣ್ಣ.

'ಹಾಗಂದರೇನೊ. ಒಂಟಿ ಹೆಂಗಸು. ಪಾಪ. ಎಲ್ಲಾದಕ್ಕೂ ಒಬ್ಬಳೇ ದುಡೀಬೇಕು. ಏನಾದರೂ ಕಣ್ಣುನೋವು, ಮೂಗುನೋವು ಆಗಿ ಮಲಗಿದರೆ, ನೀನಿದೀಯಾ ಇಲ್ಲವೇ ಅಂತ ಕೇಳೋಕೆ ಇನ್ನೊಬ್ಬರು ದಿಕ್ಕಿಲ್ಲ. ಏನಾಯಿತೋ, ಏನೋ. ಹೋಗಿ ವಿಚಾರಿಸಿಕೊಂಡು ಬರಬಾರದೇನೋ.'

'ಹೂ. ನನಗದೇ ಕೆಲಸ. ಬೇರೆ ಕೆಲಸ ಏನೂ ಇಲ್ಲಾಂತ ತಿಳಿದುಕೊಂಡಿದೀಯಾ ?'

'ಚೆನ್ನಾಯಿತು ಕಣೋ. ನಮ್ಮೋರು ತಮ್ಮೋರು ಅಂತ ನಾವು ಇದೀವಿ ಅಂತ ತಾನೇ ಆ ಮಗು ಈ ಹಳ್ಳೀಲಿ ನಿಂತದ್ದು. ನೀನೂ ಹೀಗೆ ಮಾತಾಡಿದರೆ ಏನಾದ ಹಾಗಾಯಿತು ಹೇಳು. ಹೋಗಲಿ ಬಿಡು. ನಿನಗೆ ಪುರಸೊತ್ತಿಲ್ಲದಿದ್ದರೆ ನಾನೇ ಹೋಗಿ ನೋಡಿಕೊಂಡು ಬರುತ್ತೀನಿ.'

—ಎಂದಳು ಕಮಲಮ್ಮ.

'ಊಹೂ. ನೀನೂ ಹೋಗಕೂಡದು.'

—ಎಂದ ರಾಘಣ್ಣ, ನಿರ್ದಾಕ್ಷಿಣ್ಯವಾಗಿ.

'ಏಕೆ ?'

—ಮಗನ ಮಾತನ್ನು ಕೇಳಿ ಏನೂ ತಿಳಿಯದವಳಂತೆ ಕೇಳಿದಳು.

'ಯಾಕೆ, ಏನು ಆ ಪಂಚಾಯ್ತಿ ಎಲ್ಲಾ ಬೇಕಿಲ್ಲ. ಅವಳ ಮನೆಕಡೆ ನಾನು ಕಾಲಿಡೊಲ್ಲ.' ನೀನೂ ಹೋಗಕೂಡದು.

‘ ಅನ್ನು , ಹೀಗನ್ನೋ ಅಂಥ ತಪ್ಪು ಏನು ಮಾಡಿದಳು ರತ್ನಕ್ಕ ? ಅದಾರ ಹೇಳು.’

—ಕಮಲಮ್ಮ ಅವನ ಹೃದಯದಲ್ಲಿದ್ದ ಮಾತನ್ನು ಹೊರಡಿಸಲು ಕೇಳಿದಳು.

‘ ಅದೆಲ್ಲಾ ಹೇಳೋಕೆ ನನಗೆ ಹೊತ್ತೂ ಇಲ್ಲ, ಮನಸ್ಸೂ ಇಲ್ಲ. ಇಲ್ಲದ್ದನ್ನ ನೀನು ಕೆಣಕಿ ಕೇಳೋದೂ ಬೇಡ. ರತ್ನಕ್ಕನಿಗೂ ನಮಗೂ ಇನ್ನು ಸಂಬಂಧ ಇಲ್ಲ. ನೀನೂ ಹಾಗೇ ಅಂದುಕೊಂಡು ಇದ್ದು ಬಿಡು.’

‘ ನಿನಗೆ ಅಷ್ಟು ಬೇಜಾರಾದರೆ ಹೋಗಲಿ ಬಿಡು. ನಾನ್ಯಾಕೆ ಹೋಗ ಬಾರದು ? ’

‘ಏಕೆ ಅಂದರೆ ಅದಕ್ಕೇ. ಮಗನ ಮರ್ಯಾದೆಗಿಂತ, ಅವಳ ಮೇಲಿನ ಮೋಹಾನೇ ಹೆಚ್ಚಾದರೆ ಹೋಗು. ಆದರೆ, ನೀನು ಅವಳ ಮನೆಗೆ ಹೋದ್ರೆ, ಆ ಗಳಿಗೆಯಿಂದ ಈ ಮನೇಲಿ ನಾನು ಇರೋಲ್ಲ.’

—ಸಿಡಿದು ಹೇಳಿದ ರಾಘಣ್ಣ. ಆ ಮಾತು ಕೇಳಿ ಕಮಲಮ್ಮನ ಎದೆಯಲ್ಲಿ ಚೂರಿಯಿಂದ ಇರಿದಂತಾದರೂ, ಅದನ್ನು ತೋರ್ಪಡಿಸಿಕೊಳ್ಳದೆ, ಅವನ ಮಾತನ್ನೇ ಲೆಕ್ಕಕ್ಕೆ ತಂದುಕೊಳ್ಳದಂತೆ ಮೃದುವಾಗಿ ನಕ್ಕಳು. ಆಕೆಯ ನಗೆಯಿಂದ ರಾಘಣ್ಣನ ಸಿಟ್ಟು ಆರದೆ, ಮತ್ತಷ್ಟು ಹೆಚ್ಚಿ—

‘ ಇದು ನಗೋ ಮಾತಲ್ಲಮ್ಮ ನಾನು ಹೇಳ್ತಾ ಇರೋದು—ಖಂಡಿತ. ನಿನ್ನ ಮಗ ನಿನಗೆ ಬೇಕಿದ್ರೆ ನೀನು ಆ ಮನೆ ಕಡೆ ಕಾಲಿಡ ಕೂಡದು ಅಷ್ಟೆ. ಅಷ್ಟಕ್ಕೂ ಮೀರಿ ಹೋಗೋದಾದ್ರೆ ನಿನ್ನ ಪಾಲಿಗೆ ಮಗ ಇಲ್ಲ ಅಂದುಕೊಂಡು ಹೋಗು.’

—ಎಂದು ಹೇಳಿ, ಆ ಮಾತನ್ನು ಮುಂದುವರಿಸಲು ಇಚ್ಛೆ ಇಲ್ಲದೆ ಎದ್ದು ಹೋದ ರಾಘಣ್ಣ.

ರಾಘಣ್ಣನ ಮಾತು ಕೇಳಿ, ಕಮಲಮ್ಮನ ಕಣ್ಣುಗಳಲ್ಲಿ ನೀರು ತುಂಬಿತು.

‘ ಶಿವ ಶಿವಾ, ಯಾವ ಕೇಡಿಗೆ ಇವನಿಗಿಷ್ಟು ಸಿಟ್ಟು ಕೊಟ್ಟೆ ? ’

—ಎಂದು ಮಮ್ಮಲ ಮರುಗಿದಳು.

‘ ರತ್ನಾ—ಇದೇನು ಹೊಸ ವಿಪತ್ತು ನಿನಗೆ ? ’

—ಎಂದು ಕೊರಗಿದಳು.

ರಾಘಣ್ಣನ ಸಿಟ್ಟಿನ ಮಾತಿನಿಂದ ಹೆದರಿದ ಆಕೆಯ ಹೃದಯ, ಆ ಗಳಿಗೆಯಲ್ಲೇ ರತ್ನಮ್ಮನ ಬಳಿಗೆ ಹಾರಿ ಹೋಗಲು ಹಾರೈಸಿತು. ಆದರೆ ಮಗನ ಸ್ವಭಾವವನ್ನರಿತ ಆಕೆ, ಅವನ ಮಾತಿಗೆ ವಿರುದ್ಧವಾಗಿ ತಾನು ರತ್ನಮ್ಮನ ಮನೆಗೆ ಹೋದರೆ, ಅವನಿಂದ ಪರಿಸ್ಥಿತಿ ಸರಿ ಹೋಗದೆ, ಮತ್ತಷ್ಟು ಕೆಡಬಹುದು ಎಂದು ಹೆದರಿ, ಆ ಹೊತ್ತಿನಲ್ಲಿ ಏನು ಮಾಡಬೇಕೆಂದು ತೋಚದೆ, ತನ್ನ ಎದೆಯ ಬೇನೆಯನ್ನು ಗಂಡನ ಮುಂದೆ ತೋಡಿಕೊಂಡಳು.

ಕೀಲು ನೋವಿನಿಂದ ಹಾಸಿಗೆ ಹಿಡಿದು ಮಲಗಿದ ಶ್ರೀನಿವಾಸರಾಯರಿಗೂ ಕಮಲಮ್ಮ ಹೇಳಿದುದನ್ನು ಕೇಳಿ ಸಿಡಿಲು ಬಡಿದಂತಾಯಿತು.

' ಇದ್ದಕ್ಕಿದ್ದ ಹಾಗೇ ಇದ್ಯಾಕಿಷ್ಟು ಹಳಸಿಕೊಂಡಿತು ? '

—ಎಂದು ಅವರೂ ಮರುಗಿದರು. ಯೋಚಿಸಿ ಯೋಚಿಸಿ ಕಡೆಗೆ–

' ಅವನ ಸ್ವಭಾವ ನಿನಗೆ ಗೊತ್ತಿಲ್ಲವೇ ? ಏನೋ ಮಾತು ಕೇಳಿ ಅವನಿಗೆ ಬೇಜಾರಾಗಿರಬೇಕು. ಮೊದಲೇ ಮುಂಗೋಪಿ. ಅದಕ್ಕೇ ಇಷ್ಟು ಎಗರಾಡ್ತಾ ಇದಾನೆ. ಆದರೆ ಈ ಸಿಟ್ಟೆಲ್ಲಾ ಎಷ್ಟುದಿನ ಇರುತ್ತೆ ? ರತ್ನಕ್ಕ ಅಂದರೆ ನನಗಿಂತ, ನಿನಗಿಂತ ಅವನಿಗೆ ಪ್ರೀತಿ. ಎರಡು ದಿನ ಕಳೆದರೆ ಸಿಟ್ಟು ಆರಿ ಹೋಗಿ, ಮತ್ತೆ ಪ್ರೀತಿ ಬರುತ್ತೆ'

—ಎಂದರು.

' ಅವನೇನಾದರೂ ಮಾಡಿಕೊಳ್ಳಲಿ, ನಾನೂ ಹೋಗಕೂಡದು ಅಂತ ಕಟ್ಟು ಮಾಡಿದಾನಲ್ಲಾ ?'

' ಆಯಿತು. ಹಾಗೂ ಆಗಲಿ ಅಂತ ಎರಡುದಿನ ಇದ್ದುಬಿಡು. ಅವನು ಬೇಡ ಅಂದದ್ದು ಮಾಡಿ, ಸಿಟ್ಟು ಬೆಳೆಯೋ ಹಾಗೆ ಮಾಡಿದರೆ ಅದರಿಂದ ರತ್ನಕ್ಕನಿಗೂ ಹಿತವಿಲ್ಲ, ನಿನ್ನ ಜೀವಕ್ಕೂ ಸುಖವಿರೋದಿಲ್ಲ.'

—ಎಂದು ಸಲಹೆ ನೀಡಿದರು.

ಆ ಸಲಹೆ ಸೂಕ್ತವೆಂದು ಕಮಲಮ್ಮನಿಗೆ ತೋರಲಿಲ್ಲ. 'ಎರಡು ದಿನಕ್ಕೆ ಈ ಸಿಟ್ಟು ತಮ್ಮಣೆಯಾಗಬಹುದು' ಎಂದೂ ಆಕೆಗೆ ಅನಿಸಲಿಲ್ಲ.

ಆದರೂ ಈ ಹೊತ್ತಿನಲ್ಲಿ ಏನು ಮಾಡುವುದಕ್ಕೂ ತೋಚದೆ–

' ಭಗವಂತಾ, ಈ ಕತ್ತಲಿನಿಂದ ನೀನೇ ಕಾಪಾಡಬೇಕು '

—ಎಂದು ದೇವರ ಮೇಲೆ ಭಾರಹಾಕಿ ಸುಮ್ಮನಾದಳು.

* * *

ರಾಘಣ್ಣ ಮನೆಯ ಕಡೆ ಮತ್ತೆ ಸುಳಿಯಲಿಲ್ಲ.

ಹೋಗಲಿ—ಅವನಿಗಂತೂ ಸಿಟ್ಟು.

ತಾಯಿಗಿಂತ ತಾಯಿಯಾದ ಕಮಲಮ್ಮನೂ ಬರಲಿಲ್ಲ.

ದಿನದಿನವೂ ಅಜ್ಜಿಯ ಮನೆಗೆ ಹೋಗಬೇಕು ಎನ್ನುತ್ತಿದ್ದ ನಾರಾಯಣನಿಗೆ ಸುಳ್ಳು ನೆಪ ಹೇಳಿ ತಡೆ ತಡೆದು 'ಎಲ್ಲರಿಗೂ ನಾನಿಷ್ಟು ಬೇಡವಾಗಿ ಹೋದೆನೇ?' ಎಂದು ಕೊರಕೊರಗಿ, 'ಅವರು ಬರದಿದ್ದರೆ ಹೋಗಲಿ. ನಾನೇ ಹೋಗಿ ಬರಬಾರದೇಕೆ?' ಎಂದು ಚಿಂತಿಸಿದ ರತ್ನಮ್ಮ, ಸಿಟ್ಟಿನ ಹೊತ್ತಿನಲ್ಲಿ ಆ ಮನೆಗೆ ಹೋಗಲೂ ಹೆದರಿ 'ಇವತ್ತಲ್ಲ, ನಾಳೆ ರಾಘಣ್ಣ ಬರ್ತಾನೆ, ರಾಘಣ್ಣ ಬರದೇ ಹೋದರೂ ಏನಾಯಿತು ಅಂತ ವಿಚಾರಿಸಿ ಕೊಂಡು ಹೋಗಲಿಕ್ಕಾದರೂ, ಕಮಲತ್ತೇನಾದರೂ ಬಂದೇ ಬರ್ತಾಳೆ' ಎಂದು ಕಿಡಿ ಆಸೆಯನ್ನೇ ದೊಡ್ಡ ದೀಪವಾಗಿ ಮಾಡಿಕೊಂಡು, ಎದೆ ತುಂಬಾ ಅದನ್ನು ಬೆಳಗಿಸಿಕೊಂಡು, 'ಯಾವ ಗಳಿಗೆಯಲ್ಲಾದರೂ, ಯಾರಾದರೂ ಬಂದು ಬಾಗಿಲು ತಟ್ಟಬಹುದು' ಎಂದು ಕಾದಳು.

ಯಾರೂ ಬರಲಿಲ್ಲ.

ರಾಘಣ್ಣನೂ ಇಲ್ಲ; ಕಮಲಮ್ಮನೂ ಇಲ್ಲ.

ಸದ್ದುಮಾಡದೆ, ಮೂಕವಾಗಿ ನಿಂತಿತ್ತು ತೇಗದ ಮರದ ತಲೆ ಬಾಗಿಲು.

'ಯಾರೂ ಇಲ್ಲ, ಯಾರೂ ಬರುವುದಿಲ್ಲ'

—ಎಂದು ಸುಯ್ಗರೆದಿತು. ಕರೆ ಧ್ವನಿಯನ್ನು ನಿರೀಕ್ಷಿಸಿ, ನಿರೀಕ್ಷಿಸಿ ವಿಫಲವಾದ ಅವಳ ಹೃದಯ.

'ಇಷ್ಟೇನೇ....ಇಷ್ಟೇನೇ....ಕೊನೆಗಿಷ್ಟೇನೇ....ಯಾರಿಗೂ ಬೇಡವಾದ ಕಾಲ ಕಸವೇ ನಾನು?'

—ಎಂದು ತನ್ನ ಮೇಲೇ ತಾನು ಬೇಸರಪಟ್ಟುಕೊಂಡಳು ರತ್ನಮ್ಮ.

'ಎಲ್ಲರಿಗೂ ಅಷ್ಟೆ. ಅವರ ಮೂಗಿನ ನೇರಕ್ಕೆ ನಾವು ನಡೆಯೊ ವರೆಗೂ ಎಲ್ಲರಿಗೂ ನಾವು ಬೇಕು. ಎಳ್ಳು ಕಾಳು ಮುಳ್ಳು ಮೊನೆಯಷ್ಟು

ತಪ್ಪಿದರೂ ಬೇಡದ ವಸ್ತುವಾಗಿ ಹೋಗುತ್ತೀವೆ. ಅಂತಃಕರಣ, ಅಭಿಮಾನ ಯಾರಿಗೂ ಬೇಡ. '

—ಎಂದು ಜಗತ್ತಿನ ಮೇಲೇ ಬೇಸರಪಟ್ಟುಕೊಂಡು—

' ಅಜ್ಜಿ ಮನೆಗೆ ಹೋಗ್ತೀನಿ....ಅಜ್ಜಿ ಮನೆಗೆ ಹೋಗ್ತೀನಿ'

—ಎಂದು ಹಟ ಹಿಡಿದ ಮಗನ ಕೆನ್ನೆಗೆ ಹೊಡೆದು—

' ಬಾಯ್ಮುಚ್ಚಿಕೊಂಡು ಬಿದ್ಕೊಳ್ಳೋ '

– ಎಂದು ಗದರಿದಳು.

ತಾಯಿಯಿಂದ ಏಟುತಿಂದ ನಾರಾಯಣ, ಅತ್ತು ಅತ್ತು ಬಳಲಿ ಮಲಗಿಕೊಂಡ. ರತ್ನಮ್ಮನ ಹೃದಯವೂ ಮೌನವಾಗಿ ಅತ್ತು, ಅತ್ತು ಸುಮ್ಮನಾಯಿತು.

ರಾಘಣ್ಣ ಬರಲಿಲ್ಲ, ಕಮಲಮ್ಮನೂ ಬರಲಿಲ್ಲ; ರತ್ನಮ್ಮನೂ ಹೋಗಲಿಲ್ಲ.

ತೇಗದ ಮರದ ತಲೆ ಬಾಗಿಲು ಗರಬಡಿದಂತೆ ಸುಮ್ಮನೆ ನಿಂತಿತ್ತು—
ಅದನ್ನು ತಟ್ಟುವವರೂ ಇಲ್ಲ. ತೆರೆಯುವವರೂ ಇಲ್ಲ.

## ೨

ತಮ್ಮ ತಮ್ಮಲ್ಲಿ ಮೂಡಿದ ಈ ವಿರಸವನ್ನು ರತ್ನಮ್ಮನಾಗಲಿ, ರಾಘವೇಂದ್ರರಾಯನಾಗಲಿ ಯಾರ ಮುಂದೂ ಹೇಳಿಕೊಳ್ಳಲಿಲ್ಲ. ಆದರೆ ಯಾರೂ ಬಾಯಿಬಿಟ್ಟು ಆಡದಿದ್ದರೂ, ಅದು ಬಹು ದಿನ ಗುಟ್ಟಾಗಿ ಉಳಿಯಲಿಲ್ಲ.

ಕೆಲಸವಿರಲಿ, ಬಿಡಲಿ, ದಿನಕ್ಕೆ ಹತ್ತು ಬಾರಿ ರಾಘಣ್ಣ ರತ್ನಮ್ಮನ ಮನೆಗೆ ಹೋಗುತ್ತಿದ್ದುದು ಹಳ್ಳಿಯಲ್ಲಿ ಎಲ್ಲರಿಗೂ ತಿಳಿದ ವಿಷಯವಾಗಿತ್ತು. ವಿಶೋಬ ತಂದೊಡ್ಡಿದ ಪ್ರಸಂಗದಿಂದಾಗಿ, ಹಳ್ಳಿಯ ಬಹು ಜನದ ಕುತೂಹಲದ ಕಣ್ಣು ರತ್ನಮ್ಮನ ಮನೆಗೆ ಯಾರು ಬರುತ್ತಾರೆ, ಯಾರು ಹೋಗುತ್ತಾರೆ ಎಂಬುದನ್ನು ನೋಡುತ್ತಲೇ ಇತ್ತು. ಕೆಲವು ಕಣ್ಣುಗಳಿಗೆ ಬರೀ ಕುತೂಹಲ; ಮತ್ತೆ ಕೆಲವಕ್ಕೆ ಆಸಕ್ತಿ.

ಹಾಗಿದ್ದಾಗ–

ದಿನವೂ ಹತ್ತಾರು ಬಾರಿ ರತ್ನಮ್ಮನ ಮನೆಗೆ ಹೋಗುತ್ತಿದ್ದ ರಾಘಣ್ಣ ಹತ್ತಾರು ದಿನಗಳಾದರೂ ಆ ಮನೆಯ ಕಡೆ ಸುಳಿಯದಿದ್ದುದು, ರತ್ನಮ್ಮನೂ ಆ ಮನೆಯ ಕಡೆ ಹೋಗದಿದ್ದುದು, ಆ ಕಣ್ಣುಗಳಿಗೆ ಕಾಣದೆ ಹೋಗಲಿಲ್ಲ.

ಅದನ್ನು ಕಂಡು,

ಕುತೂಹಲದ ಕಣ್ಣುಗಳು ಹೀಗೇಕೆ ಎಂದು ವಿಸ್ಮಯಗೊಂಡವು.

“ ಭೇಷ್, ನಾವು ಅಂದುಕೊಂಡಹಾಗೇ ಆಯಿತು’

–ಎಂದು ಆಸಕ್ತಿ ತುಂಬಿದ ಕಣ್ಣುಗಳು ತೃಪ್ತವಾದವು.

ವಿಠೋಬ, ಈರಮ್ಮ, ಚಿನ್ನೋಬಯ್ಯ ಇವರಿಗೆ ತಮ್ಮ ದಾಳ ಬಯಸಿದ ಗರವನ್ನು ಉರುಳಿಸಿತು. ಇನ್ನು ತಮ್ಮ ಆಟದಲ್ಲಿ ಸೋಲಿಲ್ಲ ಎಂದು ತೃಪ್ತಿಯಾಯಿತು. ತಮ್ಮ ಕಾರ್ಯವನ್ನು ಮುಂದುವರಿಸಲು ಉತ್ಸಾಹ ಮೂಡಿತು.

ಆದರೆ ರಾಘಣ್ಣ ಮೊದಲಿನ ಹಾಗೆ ರತ್ನಮ್ಮನ ಬಳಿ ಹೋಗುತ್ತಿಲ್ಲ ವೆನ್ನುವುದು ತಿಳಿದೂ, ತಮ್ಮ ಕೆಲಸ ಮಾಡಿಕೊಳ್ಳಲು ಚಿನ್ನೋಬಯ್ಯ ದುಡು-ಕಲಿಲ್ಲ.

'ಯಾಕೋ ಜಾನುಬೋಗ್ರು ರತ್ನಮ್ಮನ ಮನೆತಾವಾನೇ ಹೋಗೋ ಹಂಗೆ ಕಾಣೋಕಿಲ್ಲ.

—ಎಂದಳು ಈರಮ್ಮ ಹಳ್ಳಿಯವರ ಮನಸ್ಸಿನಲ್ಲಿದ್ದ ಮಾತನ್ನು ಬಹಿ-ರಂಗವಾಗಿ ಆಡಿ.

'ಹೋಗ್ಲಿ ಬಿಡು. ಪೀಡೇನೇ ಕಳೀತು. ಇನ್ನು ನಮ್ಮ ಕೆಲ್ಸ ಹಾಯಾಗಿ ಮಾಡ್ಕೋಬಹುದು. ಇನ್ಮ್ಯಾಲೆ ರತ್ನಕ್ಕ ನಾನೇಳ್ದಂಗೆ ಕೇಳ್ತಾಳೆ.'

—ಎಂದ ವಿಠೋಬ ಉತ್ಸಾಹದಿಂದ.

'ಹಂಗೆಲ್ಲಾ ದುಡುಕೋಕೆ ಹೋಗ್ಬಾರ್ದು ಇಠೋಬ. ಯಾರ ಯಾರ ಮನಸ್ಸಿನಾಗೆ ಹೆಂಗೆಂಗೈತೊ. ಯಾರು ಬಲ್ಲು. ಎಲ್ಲಾ ದಿನ ಸುಮ್ನಿರು-ಎಲ್ಲೋಗ್ತಾರೆ.'

—ಎಂದು ಆಡಿ ಉತ್ಸಾಹದ ವಿಠೋಬನನ್ನು ಎಚ್ಚರಿಸಿ, ಚಿನ್ನೋ-ಬಯ್ಯ, ಪರಿಸ್ಥಿತಿಯನ್ನೇ ಕಾಯುತ್ತಾ ಕುಳಿತ ರತ್ನಮ್ಮ-ರಾಘಣ್ಣ ಇವರ ನಡುವಿನ ವಿರಸ ತೋರಿಕೆಯದೋ, ಸಹಜವಾದದ್ದೋ, ಕ್ಷಣಿಕವಾದದ್ದೋ ಶಾಶ್ವತವಾದದ್ದೋ ಎನ್ನುವುದನ್ನು ಖಚಿತ ಮಾಡಿಕೊಳ್ಳದೆ ಯಾವ ವಿಷಯ-ದಲ್ಲೂ ಮುಂದುವರಿಯಲು ಅವನಿಗೆ ಉತ್ಸಾಹವಿರಲಿಲ್ಲ. ರತ್ನಮ್ಮನ ನಂಬಿಕೆ-ಯನ್ನು ಗಳಿಸಿಕೊಂಡ ಅವನು ರಾಘಣ್ಣನನ್ನು ಕೆಣಕುವಷ್ಟು ಧೈರ್ಯವಾ-ಡಿದ್ದ. ತನ್ನ ಮಾತಿನಿಂದ ಅವರ ನಡುವೆ ವಿರಸ ಮೂಡಬಹುದು ಎಂದೂ ಅವನು ನಿರೀಕ್ಷೆ ಮಾಡಿದ್ದ, ಆದರೆ ಆ ವಿರಸದ ಲಘುಬಿಗಿಯನ್ನು ಅರಿತು-ಕೊಳ್ಳದೆ, ಮುಂದೆ ನುಗ್ಗಬಾರದು ಎಂದು ನಿಶ್ಚಯ ಮಾಡಿಕೊಂಡು, ಅಂತರ್ಯ ಹೇಗಿದೆಯೋ ಎಂದು ತಿಳಿದುಕೊಳ್ಳುವ ಸಲುವಾಗಿಯೇ, ನಾಲ್ಕು

ದಿನ ಕಾದು ಬಳಿಕ ತಾನೇ ರತ್ನಮ್ಮನ ಮನೆಯತ್ತ ಹೊರಟ.

ಕೆಲವು ದಿನಗಳ ಬಳಿಕ ತಾನಾಗಿಯೇ ಬಂದ ಚಿನ್ನೋಬಯ್ಯನನ್ನು ಕಂಡು, ರತ್ನಮ್ಮನಿಗೆ ತಾನು ಈರಮ್ಮನಿಗೆ ಕೊಡಬೇಕಾದ ಸಾಲದ ನೆನಪಾಗಿ, ಅದನ್ನು ಕೇಳಲು ಬಂದನೇನೋ ಎಂದು ಗಾಬರಿಯಾಯಿತು. ಆದರೆ ಚಿನ್ನೋಬಯ್ಯ ಆ ಮಾತನ್ನು ಎತ್ತದೆ–

'ಈಗೆಲ್ಡು ಮೂರು ಸಾರಿ ಬಂದಿದ್ದೆ. ಮನೆ ಬಾಕ್ಲು ಹಾಕಿತ್ತು. ಮೈಲಿ ಹುಸಾರಿಲ್ವೇನೊ ಈಗ್ಯಾಕೆ ತೊಂದ್ರೆಕೊಡೋದು ಅಂತ ಹಂಗೆ ಹೊಂಟೋದೆ. ಈಗ ಹುಸಾರಾಗಿದೀರಾ ?'

—ಎಂದು ಕುಶಲಪ್ರಶ್ನೆ ಮಾಡಿದ.

'ಇಲ್ಲ. ಮೈಗೇನೂ ತೊಂದರೆ ಇಲ್ಲ. ನೀವು ಬಂದಾಗ ಒಳಗೆಲ್ಲೋ ಇದ್ದೇಂತ ಕಾಣುತ್ತೆ. ಅದಕ್ಕೇ ಬಾಗಿಲು ಹಾಕಿದ್ದಿರಬೇಕು'

—ಎಂದಳು ರತ್ನಮ್ಮ.

'ಅಷ್ಟೇನಾ ? ಅದುಕೇಳಿ ಹಾಲು ಕುಡಿದಂಗಾಯ್ತು. ಮೈಲಿ ನೆಟ್ಟಗಿಲ್ಲೇನೋ ಅಂತ ಭಾರಿ ಚಿಂತೆ ಆಗಿತ್ತು. ಹಂಗೇ ಇನ್ನೊಂದು ಮಾತೂ ಕೇಳ್ದೆ, ಅದರದೂ ವಸಿ ಯೋಚನೆ ಆಗಿತ್ತು........'

—ಎಂದ ಮಾತನ್ನು ಅರ್ಧಕ್ಕೇ ನಿಲ್ಲಿಸಿ.

'ಏನು ಮಾತು ?'

'ನಿಮ್ಗೂ ರಾಘಣ್ಣಂಗೂ ಏನೋ ಮಾತಾಯ್ತಂತೆ........'

'ಯಾರು ಹೇಳಿದ್ರು ?'

—ತನ್ನ ರಾಘಣ್ಣನ ನಡುವಿನ ವಿರಸದ ಮಾತು ಅಷ್ಟು ಬೇಗ ಹಳ್ಳಿಯಲ್ಲಿ ಹರಡಿತೆಂಬುದನ್ನು ಕೇಳಿ ಆಶ್ಚರ್ಯಚಕಿತಳಾಗಿ ಕೇಳಿದಳು ರತ್ನಮ್ಮ.

'ಹಿಂಗೇ ಊರೆಲ್ಲಾ ಮಾತಾಡ್ಕೋತದೆ. ಅದೇನು ನಿಜಾನೋ ಸುಳ್ಳೋ ಕೇಳ್ಕೊಂಡೊಗಾಣಾಂತ ಬಂದೆ.'

'ಹಾಗೇನೂ ಇಲ್ಲವಲ್ಲ,'

—ಸತ್ಯವನ್ನು ಮರೆಮಾಡಲು ಹೇಳಿದಳು ರತ್ನಮ್ಮ.

'ಹಂಗಾದ್ರೆ ಹೆಂಗೈತೋ ಭಗವಂತನಿಗೇ ಗೊತ್ತು. ಬ್ಯಾರೇರ ಮಾತಾಗಿದ್ರೆ ನಾನೂ ಅಷ್ಟು ನಂಬ್ತಿರಲಿಲ್ಲ. ಯಾರ ಮುಂದೋ ರಾಘಣ್ಣನೇ

ಹೇಳಿದ್ನಂತೆ. ಅದಕ್ಕೇ ವಿಚಾರಿಸ್ಕೋಣಾಂತ ಬಂದೆ........'

'ರಾಘಣ್ಣನೇ ಹೇಳಿದನಂತೆಯೇ........?'

'ಹೂ. ಹಂಗಂತ್ರು.'

ಚಿನ್ನೋಬಯ್ಯ ಹೇಳಿದುದನ್ನು ಕೇಳಿ ರತ್ನಮ್ಮನಿಗೆ, ತಮ್ಮ ಆಂತರ್ಯದ ವಿಷಯವನ್ನು ಊರ ಮುಂದೆ ಆಡಿದನಲ್ಲಾ ಎಂದು ರಾಘಣ್ಣನ ವಿಷಯದಲ್ಲಿ ಕೊಂಚ ಅಸಮಾಧಾನವಾಯಿತು. ಹಾಗೇ ಆತ ತಾನಾಗಿಯೇ ಎಲ್ಲರ ಮುಂದೂ ಹೇಳುತ್ತಿರುವ ವಿಷಯವನ್ನು ತಾನೇಕೆ ಮುಚ್ಚಿಡಲು ಯತ್ನಿಸಬೇಕು ಎನಿಸಿ—

'ಹೂ. ಏನೋ ಎಗಡು ಮಾತಾಯ್ತು.'

—ಎಂದಳು.

'ಅಷ್ಟೇನಾ ಮತ್ತೇನೊ ಈ ಮನೆಕಡೆ ತಲೆ ಇಟ್ಟು ಮಲಗೋಕಿಲ್ಲಾಂದ್ನಂತೆ........'

—ತನಗೆ ತಿಳಿಯದ ವಿಷಯವನ್ನು ತಿಳಿದವನ ಹಾಗೇ ಕೇಳಿದ ಚಿನ್ನೋಬಯ್ಯ.

'ಹೂ.'

—ಸತ್ಯವನ್ನು ಹೇಳದೆ ಬೇರೆದಾರಿಯೇ ಕಾಣದೆ, ಚಿನ್ನೋಬಯ್ಯನಿಗೆ ಎಲ್ಲ ವಿಷಯವೂ ತಿಳಿದಿರಬೇಕೆಂದು ನಂಬಿ ಹೇಳಿದಳು ರತ್ನಮ್ಮ.

'ಅಷ್ಟು ಸಿಟ್ಟು ಯಾಕಂತೆ?'

'ಈರಮ್ಮನ ಸಾಲದ ವಿಷಯ ನಿಮಗೆ ಒಪ್ಪಿಸಿದೇಂತ.'

'ಹಂಗೋ. ಹಿಂಗಾಗುತ್ತೇಂತ ನನಗಾಗಲೇ ಗೊತ್ತಿತ್ತು.'

'ಅಂದ್ರೆ........'

'ನೀನೇನೊ ತಿಳೀದ ಹೆಣ್ಣು ರತ್ನಕ್ಕ. ಭಾಳ ಬ್ಯಾಗ ಎಲ್ಲಾರ್ನೂ ನಂಬಿಬಿಡ್ತೀಯ. ಈ ಕಲಿಕಾಲದಾಗೆ ಹಂಗಿದ್ರೆ ಆಗೋಕಿಲ್ಲ.'

'ಏಕೆ?'

'ನಿನ್ನ ಹತ್ತಿರ ತಮ್ದೇನಾದ್ರೂ ಆಗೋಕೆಲ್ಸ ಇದ್ರೆ, ಎಲ್ಲಾ ಬೆಲ್ಲಕ್ಕೆ ನೊಣ ಮುತ್ತೋಹಂಗೆ ಮುತ್ಕೋತಾರೆ. ಆದಿಲ್ಲಾಂದ್ರೆ ಎಲ್ಲಿದ್ದೋರು ಅಲ್ಲೇ ಮಾಯ್ವಾಗಿ ಹೋಗ್ತಾರೆ. ಹೋಗ್ಲಿ ಬಿಡು. ಅವರಿವರ ಮಾತೆಲ್ಲಾ

ನಾನ್ಯಾಕೆ ಆಡ್ಲಿ.'

—ಎಂದ ಚಿನ್ನೋಬಯ್ಯ ಯಾವುದೋರಹಸ್ಯವನ್ನು ಹೇಳಲು ಇಚ್ಛೆ ಇಲ್ಲದವನಂತೆ—

' ಅದೇನು ಹೇಳು ಚಿನ್ನೋಬಣ್ಣ'

—ಚಿನ್ನೋಬಯ್ಯನ ಮಾತಿನಿಂದ ಕೆಣಕಿದ ಕುತೂಹಲವನ್ನು ತಡೆಯಲಾಗದೆ ಕೇಳಿದಳು ರತ್ನಮ್ಮ.

' ಇನ್ನೇನು ಹೇಳು, ನಿನಗೆ ಒಳ್ಳೇದು ಮಾಡ್ತಾಗೆ ಮಾಡಿ, ಶಾನುಭೋಕೀನ ತಾನು ಒಳಗೆ ಹಾಕಿಕೋಬೇಕು ಅಂತ ಇದ್ದ ರಾಘಣ್ಣ. ಆ ವಿಷ್ಯ ನಮಗೆಲ್ಲಾ ತಿಳ್ದು ಗುಟ್ಟುಯಾವಾಗ ಹೊರಗೆ ಬೀಳುತ್ತೇಂತ ಗೊತ್ತಾಯ್ತೋ ಆಗ, ನಿನ್ನ ಮೇಲೇ ತಪ್ಪುಹಾಕಿ ಜಾರಿಕೊಂಡ, ಅಷ್ಟೆ.'

' ರಾಘಣ್ಣ ಅಂತ ಮನುಷ್ಯನಲ್ಲ........'

—ರಾಘಣ್ಣನ ಮೇಲೆ ಅಸಮಧಾನವಿದ್ದೂ ಆ ಮಾತನ್ನು ನಂಬದೆ ಕೇಳಿದಳು ರತಮ್ಮ.

' ಅಷ್ಕೇ ಮತ್ತೆ ನಿಂಗೇನೂ ತಿಳಿಯಾಕಿಲ್ಲಾಂಪದ್ದು. ಹಂಗಲ್ಲಾಂದ್ರೆ.... ನಿನಗೆ ಒಳ್ಳೇದು ಮಾಡಬೇಕೂಂತಲೇ ಇದ್ರೆ...ಇಷ್ಟ್ಯಾಕೆ ಸಿಟ್ಟಾಗ್ಬೇಕಾಗಿತ್ತು? ಊರೆಲ್ಲಾ ಹರಟೆ ಮಾಡೋದು ಯಾಕೆ ಬೇಕಾಗಿತ್ತು? ಯಾರ್ಯೇನಾದ್ರೂ ಅವನ ಮನೆ ಗಂಟು ಎತ್ತಾಕಿದ್ರಾ? ನೀನು ತಾನೇ ಅವನ ಆಸ್ತೀನ ಕೊಡು ಅಂತ ಕೇಳಿದ್ಯಾ. ನಿನಗೆ ಅನುಕೂಲ ಮಾಡಬೇಕೂಂತಾನೇ ಇದ್ದಿದ್ರೆ, ಈಗೇನು ಮಾಡಿ ಕಡಿದದ್ದು?'

—ಪ್ರಶ್ನೆಯ ಮೇಲೆ ಪ್ರಶ್ನೆಯನ್ನು ಪೇರಿಸಿ ಕೇಳಿದ ಚಿನ್ನೋಬಯ್ಯ.

ಅವನ ಸಾಲು ಪ್ರಶ್ನೆಗಳಿಗೆ ರತ್ನಮ್ಮ ಏನೂ ಉತ್ತರ ಕೊಡದಿದ್ದರೂ, ಅಸಮಾಧಾನದಿಂದ ಕಲುಷಿತವಾಗಿದ್ದ ಅವಳ ಮನಸ್ಸಿಗೆ, ಚಿನ್ನೋಬಯ್ಯನ ಮಾತು ಅಪ್ಪಟ ಸುಳ್ಳು ಎಂದು ತೋರಲಿಲ್ಲ. ಇವರಲ್ಲಿ ಎಷ್ಟು ಸತ್ಯವಿರಬಹುದು ಎಂದು ಅವಳ ಮನಸ್ಸು ತೂಗುತ್ತಿರುವಾಗಲೇ ಆ ಸೂಕ್ಷ್ಮವನ್ನು ಅರಿತುಕೊಂಡ ಚಿನ್ನೋಬಯ್ಯ, ಈ ಹೊತ್ತನ್ನು ಬಿಡಬಾರದು ಎಂದು ಲೆಕ್ಕ ಹಾಕಿ, ತನ್ನ ಮಾತನ್ನೇ ಮುಂದುವರಿಸಿ—

' ಹೋಗ್ಲಿ ಬಿಡು ಅದೇನು ದೊಡ್ಡ ವಿಷಯಾಂತ ಅಷ್ಟು ಯೋಚ್ನೆ

ಮಾಡ್ತಿ. ಹೋದ್ರೆ ಅವನೇ ಕೆಟ್ಟ, ಅವನೊಬ್ಬ ಹೋದ್ರೆ ನಿನ್ನ ಪಾಲಿಗೆ ಊರು ಕಾಡು ಆಗ್ಹೋಯ್ತಾ? ನಿನ್ನ ಸ್ವಭಾವ ಹಿಂಗೇಂತ ಅವನಿಗೆ ಗೊತ್ತು. ಸಿಟ್ಬಾಗ್ಬಿಟ್ರೆ, ಸೆನ್ಹೋಗಿ ಅವನ ಕಾಲಿಗೆ ಬಿದ್ದು, ಎಲ್ಲಾನೂ ಅವನ ಹೆಸರಿಗೇ ಬರಕೊಟ್ಟು ಬೇಕಾದ್ದು ಮಾಡು ಅಂತ ಹೇಳ್ತೀಯೇನೋ ಅಂತ ಈ ಆಟಾ ಎಲ್ಲಾ ಕಟ್ಟವ್ನೆ. ಸೂ ಅಂದ್ರೆ ಗೊತ್ತಾಗಿಲ್ಲಾ ಮುಚ್ಚಕ್ಕಾವ ರ‍್ಗಾಗ್ಗ. ಅಹಂಕಾರಕ್ಕೆ ಉದಾಸೀನವೇ ಮದ್ದು ಅಂತ ಇಟ್ಬಿಡು. ನಿನ್ನ ಕಷ್ಟ ಸುಖಕ್ಕೆ ನಾನೂ ಪಾಲುಗಾರ್ನೇ. ನೀನು ಕಷ್ಟಪಟ್ಟು ನಾವು ಬದುಕಿದ್ರೆಷ್ಟು, ಸತ್ರೆಷ್ಟು, ನೀನೇನೂ ಯೋಚ್ನೆ ಮಾಡ್ಬೇಡ. ಅದೇನಿದ್ರೂ ನೊಡ್ಕೋತೀನಿ.'

—ಎಂದು ರತ್ನಮ್ಮನ ಕಣ್ಣೆದುರಿಗೆ ರಾಘಣ್ಣ ಮತ್ತಷ್ಟು ಕರಾಳವಾಗಿ ಕಾಣುವಂತೆ ಮಾಡಿ, ಆ ಆಪತ್ತಿನ ಹೊತ್ತಿನಲ್ಲಿ ಆಕೆಯ ಉದ್ಧಾರ ಮಾಡುವ ಭರವಸೆ ನೀಡಿದ.

'ಯಾಕೋ—ನನಗೆ ಒಂದೂ ತೋಚ್ತಾ ಇಲ್ಲ ಚಿನ್ನೋಬಣ್ಣ. ನನ್ನ ಅದೃಷ್ಟಾನೇ ಕೆಟ್ಟದು. ಹೂವು ಅಂತ ಹಿಡಿದದ್ದೆಲ್ಲಾ ಹಾವಾಗ್ತಿದೆ.'

'ಸ್ಸೈ....ಸ್ಸೈ. ಇದೇನು ಮಾತು ಬಿಡು. ಅವನೊಬ್ಬ ಹಂಗಿದ್ರೆ ಊರೆಲ್ಲಾ ಹಂಗೇ ಇರ‍್ತದಾ? ನಾನಿಲ್ವಾ, ನಾನು ನೋಡ್ಕೋತೀನಿ. ನೀನ್ಯಾವುದಕ್ಕೂ ಯೋಚ್ನೆ ಮಾಡಬೇಡ.'

'ದೇವರಿಟ್ಟ ಹಾಗಾಗಲಿ. ಅಂತೂ ನಾನು ಎಲ್ಲರಿಗೂ ಕಷ್ಟ ಕೊಡೋಕೆ ಇಲ್ಲಿ ಉಳುಕೊಂಡ ಹಾಗಾಯ್ತು.'

'ಅದೇನೂ ಇಲ್ಲ. ನಿನ್ನಂಥೋಳಿಗೆ ಆದಷ್ಟು ಸಹಾಯ ಮಾಡೋಕೆ ಅಲ್ವಾ ದೇವರು ನಮಗೆ ಶಕ್ತಿ ಕೊಟ್ಟಿರೋದು. ನಿಂಗೇನು ತೊಂದ್ರೆ ಇದ್ರೂ ನಂಗೆ ಹೇಳಿಕಳಿಸು. ಆ ಮಾತು ಹೇಳೋಕೇಂತ್ಲೆ ನಾನು ಬಂದದ್ದು. ನೀನೇನೂ ಚಿಂತೆ ಮಾಡಬೇಡ. ಹಂಗೆಲ್ಲಾ ನಂಬಿದೋರನ್ನ ಕೈ ಬಿಡೋ ಜಾಯಿಮಾನ ಅಲ್ಲ ನಂದು. ಈಗ ನನ್ನಿಂದ ಏನಾಗಬೇಕಿತ್ತು ಹೇಳು?'

—ಎಂದು ಕೇಳಿದ ಚಿನ್ನೋಬಯ್ಯ.

'ನನಗೇನೂ ಚಿಂತೆ ಇಲ್ಲ, ಚಿನ್ನೋಬಣ್ಣ. ಇರೋದೆಲ್ಲಾ ಈರಮ್ಮನ ಸಾಲದ್ದೊಂದೇ ಚಿಂತೆ.'

‘ ಅಷ್ಟೇ ತಾನೇ. ನಾಳೇನೇ ಅದು ಬಗೆಹರಿಸಿಬಿಟ್ಟೆರಾಯ್ತುಲ್ಲಾ. ನಾಳೆ ಈರಪ್ಪನ್ನೂ ಇಲ್ಲಿಗೇ ಕರಸ್ತೀನಿ. ಮುಗಿಸ್ಬಿಡು. ಅದೊಂದೇ ಅಲ್ಲ. ನೀನೂ ಅದಿಲ್ಲ ಇದಿಲ್ಲ ಅಂತ ಚಿಂತೆ ಹಚ್ಕೋಬೇಡ. ಏನಿದ್ರೂ ನನ್ಹತ್ರ ಹೇಳು. ನಾನಿನ್ನು ಬರ್ಲೀ ರತ್ನಕ್ಕ. ನೀನ್ಯಾವ್ದೂ ಕೊರಗು ಹಚ್ಚಿಕೊಳ್ದೆ ನಗ್ತಾನಗ್ತಾ ಇರು. ’

—ಎಂದು ಹೇಳಿ ಚಿನ್ನೋಬಯ್ಯ ಎದ್ದು ಹೋದ.

ಸುತ್ತಲೂ ಕತ್ತಲು ಕವಿದ ಹೊತ್ತಿನಲ್ಲಿ ಬೆಳಕಿನಂತೆ ಬಂದ ಚಿನ್ನೋಬಯ್ಯನ ಒಳ್ಳೇತನಕ್ಕೆ ಮಾರುಹೋಗಿ, ಮಾತಾಡಲೂ ತೋಚದೆ ಕುಳಿತಿದ್ದಳು ರತ್ನಮ್ಮ.

## ೩

ರತ್ನಮ್ಮನ ಮನೆಯಿಂದ ಹಿಂದಿರುಗಿದ ಚಿನ್ನೋಬಯ್ಯ ಬೀಡಿ ಹೊತ್ತಿಸಿಕೊಂಡು ಜಗಲಿಯ ಮೇಲೆ ಒರಗಿಕೊಂಡ. ರತ್ನಮ್ಮನ ಮನಸ್ಸಿನಲ್ಲಿ ತಾನು ಬಿತ್ತಿದ ವಿಷಬೀಜ ಸಫಲವಾದುದರಿಂದ ಅವನಿಗೆ ಸಮಾಧಾನವಾಗಿತ್ತು. ಇನ್ನು ರತ್ನಮ್ಮ ತಾನು ಹೇಳಿದ ಹಾಗೆ ಕೇಳುವಳು ಎಂದು ನಂಬಿಕೆಯೂ ಆಗಿತ್ತು. ಆದರೆ ಅಷ್ಟಕ್ಕೇ ತೃಪ್ತವಾಗದ ಅವನ ಮನಸ್ಸು ಭವಿಷ್ಯದ ಚಿಂತನೆ ಮಾಡುತ್ತಿತ್ತು.

ಈರಮ್ಮನ ಸಾಲದ ಹಣ ತಾನು ಕೊಡುವುದಾಗಿ ಹೇಳಿ ಬಂದಿದ್ದ ಚಿನ್ನೋಬಯ್ಯ, ಆ ಹಣವನ್ನು ತಾನೇ ಕೊಟ್ಟು, ರತ್ನಮ್ಮನನ್ನು ಸಾಲದಿಂದ ಮುಕ್ತಳನ್ನಾಗಿ ಮಾಡುವುದೇ, ಅಥವಾ ವಿಠೋಬನಿಂದ ಈರಮ್ಮನಿಗೆ ಹಣ ಬಂದ ಹಾಗೆ ಮಾಡಿಸಿ, ಆ ಹಣಕ್ಕೆ ನಂಜಾಪುರದ ಶಾನುಭೋಕಿಯನ್ನು ಅವನ ಮೇಲ್ವಿಚಾರಣೆಗೆ ಕೊಡಿಸಿ ಕೊಡುವುದೇ ಎಂದು ಚಿಂತಿಸಿದ.

ವಿಠೋಬನಿಗೆ ನಂಜಾಪುರದ ಶಾನುಭೋಕಿಯನ್ನು ವಹಿಸಿಕೊಡುವ ವಿಷಯದಲ್ಲಿ ಏಕೋ ಅವನ ಮನಸ್ಸು ಉತ್ಸಾಹ ಪಡಲಿಲ್ಲ. ರತ್ನಮ್ಮನ ಮನೆಯಲ್ಲಿ ವಿಠೋಬನಿಗೆ ಹೆಚ್ಚು ಓಡಾಡಲು ಅವಕಾಶ ಕಲ್ಪಿಸಿ ಕೊಡುವುದು ಏಕೋ ಅವನಿಗೆ ಹಿತವಾಗಿ ಕಾಣಲಿಲ್ಲ. ವಿಠೋಬನೇನು, ತಾನೊಬ್ಬನಲ್ಲದೆ, ಬೇರಾರೂ ಅಲ್ಲಿ ಓಡಾಡುವುದು ಅವನಿಗೆ ಬೇಕಿರಲಿಲ್ಲ.

ಆದರೆ ತಾನು ಮಧ್ಯಸ್ಥಿಕೆ ಮಾಡಿ, ಅದನ್ನು ವಿಠೋಬನಿಗೆ ಕೊಡಿಸಿ ಕೊಡುವುದಾಗಿ ಮಾತು ಕೊಟ್ಟಿದ್ದ. ಆ ಮಾತಿನಿಂದ ಜಾರಿಕೊಳ್ಳುವ ದಾರಿ

ಯಾವುದು ? ವಿಠೋಬನಿಗಾಗಲಿ, ಈರವ್ವನಿಗಾಗಲಿ ಕೊಂಚವೂ ಅಸಮಾಧಾನವಾಗದಂತೆ, ಇವರಲ್ಲಿ ತನ್ನದೇನೋ ಸಂಚು ಇದೆ ಎಂಬುದು ಸ್ವಲ್ಪವೂ ತಿಳಿಯದ ಹಾಗೆ, ಆ ಕಾರ್ಯವನ್ನು ಹೇಗೆ ನಿರ್ವಹಿಸುವುದು ಎಂದು ಯೋಚನೆ ಮಾಡಿದ.

ಬಹಳ ಹೊತ್ತು ಯೋಚಿಸಿ, ಕಡೆಗೇನೋ ಒಂದು ನಿರ್ಧಾರಕ್ಕೆ ಬಂದು, ಆರಿ ಹೋದ ಬೀಡಿಯನ್ನು ಮತ್ತೊಮ್ಮೆ ಹತ್ತಿಸಿಕೊಂಡು, ಈರವ್ವನ ಅಂಗಡಿಯತ್ತ ಹೊರಟ.

ಅಂಗಡಿಯ ಪಕ್ಕದ ಮನೆಯ ಬಾಗಿಲಿನಿಂದ ಒಳಗೆ ಪ್ರವೇಶ ಮಾಡಿದ ಚಿನ್ನೋಬಯ್ಯ ಎದುರಾದ ಚಿಕ್ಕರುದ್ರಿಯ ಕೆನ್ನೆಯನ್ನು ನೇವರಿಸಿ

‘ ಈರವ್ವ ಇಲ್ವಾ ರುದ್ರಾ ? ’

—ಎಂದು ಕೇಳಿದ.

‘ ಅಂಗಡೀಲವ್ಳೆ. ಈಗ್ಲೇ ಕರೀಬೇಕಾ ? ’

—ಎಂದು ಕೆಣಕು ನಗೆ ನಕ್ಕು ಕೇಳಿದಳು, ಹೊಸದಾಗಿ ಅವನವಳಾದ ಚಿಕ್ಕರುದ್ರಿ.

‘ ವಸಿ ಮಾತಾಡೋದೈತೆ. ಒಂದ್ಗಳಿಗೆ ನೀನು ಅಂಗ್ಡೀ ನೋಡ್ಕೊಂಡಿದ್ದು ಅವಳನ್ನ ಕಳಿಸ್ಕೊಡು; ಆ ಮಾತಾದ್ಮೇಲೆ ನಿನ್ದು ’

—ಎಂದು ಹೇಳಿ ಮತ್ತೊಮ್ಮೆ ಅವಳ ಕೆನ್ನೆಯನ್ನು ಹಿಂಡಿ, ಅವಳನ್ನು ಕಳಿಸಿದ.

ಚಿಕ್ಕ ರುದ್ರಿಯ ಕರೆಯಂತೆ ಈರವ್ವ ಚಿನ್ನೋಬಯ್ಯನನ್ನು ನೋಡಲು ಬಂದವಳು—

‘ಹಗಲೊತ್ನಾಗೇ ಹಿಂಗೆಲ್ಲಾ ಬರೋದಾ ? ’

—ಎಂದು ಕೇಳಿಕೊಂಡೇ ಬಂದಳು.

‘ ಹಗಲೊತ್ತಿನ ಕೆಲಸ ಇದ್ರೆ ಬರಬಾರ್ದಾ ? ’

—ಎಂದು ಕೆಣಕುವ ಧ್ವನಿಯಲ್ಲಿ ಕೇಳಿದ ಚಿನ್ನೋಬಯ್ಯ.

‘ ಯಾವ ಹೊತ್ನಾಗ ಬಂದ್ಯೋ. ಆ ಪದಾರ್ಥಾನಾ ನಿಂದು ಅಂತ ಒಪ್ಪಿಸಿನ್ನಿ. ಚಂದಾಗಿ ನೋಡ್ಕೋ. ಅವಳ್ಗೂ ಬಾಳ ಹೇಳಿ ಒಪ್ಪಿಸಿದೀನಿ. ನಿನ್ನೇ ನಂಬಿಕೊಂಡಿದಾಳೆ. ಅವಳ ಬದುಕು ಕೆಡಿಸ್ಬೇಡ. ಅಷ್ಟೇ ನಾನೇ

ಹೋದು. ಆಯ್ತು. ನನ್ಯಾಕೆ ಕರೆದದ್ದು.'

'ಯಾಕೆ-ಕರೀಬಾರ್ದಾಗಿತ್ತ ?'

'ನನ್ತಾವ ಇನ್ನೇನು ಕೆಲ್ಸ ? ಆಯ್ತು. ನಮ್ಮನ್ನೆಲ್ಲಾ ಮರೆತುಬಿಟ್ಟೆ'

—ಅಸಮಾಧಾನದ ಧ್ವನಿಯಲ್ಲಿ ಹೇಳಿದಳು ಈರಮ್ಮ.

'ಎಲ್ಲಾರಾ ಉಂಟಾ ಈರಮ್ಮ, ನಾನಂಥ ಮನುಷ್ಯನಾ ?'

'ಎಂಥೋನೋ, ಯಾರು ಬಲ್ಲರು. ಚಿನ್ನೋಬಯ್ಯಾನ ಕೆಲಸ ಆಗೋಯ್ತು. ನನ್ನ ಕೆಲಸ ಮಾಡಿಕೊಡಲಿಲ್ಲಾಂತ ದಿನಾ ಬಡ್ಕೋತಾನೆ ಆ ಇಠೋಬ. ಅದೇನಾರ ಮಾಡ್ತಾರ್ದಾ ?'

'ಹಂಗೆಲ್ಲಾ ಹಿಡಿದ ಕೆಲಸ ಬಿಡೋ ಜಾಯಮಾನಾನೇ ಅಲ್ಲ ನನ್ನದು. ವಿಠೋಬನ ವಿಷಯ ಮಾತಾಡೋಕೇಂತಲೇ ನಾನು ಈಗ ಬಂದದ್ದು. ಎಲಡಕೆ ಇದ್ರೆ ಕೊಡು.'

ಈರಮ್ಮ ಸೊಂಟಕ್ಕೆ ಸಿಕ್ಕಿಸಿಕೊಂಡಿದ್ದ ಎಲೆಯಡಿಕೆಯ 'ಸಂಚಿ'ಯಿಂದ ಎಲೆ, ಅಡಿಕೆ, ಕಡ್ಡೀಪುಡಿ, ಸುಣ್ಣದ ಡಬ್ಬಿಯನ್ನು ತೆಗೆದು, ತಾನೂ ಒಂದು ಅಡಕೆಯ ಹೋಳನ್ನು ಬಾಯಿಗೆ ಹಾಕಿಕೊಂಡು, ಎಲೆಗೆ ಸುಣ್ಣ ಹಚ್ಚಿಕೊಳ್ಳುತ್ತಾ—

'ಏನದು ?'

—ಎಂದು ಕೇಳಿದಳು.

ಚಿನ್ನೋಬಯ್ಯ ತಾನೂ ಎಲೆಯಡಿಕೆಯನ್ನು ಹಾಕಿಕೊಂಡು, ಅಷ್ಟು ಹೊತ್ತು ಏನೋ ಯೋಚನೆ ಮಾಡುವಂತೆ ಅದನ್ನು ಜಗಿಯುತ್ತಿದ್ದು, ಬಳಿಕ ಎದ್ದು ಹೋಗಿ, ಅಂಗಳದಲ್ಲಿ ಉಗುಳಿ ಬಂದು, ಕುಳಿತುಕೊಂಡು—

'ಇವತ್ತು ರತ್ನಮ್ಮನ್ನ ಕಂಡಿದ್ದೆ....'

—ಎಂದ.

'ಹೂ.'

'ರಾಘಣ್ಣಂಗೂ ಆಕೆಗೂ ಕಡಿಮೆಹೋಗಿದೆ.'

'ಆಕೇನೇ ಹೇಳಿದ್ಲೇನು ?'

'ಹೂ.'

'ಒಳ್ಳೇದಾಯ್ತು. ಪೀಡೆ ತೊಲಗಿದಂಗಾಯ್ತು. ನನ್ನ ದುಡ್ಡಿನ ಸಮಾ

ಚಾರ ಏನಾರ ಹೇಳಿದ್ಲೇನು ?'

'ಹೂ. ಅವನ್ನ ಬ್ಯಾಗ ತೀರಿಸ್ಬಿಡಬೇಕು ಅಂದ್ಲು.'

'ಹಂಗಾದ್ರೆ ಇಠೋಬನ ಕೆಲ್ಸ ಆದ್ಹಂಗೇ ಅನ್ನು.'

—ಆತುರದಿಂದ ಕೇಳಿದಳು ಈರಮ್ಮ.

'ಅದೇ ಸಿಕ್ಕು ಬಂದಿರೋದು.'

—ಎಂದ ಚಿನ್ನೋಬಯ್ಯ ಏನೋ ಗಾಢವಾದ ಯೋಚನೆಗೆ ಬಿದ್ದ ವಸಂತೆ.

'ಅಂದ್ರೆ....'

'ಈ ರಾಘಣ್ಣ ಇದಾನಲ್ಲಾ ಇವನು, ವಿಠೋಬನ ವಿಷ್ಯ ಏನೇನೋ ಹೇಳಿ ಭಾಳ ಭಯ ಹುಟ್ಟಿಸಿಬಿಟ್ಟಿದಾನೆ. ಅವನಿಗೆಕೊಟ್ರೆನಿನ್ನ ಶಾನುಭೋಕೀನೇ ಮುಳುಗೋಗ್ತದೆ, ನಿನ್ನ ಮಗನ ತಲೇ ಮೇಲೆ ಚಪ್ಪಡಿ ಎಳೀತಾನೆ ಅಂತೆಲ್ಲಾ ಏನೇನೋ ಹೇಳವನೆ. ಅದ್ಕೆ ಆಕೀನ ಆ ಮಾತಿಗೆ ಒಪ್ಸೋದು ಕಷ್ಟಆಗಿದೆ....'

'ಹಂಗಂದ್ರೆ ಇವನು ಆ ಆಶೆ ಬಿಡಬೇಕಾದ್ದೇ ಅನ್ನು.'

—ನಿರಾಶೆಯ ಆಳಕ್ಕೆ ಮುಳುಗುತ್ತಾ ಕೇಳಿದಳು ಈರಮ್ಮ.

'ಹೆಂಗೆಲ್ಲಾದ್ರೂ ಆಗೋಕೆ ನಾನು ಬಿಡ್ತೀನಾ ? ಇವತ್ತಲ್ಲ ನಾಳೆ ಅದು ವಿಠೋಬನ್ದೆ. ಆದ್ರೆ ಈಗ ಅವಸರ ಮಾಡೋಕೆ ಆಗೋದಿಲ್ಲ. ಎಲ್ಡು ದಿನ ತಡಮ ಮಾಡ್ಕೋಬೇಕು. ರಾಘಣ್ಣನ್ನ ಆಕೆ ಭಾರಿ ನಂಬ್ಕೊಂಡಿದ್ಲು. ಅವನೇ ಹಿಂಗ್ಮಾಡ್ದಾಂತ, ಈಗ ಯಾರನ್ನೂ ನಂಬೋಕೂ ಹಿಂಜರಿತಾಳೆ. ಮೊದಲಷ್ಟು ದಿನ ಆಕೆ ನಮ್ಮನ್ನ ನಂಬೋಹಾಗೆ ನಡಕೊಂಡ್ರೆ ಆಮೇಲೆ ಆ ಕೆಲಸಾ ಎಲ್ಲಾ ಸಲೀಸಾಗ್ತದೆ.'

'ಅದೆಲ್ಲಾ ಆಗ್ಬೋದು. ಮತ್ತೆ ನನ್ನ ಸಾಲಕ್ಕೇನು ಹೇಳಿದ್ಲು.'

ಆ ಯೋಚ್ನೇನೂ ಬಿಟ್ಟಿಲ್ಲ. ಅದೇ ಭಾಳ ಹಚ್ಕೊಂಡವಳೆ. ಹೆಂಗಾರ ಮಾಡಿ ಅದನ್ನು ತೀರಿಸಬೇಕು ಅಂದ್ಲು.'

'ಹೆಂಗೆ ತೀರಿಸ್ತಾಳಂತೆ ?'

'ನಾನೂ ಅದ್ಕೆ ಬಾಳ ಹೊತ್ತು ಯೋಚನೆ ಮಾಡ್ದೆ, ಒಂದು ಪ್ಲಾನು ಹೊಳೀತು. ನೀನು ಹೂ ಅಂದ್ರೆ ಆಗ್ಬೋದು.'

'ಅದೇನು ಹೇಳು.'

' ನನ್ನ ಯೋಚನೆ ಇಷ್ಟು ಈರಮ್ಮ, ನಿಂಗೂ ನಷ್ಟಆಗ್ಬಾರ್ದ್ದು, ನನ್ನ ನಂಬಿಕೊಂಡ ವಿಠೋಬನೂ ಕೆಡಬಾರ್ದ್ದು, ಆಕೆಗೂ ನಮ್ಮ ವಿಷಯದಲ್ಲಿ ಅನುಮಾನ ಬರಬಾರ್ದ್ದು, ನಂಬ್ಕೇನೂ ಬೆಳೀಬೇಕು. ಅಂಥಾದೊಂದು ಯೋಚನೆ ಮಾಡಿದೀನಿ. '

' ಅದೇನು ಯೋಚ್ನೆ ಹೇಳ್ಬಾರ್ದಾ ? '

—ತನ್ನ ಆತುರವನ್ನು ತಡೆಯಲಾರದೆ ಕೇಳಿದಳು ಈರಮ್ಮ.

' ನೋಡು—ಮೊದಲು ಯಾವ ಗದ್ದಲಊನೂ 'ಇಲ್ದೆ ನಿನ್ನ ದುಡ್ಡು ನಿಂಗೆ ಬರಬೇಕು. ಹೌದಲ್ವೋ ? '

' ಹೂ. '

' ಅದಕ್ಕೆ ನಾನು ಹಿಂಗಂದ್ಕೊಂಡಿದೀನಿ .... ನಿನಗೆ ಬರಬೇಕಾದ ಸಾಲದ ಹಣಾನ ನಾನು ರತ್ನಕ್ಕನಿಗೆ ಕೊಡೋದು. ಆಕೆ ಆ ಹಣ ನಿನಗೆ ಕೊಡ್ತಾಳೆ.... '

' ಆಯ್ತು. '

' ಆಗ ಮೊದಲು ನಿನಗೆ ಬರಬೇಕಾದ ದುಡ್ಡು ಬಂತು. ಹಂಗೇ ನನ್ನಲ್ಲೂ ಆಕೆಗೆ ನಂಬ್ಕೆ ಬರ್‍ತದೆ. ನಾಲ್ಕು ದಿನ ಸುಮ್ನಿರೋದು. ಹೆಂಗೂ ಹೆಣ್ಣೆಂಗ್ಸು. ಆಕೆ ಏನಾರ ಶಾನುಭೋಕೀ ನೋಡ್ಕೊಳ್ಳೋಕೆ ಆಗ್ತದಾ ? ಅದ್ಕೇನಾರ ಮಾಡ್ಲೇಬೇಕು. ಆಗ ಏನ್ಮಾಡಬೇಕು ಅಂತ ನಮ್ಮನ್ನೇ ತಾನೇ ಕೇಳ್ಬೇಕು. ಆ ಹೊತ್ತಿನಾಗೆ, ಸಧ್ಯಕ್ಕೆ ವಿಠೋಬ ನೋಡ್ಕೊಂಡು ಹೋಗ್ತಿರ್‍ಲಿ ಅಂದ್ರೆ ಆಕೇನೂ ಬ್ಯಾಡಾಂತ ಹೇಳೋಕೆ ಆಗೋದಿಲ್ಲ. ಹಾಗೇ ಈ ರಾಘಣ್ಣನೂ ಇಲ್ಲದ್ದೆಲ್ಲ ಮಾತಾಡೋಕೆ ಅವಕಾಶ ಇರೋದಿಲ್ಲ. ಯಾವ ಪುಕಾರೂ ಇಲ್ಲದ ಹಾಗೆ ಎಲ್ಲಾರ ಕೆಲ್ಸಾನೂ ಆಗ್ತದೆ. ಹೌದಲ್ಲೋ. ? '

—ತನ್ನ ಯೋಚನೆಯನ್ನು ವಿವರಿಸಿ ಹೇಳಿದ ಚಿನ್ನೋಬಯ್ಯ.

ಆದರೆ ಚಿನ್ನೋಬಯ್ಯ ಊಹಿಸಿದಷ್ಟು ಸುಲಭವಾಗಿ ಅದನ್ನು ನಂಬಲಿಲ್ಲ ಈರಮ್ಮ. ತನಗೆ ಯಾವ ಲಾಭವೂ ಇಲ್ಲದೆ ಚಿನ್ನೋಬಯ್ಯ ಈ ಕೆಲಸ ಮಾಡುತ್ತಾನೆಯೇ ಎಂದು ಯೋಚಿಸಿ—

' ಆಯ್ತು, ನಮ್ಮ ಕೆಲಸ ಎಲ್ಲಾ ಆದಂಗಾಯ್ತು. ಇದ್ರಾಗೆ ನಿನಗೇನು ಫಾಯಿದೆ ? '

—ಎಂದು ಕೇಳಿದಳು.

‘ ನನಗಾಗಬೇಕಾದ ಫಾಯಿದೆ ಆಗ್ಲೇ ಆಗ್ಹೋಗಿದೆಯಲ್ಲಾ. ಅದೇ ಅಲ್ವಾ ನಾನು ಕೇಳಿದ್ದು; ನನ್ನ ಫಾಯುದೆ ಈಗ ನಿನ್ನ ಅಂಗಡೀಲಿಕೂತಿಲ್ವಾ ?’

—ಈರಮ್ಮನ ಮಾತಿಗೆ ಸಿಲುಕಿಕೊಳ್ಳದೆ, ಜಾರಿ ಕೊಳ್ಳುತ್ತಾ, ನಗುತ್ತಾ ಹೇಳಿದ ಚಿನ್ನೋಬಯ್ಯ.

ಹಂಗಂದ್ರೆ ರತ್ನಕ್ಕನಿಗೆ ಕೊಟ್ಟಹಣಾನ ಬಿಟ್ಟುಬಿಡ್ತೀಯ ? ’

‘ ಬಿಟ್ಟು ಬಿಡೋಕೆ ನನಗೇನಾರ ಆಕಾಶದಿಂದ ಹಣ ಬರ್ತದಾ ? ಶಾನುಭೋಕಿ ಕೊಡಿಸಿ ಕೊಟ್ರೆ ಆ ಹಣದ ಜವಾಬ್ದಾರಿ ನನ್ನದು ಅಂತ ವಿಠೋಬ ಒಪ್ಪಿಕೊಂಡಿಲ್ವಾ ? ’

‘ ಅಂದ್ರೆ....ಆ ಹಣ ವಿಠೋಬ ನಿನಗೆ ಕೊಡಬೇಕು ಅನ್ನು....’

‘ ಹಂಗಂತ ನಾನು ಹೇಳಿದ್ನಾ....’

‘ ಮತ್ತೆ....’

‘ ಚಿಕ್ಕ ರುದ್ರೀಗೆ ನಾನೇನೂ ಕೊಡೋದು ಬ್ಯಾಡ್ವಾ. ಏನೋ ಒಪ್ಪಿ ಕೊಂಡಳೂಂತ ಹೈದರು ನವಾಬ ಖಂಡೇರಾಯನ್ನ ಸಾಕಿದಂಗೆ ಮಾಡ್ಲೇ ? ಆ ಹಣದಾಗೆ ಅವಳಿಗೆ ನೀನೇ ಏನಾರ ಚಾರು ಚೂರು ಮಾಡಿಸಿಕೊಡು. ಸುಖಪಡೋಪ್ರಾಯಿದಾಗೆ ಅದೂ ಸುಖಾಪಡ್ಲಿ. ನಾನು ಹಿಂಗೇ ಕೊಡಬೇಕಾದ್ದು, ಹಂಗಾರ ಅವಳದಾಗಲಿ. ‘ಅವಳಿಗೆಂತಲೇ ಅಲ್ವಾ, ನಾನು ಇಷ್ಟೆಲ್ಲಾ ಮಾಡಿದ್ದು. ’

—ಎಂದ ಚಿನ್ನೋಬಯ್ಯ ಚಿಕ್ಕರುದ್ರಿಯ ಮೇಲೆ ಅಪ್ರತಿಮ ವಿಶ್ವಾಸ ವಿರುವವನಂತೆ.

ಆ ಮಾತು ಕೇಳಿದ ಮೇಲೆ ಈರಮ್ಮನೂ ಚಿನ್ನೋಬಯ್ಯನನ್ನು ನಂಬ ಬೇಕಾಯಿತು.

‘ ಅವಳೂಂದ್ರೆ ಅಷ್ಟು ವಿಶ್ವಾಸಾನಾ ? ’

— ಎಂದು ಕೇಳಿದಳು.

‘ ಮತ್ತೆ–ಅದಕ್ಕೆ ತಾನೇ ವಿಠೋಬನಿಗೆ ಅಷ್ಟು ಹೊಸೆದದ್ದು. ಇಲ್ದೆ ಹೋಗಿದ್ರೆ ಇದೆಲ್ಲಾ ಯಾರಿಗೆ ಬೇಕಾಗಿತ್ತು ? ’

—ಎಂದ ಚಿನ್ನೋಬಯ್ಯ ಈ ಸಂದರ್ಭದಲ್ಲಿ ಚಿಕ್ಕರುದ್ರಿಯಲ್ಲದೆ

ಬೇರಾವ ಆಸಕ್ತಿಯೂ ತನಗೆ ಇಲ್ಲದವನಂತೆ. ಅವನು ಹೇಳಿದುಧನ್ನು ಕೇಳಿ ಈರಮ್ಮನಿಗೂ ಸಂತೋಷವಾಯಿತು.

' ನಿಜಾ ಅನ್ನು. ಅದೂ ನೀನೂಂದ್ರೆ ಅಷ್ಟೇ ಪ್ರಾಣಾ ಬಿಡ್ತದೆ. ಚೆನ್ನಾಗಿ ನೋಡ್ಕೊ. ನೀನೂಂದ್ರೆ ಏನೋಂತ ಇದ್ದೆ ನಾನು. ಅಂತೂ ಭಾರಿ ಉಪಾಯದ ಮನುಷ್ಯ ನೀನು. ನಂಟೂ ಕೆಡಬಾರ್ದು, ಗಂಟೂ ಕೆಡಬಾರ್ದು ಹಂಗೆ ಪಳಾನು ಮಾಡಿದೀಯ. '

—ಎಂದಳು ತೃಪ್ತಿಯ ನಗು ನಗುತ್ತಾ.

' ಮತ್ತೆ, ನಮಗೆ ಬೇಕಾದ್ದು ನಮ್ಮದಾಗಬೇಕು ಅಂದರೆ ಬೇಕಾದಷ್ಟು ಪಳಾನು ಮಾಡ್ಲೇಬೇಕು. ಅಂತೂ ನನ್ನ ಮಾತು ನಿನಗೆ ಒಪ್ಗೆ ಆಯ್ತು ಅನ್ನು? '

' ಹ್ಞೂ. '

' ಹಂಗಾದ್ರೆ ವಿಠೋಬನಿಗೂ ಇದೆಲ್ಲಾ ಹೇಳು. ಇವತ್ತೇ ಶಾನು ಭೋಕಿ ನನ್ನದಾಗಬೇಕು ಅಂತ ಕುಣೀತವ್ನೇ. ತಡ ಆಯ್ತು ಅಂತ ಏನಾರ ತಿಳುಕೊಂಡಾನು. '

' ಆ ಮೂದೇವಿಗಾ—ನಾನೇಳ್ತೀನಿ ಬಿಡು. ನಿನ್ನಷ್ಟು ಬುದ್ದಿ ಇದ್ದಿದ್ರೆ ಹಿಂಗ್ಯಾಕಿರಬೇಕಾಗಿತ್ತು ಅದು. ನನ್ಗೂ ಬುದ್ಧಿ ಇರಲಿಲ್ಲ. ಮೊಕ ನೋಡಿ ಕಟ್ಟಿಕೊಂಡೆ. ಆಯ್ತು, ನೀನಂದಂಗೇ ಮಾಡು. ನಾನು ಹೋಗ್ತೀನಿ. '

—ಎಂದಳು ಈರಮ್ಮ.

' ಅಷ್ಟ್ಯಾಕೆ ಅವಸರ. ಅಂಗಡೀಲಿ ಅವಳಿದಾಳಲ್ಲಾ. '

' ಅಯ್ಯೋ, ಅದು ಅಂಗಡೀಲಿದ್ರೇನು ಮಾಡಬೇಕು. ನೀನಿಲ್ಲಿದ್ರೆ ಅವಳ ಮನಸ್ಸು ಯಾಪಾರದಾಗಿರ್ತದಾ? ಎಲ್ಲಿ ಮೇಯ್ತಿರ್ತದೊ! '

—ಎಂದು ನಗುತ್ತಾ ಎದ್ದು ಹೋದಳು ಈರಮ್ಮ.

ಆಕೆಯ ಮಾತು ಕೇಳಿ ಚಿನ್ನೋಬಯ್ಯನೂ ನಕ್ಕ.

ಈರಮ್ಮನ ನಗುವಿಗಿಂತ ಅವನ ನಗು ಅರ್ಥಗರ್ಭಿತವಾಗಿತ್ತು.

## ೪

‘ ಇಗೋ. ಇದು ತಗೊಂಡು ಈರಮ್ಮನ ಋಣ ಬಗೆಹರಿಸಿಬಿಡು ’

—ಎಂದು ಹೇಳಿ ಚಿನ್ನೋಬಯ್ಯ ಮೂವತ್ತು ಹತ್ತು ರೂಪಾಯಿನ ನೋಟುಗಳನ್ನು ರತ್ನಮ್ಮನ ಮುಂದೆ ಇಟ್ಟಾಗ, ರತ್ನಮ್ಮನಿಗೆ ತನ್ನ ಕಣ್ಣುಗಳನ್ನೇ ನಂಬುವುದು ಸಾಧ್ಯವಾಗಲಿಲ್ಲ.

‘ ಎಣಿಸಿ ನೋಡಿಕೋ. ಸರಿಯಾಗಿ ಮುನ್ನೂರು ಇದೆ. ’

‘ ಮುನ್ನೂರೇ. ಇಷ್ಟೊಂದು ಹಣ ಏಕೆ ? ’

‘ ಈರಮ್ಮನಿಗೆ ಇನ್ನೂರೈವತ್ತು ರೂಪಾಯಿ ಕೊಡಬೇಕಾದದ್ದಿಲ್ಲವೇ ? ಅದು ಪೂರಾ ಕೊಟ್ಟು ಬಿಡು. ’

‘ ಹಾಗೂ ಇನ್ನು ಐವತ್ತು ಹೆಚ್ಚಿಗೆ ಇದೆಯಲ್ಲ. ’

‘ ಹೌದು. ’

‘ ಅದ್ಯಾಕೆ ? ’

‘ ಇರ್‍ಲಿ. ಸಮಯಾಂದಾಗ ಹತ್ತಿರ ನಾಲ್ಕು ಕಾಸು ಇರಬೇಕು. ಇಲ್ಲಾಂದ್ರೆ ಅಂಥ ಹೊತ್ತಿನಲ್ಲಿ ಯಾರನ್ನ ಕೇಳೋಕೆ ಹೋಗೋದು. ’

‘ ಆದರೂ ಇಷ್ಟೊಂದು ಹಣ ನನಗ್ಯಾಕೆ ಚಿನ್ನೋಬಣ್ಣ, ಅದು ನಿನ್ನ ಹತ್ತಿರಾನೇ ಇರಲಿ. ಸಧ್ಯಕ್ಕೆ ನನಗೆ ದುಡ್ಡೇನೂ ಬೇಕಾಗಿಲ್ಲ. ಹಾಗೇನಾದ್ರೂ ಬೇಕಾದ್ರೆ ನಿನ್ನೇ ಕೇಳ್ತೀನಿ. ಸಧ್ಯ–ನನಗೆ ಬೇಕಾಗಿರೋದು ಈರಮ್ಮನ ಸಾಲ ತೀರೋದು ಒಂದೇ. ಏನೋ ಬಹಳ ಸಮಯವಾಗಿದೆ ಅಂತ ಹೇಳ್ತಾ ಇದ್ದಳು. ದೊಡ್ಡ ಮನಸ್ಸು ಮಾಡಿ ಈ ಉಪಕಾರ ಮಾಡಿದೆ. ಇವೇ ಎಷ್ಟು

ಜನ್ಮ ತೀರಿಸಿದರೂ ತೀರೊಲ್ಲ.'

—ಗಾಢವಾದ ಕೃತಜ್ಞತೆ ತುಂಬಿದ ಧ್ವನಿಯಲ್ಲಿ ಹೇಳಿದಳು ರತ್ನಮ್ಮ.

'ನನ್ನ ಸಾಲ ತೀರಿಸೋ ಚಿಂತೆ ಅಷ್ಟು ಹಚ್ಚಿಕೊ ಬೇಡ ರತ್ನಕ್ಕ. ತೀರೋಕಾಲಕ್ಕೆ ಅದು ತಾನಾಗಿಯೆ ತೀರುತ್ತೆ. ಸದ್ಯ—ಈಗಿದು ತೀರಲಿ.'

'ಅದು ನಿಜ ಚಿನ್ನೋಬಣ್ಣಾ. ಆದ್ರೆ ಈ ಹಣ ನೀನು ಯಾಕೆ ಕೊಡಬೇಕು. ಅವತ್ತು ಈರಮ್ಮನ ಸಾಲ ತೀರಿಸಲಿಕ್ಕೆ ಬೇರೇನೋ ದಾರಿ ಹೇಳ್ದಿಲ್ಲ. ವಿಠೋಬಣ್ಣ ಅದನ್ನ ತೀರಿಸ್ತಾನೆ ಅಂತ. ಹಾಗೆ ಮಾಡಿದ್ರೆ ನಿನಗೂ ತೊಂದರೆ ಆಗ್ತಿರಲಿಲ್ಲ. ಈರಮ್ಮನ ಸಾಲಾನೂ ತೀರೋದು.'

—ಹಿಂದೆ ಸಾಲತೀರಿಸಲು ಚಿನ್ನೋಬಯ್ಯನೇ ಹೇಳಿದ ಮಾರ್ಗವನ್ನು ನೆನಪಿಸಿ ಹೇಳಿದಳು ರತ್ನಮ್ಮ.

'ಹೂ ಅವತ್ತು ಹಾಗಂತ ನಾನೇ ಹೇಳ್ದೆ. ಆಮ್ಯಾಲೆ ನಾನೂ ಬಾಳ ಆ ವಿಷ್ಯ ಯೋಚನೆ ಮಾಡ್ದೆ. ಶಾನುಭೋಕೀನ ಬ್ಯಾರೇರಿಗೆ ವಹಿಸಿ ಕೊಡೋದು ಯಾಕೊ ಅಷ್ಟು ಚನ್ನಾಗಿ ಕಾಣಲಿಲ್ಲ. ಅದು ಮಾಡ್ದೆ ಹೋದ್ರೆ ಈರಮ್ನನೂ ಸುಮ್ನೆ ಇರೊ ಹಂಗಿರಲಿಲ್ಲ. ಅದಕ್ಕೇ ಎಲ್ಲಾ ಯೋಚನೆ ಮಾಡಿ, ಹೆಂಗೂ ನನ್ತವ ದುಡ್ಡಿತ್ತು—ಅದ್ನೇ ಕೊಟ್ಟಿದ್ದರೆ, ಎಲ್ಲಾರ ಕೆಲ ನಾನೂ ಆಗ್ತದೆ ಅಂತ ಈ ಯೋಚನೆ ಮಾಡ್ದೆ. ಶಾನುಭೋಕಿ ನಿನ್ನೆಸರಿನಾಗೇ ಇರ್ಲಿ. ಲೆಕ್ಕ ಪತ್ರ, ಜಮಾ ಖರ್ಚು, ವಸೂಲಿ ಎಲ್ಲಾ ಯಾರಾದ್ರೂ ನೋಡ್ಕೊಂಡ್ರೆ ಆಗ್ತದೆ.'

'ಹೌದು. ಹಾಗಾದ್ರೆ ಈಗ ನಾನು ನಿನ್ನ ಹಣಕ್ಕೆ ಬಡ್ಡಿ ಕೊಡೋದು ಬೇಡವೇ? ಅದಕ್ಕೇನಂತ ಹೇಳಲಿ ಚಿನ್ನೋಬಣ್ಣಾ?'

'ಬಡ್ಡಿ! ಥತ್. ಬಿಡ್ತೂ ಅನ್ನು. ನಿನ್ನತ್ರ ನಾನು ಬಡ್ಡೀ ತಗೊಳ್ಳೋದೇ. ಇನ್ನೊಂದ್ಸಲ ನೀನು ಅಂಥ ಮಾತೆಲ್ಲಾ ಆಡಿದ್ರೆ ನಾನು ನಿನ್ನ ಮನೆ ತಾವಾನೇ ಬರೋಕಿಲ್ಲ. ಎಂಥ ಮಾತಾಡ್ತಿ ರತ್ನಕ್ಕ, ಬಡ್ಡಿ, ಪತ್ರ ಆ ಮಾತೆಲ್ಲಾ ಬಿಟ್ಟು ಬಿಡು. ನಾನು ಹಣ ಕೊಡ್ತಿರೋದು ದುಡ್ಡಿನ ಮುಖ ನೋಡಿಕೊಂಡಲ್ಲ, ನಿನ್ನ ಮುಖ ನೋಡಿಕೊಂಡು. ಎಲ್ಲಾ ಬಿಟ್ಟು ನಿನ್ನ ತ್ರಾಣಾ ಬಡ್ಡಿ ತಗೊಳ್ಳೋದು. ಅದ್ಯಾವ ಚಿಂತೇನೂ ಹಚ್ಕೋಬೇಡ ರತ್ನಕ್ಕ. ನಮ್ಮ ನಮ್ಮ ವಿಶ್ವಾಸ ಮಾತ್ರ ಹಿಂಗೇ ಇರಲಿ.'

ಚಿನ್ನೋಬಯ್ಯನ ಮಾತು ಕೇಳಿ ತಟಕ್ಕನೆ ರತ್ನಮ್ಮನ ಕಣ್ಣುಗಳಲ್ಲಿ ನೀರು ತುಂಬಿತು.

' ಈ ವಿಶ್ವಾಸದ ಋಣ ನಾನು ಹೇಗೆ ತೀರಿಸಲಿ ಚಿನ್ನೋಬಣ್ಣ? '

—ಎಂದು ಕೇಳಿದಳು ಕಂಬನಿಯಿಂದ ಗಾರಾದ ಧ್ವನಿಯಲ್ಲಿ.

' ಅದ್ಯಾವ್ದೂ ತೀರ್ಸೋ ಯೋಚನೇನೇ ನೀನು ಮಾಡಬೇಡ. ಅಷ್ಟು ಪ್ರೀತಿ ಇದ್ರೆ ಬಂದಾಗ ಒಂದ್ಲೋಟ ಕಾಫಿ ನೀರು ಕಾಸಿ ಹುಯ್ಯಿ. ಒಪ್ಪೊತ್ತು ಅನ್ನ ಇಕ್ಕು. ಅದಕ್ಕಿಂತ ಇನ್ನು ಬೇಕಾ ? ನೀನು ಈ ದುಃಖ ಎಲ್ಲಾ ಮರ್ತು ನಗ್ತಾ ನಗ್ತಾ ಇದ್ರೆ ಎಲ್ಲಾ ಸಾಲಾನೂ ತೀರ್ದಂಗಾಗ್ತದೆ. ಈ ಕಷ್ಟ ಹಚ್ಚಿಕೊಂಡು ಹೆಂಗಾಗಿದೀಯೊ ನೀನೇ ನೋಡ್ಕೋ. ಕಬ್ಬಿನ ಗಣೆ ಇದ್ದಂಗಿ ದ್ದೋಳು ಜೋಳದ ಕಡ್ಡಿ ಹಂಗಾಗೋದೆ. ಇದ್ಯಾವ ದೇವರಿಗೆ ಪ್ರೀತಿ. ಅದ್ನೆಲ್ಲಾ ಬಿಟ್ಟುಬಿಡು. ನೀನು ಸುಕ್ವಾಗಿರು, ಮಗೀನ ಚಂದಾಗಿ ನೋಡ್ಕೋ. ಆ ಹುಡುಗ ಮುಂದಕ್ಬಂದ್ರೆ ನಾವು ಸೀತಾರಾಮಪ್ಪನ ಸ್ನೇಹಿತರಾಗಿದ್ದಕ್ಕೆ ಸಾರ್ಥಕ. ಅದೊಂದು ಯೋಚ್ನೆ ನೀನು ಮಾಡು ರತ್ನಕ್ಕ. ಬಾಕೀದೆಲ್ಲಾ ನಂಗಿರಲಿ....ಅಯ್ಯೋ—ಇದಕ್ಕೆ ಅಲ್ವಾ ನಿಂಗೆ ಹುಚ್ಚು ಹೆಂಗ್ಸು ಅನ್ನೋದು. ಮಾತು ಕೇಳಿದ್ರೇ ಕಣ್ಣಾಗೆ ನೀರು ಹಾಕ್ತಿಯಲ್ಲಾ. ಅದು ಬಿಡು. ನಾನಿನ್ನು ಬರ್ಲಾ. ಈರಮ್ಮನ ಕಳಿಸ್ತೀನಿ. ಅವಳ ದುಡ್ಡು ಕೊಟ್ಟು ಪತ್ರ ತಗೊ.'

—ಎಂದು ಚಿನ್ನೋಬಯ್ಯ ರತ್ನಮ್ಮನ ಮುಖವನ್ನೇ ನೋಡುತ್ತಾ ಹೇಳಿ—

' ಮಿಕ್ಕ ದುಡ್ನ ಏನ್ಮಾಡ್ಬೇಕೂಂತ ಯೋಚ್ನೆ ಮಾಡಬ್ಯಾಡ. ಮೊದ್ಲು ನಾರಾಯಣಂಗೆ ಅಷ್ಟು ಒಳ್ಳೆ ಬಟ್ಟೆ ಹೊಲ್ಸು. ನೀನೂ ಕಾಟಾಚಾರ ಮಾಡ್ಕೋಬ್ಯಾಡ.'

—ಎಂದವನೇ ರತ್ನಮ್ಮ ಮುಂದೆ ಮಾತಾಡಲು ಅವಕಾಶವನ್ನೇ ಕೊಡದೆ ಅಲ್ಲಿಂದ ಎದ್ದು ಹೋದ.

ರತ್ನಮ್ಮ ಅವನು ಹೊರಟು ಹೋದುದೂ ಅರಿವಿಲ್ಲದೆ ಏನೋ ಪವಾಡ ಕಂಡವಳಂತೆ ಸುಮ್ಮನೆ ಕುಳಿತಿದ್ದಳು. ಈರಮ್ಮನ ಸಾಲದ ಬೆಟ್ಟದಂಥ ಚಿಂತೆ ಚಿನ್ನೋಬಯ್ಯನ ವಿಶ್ವಾಸದಿಂದಾಗಿ, ಇಷ್ಟು ಹಗುರವಾಗಿ ಮಂಜಿ ನಂತೆ ಕರಗಿ ಹೋದುದನ್ನು ಕಂಡು, ಅವಳ ಮನಸ್ಸಿನ ಯೋಚಿಸುವ

ಶಕ್ತಿಯೇ ಕುಂಠಿತವಾಗಿತ್ತು.

'ಭಗವಂತಾ ಆತನಿಗೆ ನೂರುವರ್ಷ ಆಯಸ್ಸು ಕೊಟ್ಟು ಕಾಪಾಡು'

—ಎಂದು ಬೇಡಿದಳು.

ಚಿನ್ನೋಬಯ್ಯ ಹೋದ ಸ್ವಲ್ಪಹೊತ್ತಿನ ಮೇಲೆ ಈರಮ್ಮ ತಾನೇ ಅಲ್ಲಿಗೆ ಬಂದಳು. ಅವಳನ್ನು ನೋಡಿದ ರತ್ನಮ್ಮ—

'ಬಾ ಈರಮ್ಮ, ನಾನೇ ಹೇಳಿ ಕಳಿಸಬೇಕೂಂತ ಇದ್ದೆ. ನೀನೇ ಬಂದೆ. ಒಳ್ಳೇದಾಯಿತು.'

—ಎಂದು ಕರೆದು ಕೂಡಿಸಿದಳು.

'ಚಿನ್ನೋಬಣ್ಣ, 'ರತ್ನಕ್ಕ ಯಾಕೋ ನಿನ್ನ ನೋಡಬೇಕೂಂತ ಅಂದ್ಲು' ಅಂದ. ಅದಕ್ಕೇ ಬಂದೆ. ಏನು ವಿಷ್ಯ ರತ್ನಕ್ಕ?'

—ಈರಮ್ಮ ಯಾವ ವಿಷಯವೂ ತಿಳಿಯದವಳಂತೆ ಕೇಳಿದಳು.

'ನಿನಗೆ ಹಣದ ಅವಸರ ಇತ್ತು ಅಂದಿದ್ದೆ. ಅದೂ ಇವತ್ತು ಜೊತೆ ಆಯ್ತು. ಕೊಡೋಣಾಂತ ಹೇಳಿ ಕಳಿಸಿದೆ. ಇನ್ನೂರೈವತ್ತು ರೂಪಾಯಿ ಅಲ್ಲವೇ ಕೊಡಬೇಕಾದ್ದು?'

'ಹೂ. ಅಷ್ಟೇ.'

'ಇದು ತಗೊ. ಸರಿಯಾಗಿ ಎಣಿಸಿಕೊ.'

—ಎಂದು ರತ್ನಮ್ಮ ಚಿನ್ನೋಬಯ್ಯ ಕೊಟ್ಟುಹೋದ ಹಣದಲ್ಲಿ ಇನ್ನೂರೈವತ್ತನ್ನು ಈರಮ್ಮನಿಗೆ ಎಣಿಸಿ ಕೊಟ್ಟಳು. ಈರಮ್ಮನೂ ಅದನ್ನು ಎಣಿಸಿಕೊಂಡು—

'ನಮ್ಮ, ಇವತ್ತು ನನ್ನ ಮರ್ಯಾದೆ ಉಳಿಸ್ದೆ ನೀನು. ದುಡ್ಡು ಕೊಟ್ಟೋರ್‍ದು ಬಾಳ ಕಾಟ್ವಾಗಿತ್ತು. ಇಲ್ದಿದ್ರೆ ನಿಂಗಿಷ್ಟು ಅವಸರ ಮಾಡ್ತಿರಲಿಲ್ಲ. ನಿಂಗೂ ಇಷ್ಟೊಂದು ಹಣ ಜೋಡ್ಸೋದು ಬಾಳ ಕಷ್ಟವಾಗಿರಬೇಕು. ಅಲ್ವಾ?'

—ಎಂದು ಕೇಳಿದಳು ಸಹಾನುಭೂತಿ ತುಂಬಿದ ಧ್ವನಿಯಲ್ಲಿ.

'ದೇವರ ದಯದಿಂದ ಕಷ್ಟವೇನೂ ಆಗಲಿಲ್ಲ ಈರಮ್ಮ. ಇದು ಹೇಗಾಗುತ್ತೋಂತ ನನಗೂ ತುಂಬಾ ಯೋಚನೆ ಆಗಿತ್ತು. ಅವರ ಸ್ನೇಹಿತರ ರೂಪದಲ್ಲಿ ಬಂದು ದೇವರೇ ಕಾಪಾಡಿದ.'

—ರತ್ನಮ್ಮ ಹೇಳಿದಳು.

‘ ಸೀತಾರಾಮಪ್ಪರ ಸ್ನೇಹಿತರು ಕೊಟ್ರಾ? ಯಾರು ರಾಘಣ್ಣನಾ? ’

‘ ಊಹೂ—’

‘ ಮತ್ತೆ ಯಾರು ? ’

‘ ಚಿನ್ನೋಬಣ್ಣ. ’

‘ ಹಂಗಂದ್ರೆ....ಚಿನ್ನೋಬಣ್ಣನ ತವ ಸಾಲ ಕೊಯ್ದ್ದಾ ? ’

‘ ಹೂ.’

‘ ಬಡ್ಡಿ ಎಷ್ಟಂತೆ ? ’

‘ಬಡ್ಡಿ ಮಾತೇ ಎತ್ತಲಿಕ್ಕೆ ಬಿಡಲಿಲ್ಲ. ಭಾಳ ಒಳ್ಳೇ ಮನಸ್ಸು ಅವನದು. ಅಣ್ಣ ತಮ್ಮಂದಿರಿಗಿಂತ ಹೆಚ್ಚಾಗಿ ಸಮಯಕ್ಕೆ ಆದ. ’

‘ನಮ್ಮ ಮನಸ್ಸೊಂದು ಚೆನ್ನಾಗಿದ್ರೆ ಎಂಥ ಹೊತ್ತಿನಾಗೂ ದೇವರು ಕೈ ಬಿಡೋಲ್ಲ ರತ್ನಕ್ಕ. ಒಬ್ಬರಿಗೆ ನಾವು ಸಮಯಕ್ಕೆ ಆದರೆ, ನಮ್ಮ ಸಮಯಕ್ಕೊ ದೇವರು ಯಾರಾದರೊಬ್ಬರನ್ನ ಒದಗಿಸ್ತಾನೆ. ಅಂತೂ ಚಿನ್ನೊಬಣ್ಣ ಭಾಳ ದೊಡ್ಡ ಮನಸ್ಸು ಮಾಡ್ದ. ನಿನ್ನ ಉಳಿಸ್ದ; ನನ್ನ ಮಾನಾನೂ ಕಾಪಾಡ್ದ. ನಿನ್ನ ಕೇಳೋದು ಕೇಳಿ ನನ್ನವಸ್ಥೆ ಹೆಂಗಾಗಿತ್ತೂಂತೀಯ ರತ್ನಕ್ಕ. ಒಳ್ಳೆ ಬಿಸಿ ತುಪ್ಪ ನುಂಗಿದಂಗೆ ಆಗಿತ್ತು. ಇತ್ಲಾಗೆ ನಿನ್ನ ಕಷ್ಟ ತಿಳ್ದು ಕೇಳೋಕೆ ಮನಸ್ಸಿಲ್ಲ; ಅತ್ಲಾಗೆ ಕೇಳ್ದೆ ಇರೋಹಂಗೂ ಇಲ್ಲ. ನನ್ನ ಸಮಯ ಹಂಗಿತ್ತು. ನನಗ್ಯಾಕೆ ಇಂಥ ಹೊತ್ತು ತಂದೆ ಭಗವಂತಾ ಅಂತ ಎಲ್ಡೆಲ್ಡು ದಿನ ಅತ್ತೆ. ನಿನ್ನತ್ರ ಅವತ್ತು ವಸಿ ಜೋರಾಗಿ ಮಾತಾಡಿ ಹೋದ್ನಲ್ಲಾ, ಅವತ್ತು ಅನ್ನ ಗಂಟ್ಲಾಗೆ ಇಳದಿದ್ದರೆ ನೀನಿಟ್ಟಾಣೆ. ಹೆಂಗೋ—ಹೋಗ್ಲಿ ಬಿಡು. ಇಬ್ರನ್ನೂ ಶಿವನೇ ಕಾಪಾಡ್ದಾ. ’

‘ನಿಜ ಈರಮ್ಮ, ಮನುಷ್ಯರಲ್ಲಿ ಇಷ್ಟು ಒಳ್ಳೇತನ ಇರುತ್ತೇಂತಲೇ ನಾನು ನಂಬಿರಲಿಲ್ಲ. ’

‘ಚಿನ್ನೋಬಣ್ಣನ ಮನಸ್ಸೇ ಅಂಥದು; ಚಿನ್ನದಂಥ ಮನಸ್ಸು. ರಾಘಣ್ಣನಂಗೆ ಬರೀ ಮಾತಿನ ಮನುಷ್ಯನಲ್ಲ ಚಿನ್ನೋಬಣ್ಣ. ಕೈಲಾದ್ದು ಮೊದಲು ಮಾಡಿ, ಆಮೇಲೆ ಮಾತಾಡ್ತಾನೆ. ಅಂಥ ಮನುಷ್ಯನ್ನೇ ನಾನು ಈ ಊರ್ನಾಗೆ ನೋಡ್ಲಿಲ್ಲ. ’

—ಚಿನ್ನೋಬಯ್ಯನನ್ನು ಹೊಗಳುವ ಹೊತ್ತಿನಲ್ಲೇ ಸೂಕ್ಷ್ಮವಾಗಿ

ರಾಘಣ್ಣನನ್ನು ಹೊಗಳಿದು ಹೇಳಿದಳು ಈರಮ್ಮ.

‘ನೀನು ಹೇಳೋದು ನಿಜ. ಆದ್ರೆ ಇಂಥ ಉಪಕಾರ ತೀರ್‍ಸೊ ಶಕ್ತೀನೂ ನನಗಿಲ್ಲವಲ್ಲೆ ಈರಮ್ಮ.’

‘ಅದೇನು ಮಾತು ರತ್ನಕ್ಕ. ವಿಶ್ವಾಸ ಏನು ಹಣಾನಾ? ಹಣ ಆದ್ರೆ ಅಸಲು ಜೊತೆಗೆ ಬಡ್ಡೀನೂ ಕೊಟ್ಟು ತೀರಿಸ್ಬೋದು. ಹಂಗೆ ವಿಶ್ವಾಸ ತೀರಿಸಾಕಾದಾತಾ? ಅದೆಲ್ಲಿ ಭ್ರಮೆ. ಅದ್ಯಲ್ಲಾ ಬ್ಯಾಡ. ನಮ್ಮಲ್ಲಿ ವಿಶ್ವಾಸ ವಾಗಿದ್ದೋರ ಮಾತಿಗೆ ನಾವು ಬೆಲೆ ಕೊಟ್ಕೊಂಡೋದ್ರೆ ಸಾಕು. ಅದಕ್ಕಿಂತ ಇನ್ನೇನು ಬೇಕು....ನಾನಿನ್ನು ಬರ್‍ತ್ಲಾ ರತ್ನಕ್ಕ....ಇಕೋ ಪತ್ರ ತಂದಿದೀನಿ. ತಗೋ. ನಿನ್ನ ಮಗ ಎಲ್ಲಿ?’

—ಎಂದು ಈರಮ್ಮ ಮಡಿಲಲ್ಲಿಟ್ಟುಕೊಂಡಿದ್ದ ಪತ್ರವನ್ನು ತೆಗೆದು ರತ್ನಮ್ಮನ ಮುಂದಿಟ್ಟು ಕೇಳಿದಳು.

‘ನಾರಾಯಣನೇ, ಎಲ್ಲೋ ಆಡಲಿಕ್ಕೆ ಹೋಗಿರಬೇಕು.’

‘ಹಂಗೆಲ್ಲಾ ಅಲ್ಲಿ ಇಲ್ಲೀ ಬಿಡಬ್ಯಾಡ. ನಿಗವಾಗಿರು’

—ರತ್ನಮ್ಮನನ್ನು ಎಚ್ಚರಿಸುತ್ತಾ ಹೇಳಿದಳು ಈರಮ್ಮ.

‘ಅವನಿಗೇನು ಅಂಥ ಭಯ ಬಂದಿರೋದು.’

‘ನಿಂಗದೇ ಗೊತ್ತಿಲ್ಲಾನ್ನೋದು. ಸಿಟ್ಟು ಹೆಂಡಕ್ಕಿಂತ ಕೆಟ್ಟ ನಿಷಾ ವಸ್ತು. ಅದ್ರಾಗೆ ಮನುಷ್ಯನ ಕಣ್ಣೇ ಕುರುಡಾಗಿ ಹೋಗ್ತದೆ. ಅದ್ರಾಗೂ ನೆರೆಹೊರೇರ ಸಿಟ್ಟು, ಸೆರಗಿನಾಗೇ ಕೆಂಡ ಇದ್ದಂಗೆ. ಯಾರು ಹೆಂಗಾದ್ರೂ ಹಾಳಾಗ್ಹೋಗ್ಲಿ. ನಮ್ಮ ಷಾರಿನಲ್ಲಿ ನಾವಿರಬೇಕು. ನಾನೇಳೋದಿಷ್ಟೆ ರತ್ನಕ್ಕ. ಚಿನ್ನೋಬಣ್ಣನ ಉಪಕಾರ ಮರೀಬ್ಯಾಡ. ಇವತ್ತು ಇಬ್ಬರನ್ನೂ ಉಳಿಸಿದ. ನಾನಿನ್ನು ಬರ್‍ತೀನಿ. ಅಂಗಡಿಮನೆ ತಾವ ಯಾರೂ ಇಲ್ಲ. ನಾರಾಯಣಂಗೆ ನನ್ನೆಸ್ರಿನಾಗೆ ಪಿನಾರ ಪೊಲಿಸಿಕೊಡು.’

—ಎಂದು ಹೇಳಿ ಈರಮ್ಮ, ರತ್ನಮ್ಮ ಎಷ್ಟು ಬೇಡವೆಂದರೂ ಕೇಳದೆ ಹತ್ತು ರೂಪಾಯನ್ನು ರತ್ನಮ್ಮನ ಮುಂದೆ ಹಾಕಿ ಹೋದಳು.

ರತ್ನಮ್ಮನಿಗೆ ಮತ್ತೊಮ್ಮೆ ತನ್ನ ಕಣ್ಣು ಕಿವಿಯನ್ನು ನಂಬದಂತಾಯಿತು.

ಈರಮ್ಮ ಕೆಟ್ಟವಳು, ಚಿನ್ನೋಬಯ್ಯ ಕೆಟ್ಟವನು ಎಂದು ಹೇಳಿದ್ದ ರಾಘಣ್ಣ.

ಆದರೆ ಅವರು ನಿಜವಾಗಿಯೂ ಕೆಟ್ಟವರೇ,

ಆ ಹೊತ್ತಿನಲ್ಲಿ ರತ್ನಮ್ಮನ ಕಣ್ಣಿನಲ್ಲಿ ಅವರಿಬ್ಬರೂ ದೇವತೆಗಳಂತೆ ಕಂಡು ಬಂದು, ರಾಘಣ್ಣ ಹೇಳಿದುದೆಲ್ಲವೂ ಬರೀ ಸುಳ್ಳು ಎನಿಸಿತು.

ರಾಘಣ್ಣನ ವಿಷಯವನ್ನೇ ಯೋಚಿಸುವಾಗ ಒಂದು ಗಳಿಗೆ ಕರುಳಿನಲ್ಲಿ ಕತ್ತರಿಯಾಡಿಸಿದಂತಾದರೂ, ಅದೇ ಗಳಿಗೆಯಲ್ಲೇ ರಾಘಣ್ಣನ ವಿಷಯದಲ್ಲಿ ಚಿನ್ನೋಬಯ್ಯ ಹೇಳಿದುದು ನೆನಪಾಗಿ—

'ಅವನ ವಿಶ್ವಾಸವೆಲ್ಲವೂ ಬರೀ ಸ್ವಾರ್ಥ ಸಾಧನೆಯ ಆಟವೇ ?'

—ಎಂಬ ಪ್ರಶ್ನೆ ಅವಳ ಮುಂದೆ ನಿಂತಿತು.

# ೨೧

' ಚಿನ್ನೋಬಣ್ಣ ದೇವರಂಥವನು '

—ಎಂದುಕೊಂಡಿದ್ದಳು ರತ್ನಮ್ಮ ಅವನು ತನಗೆ ನೆರವಾಗಿ ನಿಂತ ದಿನ.

ದಿನ ಕಳೆದಂತೆ ಆ ಭಾವನೆ ಬೆಳೆಯುತ್ತಾ ಹೋಯಿತು.

ಆ ಹೊತ್ತಿನಲ್ಲಿ ಮಾತ್ರವೇ ನೆರವಾಗಿ ಬಳಿಕ ಸುಮ್ಮನಾಗಲಿಲ್ಲ ಚಿನ್ನೋಬಯ್ಯ. ರತ್ನಮ್ಮನ ಮನೆ ತನ್ನ ಮನೆಯೇ ಎಂಬಷ್ಟು ವಿಶ್ವಾಸದಿಂದ ನೋಡತೊಡಗಿದ. ನಾರಾಯಣನಲ್ಲಿ ಅವನು ತೋರುತ್ತಿದ್ದ ವಿಶ್ವಾಸವಂತೂ ತುಂಬಾ ಹೆಚ್ಚಿನದಾಯಿತು. ಆಗಾಗ ಅವನೇ ಮಗುವಿಗೆ ಬೇಕಾದ ಬಟ್ಟೆ ಹೊಲಿಸಿ ತರುತ್ತಿದ್ದ; ಬರುವಾಗಲೆಲ್ಲಾ ತಿಂಡಿ ತೀರ್ಥ ತರುತ್ತಿದ್ದ; ನಾರಾಯಣನಿಗೂ ತನ್ನಲ್ಲಿ ಅಷ್ಟು ವಿಶ್ವಾಸ ತೋರಿಸುತ್ತಿದ್ದ ಚಿನ್ನೋಬಯ್ಯನ ಮೇಲೆ ಅಷ್ಟೇ ಪ್ರೀತಿ ಬೆಳೆಯಿತು. ಚಿನ್ನೋಬಯ್ಯ ಬಾಗಲಲ್ಲಿ ಕಾಣುತ್ತಿದ್ದ ಹಾಗೆ ' ಮಾವಾ ' ಎಂದು ಹೋಗಿ ಅವನ ಕಾಲನ್ನು ಸುತ್ತಿಕೊಳ್ಳುತ್ತಿದ್ದ.

ಚಿನ್ನೋಬಯ್ಯನ ಪ್ರೀತಿ ನಾರಾಯಣನಿಗೇ ಮೀಸಲಾಗಿರಲಿಲ್ಲ. ಅವನ ತೋಟದ ತರಕಾರಿ ರತ್ನಮ್ಮನ ಮನೆಗೆ ಬರುತ್ತಿತ್ತು. ಹುಣಸೆಹಣ್ಣು, ಮೆಣಸಿನಕಾಯಿ—ಅವನ ತೋಟದಲ್ಲಿ, ಹೊಲದಲ್ಲಿ ಬೆಳೆದುದೆಲ್ಲಾ ರತ್ನಮ್ಮನ ಮನೆಗೆ ಬರುತ್ತಿತ್ತು. ರತ್ನಮ್ಮನಿಗೆ ಯಾವಾಗಲೂ, ಯಾವುದಕ್ಕೂ ಕೊರತೆಯಾಗದಂತೆ ನೋಡಿಕೊಳ್ಳುತ್ತಿದ್ದ.

ಅಷ್ಟೇ ಅಲ್ಲ—ನಂಜಾಪುರದ ಶಾನುಭೋಕಿಯನ್ನು ರತ್ನಮ್ಮನ ಪರವಾಗಿ

ಅವನೇ ನೋಡಿಕೊಂಡು ಹೋಗುತ್ತಿದ್ದ. ಆಕೆಗಿದ್ದ ಚಾರುಚೂರು ಹೊಲದ ಉಸ್ತುವಾರಿಯೂ ಅವನದೇ ಆಗಿತ್ತು. ಆಕೆಯ ಹೊಲವನ್ನು ಉಳಲೂ ಅವನ ಎತ್ತುಗಳೇ ಹೋಗುತ್ತಿದ್ದುವು. ಕಳೆ ತೆಗೆಸುವುದು, ಗೊಬ್ಬರ ಗೂಡು ನೋಡಿಕೊಳ್ಳುವುದು, ಕಾಳು ಕೊಯ್ಯಿಸುವುದು, ಕಂದಾಯ ಕಟ್ಟು ವುದು—ಎಲ್ಲ ಹೊಣೆಗಾರಿಕೆಯನ್ನೂ ಚೆನ್ನೋಬಯ್ಯ ತನ್ನ ಹೆಗಲ ಮೇಲೆ ಹೊತ್ತುಕೊಂಡ.

ಅದರೊಂದಿಗೆ ಚೆನ್ನೋಬಯ್ಯ ಅವಳ ಮನೆಗೆ ಬಂದು ಹೋಗು ವುದೂ ಹೆಚ್ಚಾಯಿತು. ಅವನು ಬಂದಾಗ ಅವನಿಗೆ ಕಾಫಿ ಕೊಡಲು ರತ್ನಮ್ಮ ತಪ್ಪಿಸುತ್ತಿರಲಿಲ್ಲ. ಆಗಾಗ ಊಟಕ್ಕೆ ಎಬ್ಬಿಸುತ್ತಿದ್ದಳು. ಆ ಕೆಲಸ, ಈ ಮಾತು ಎಂದು ತನಗೆ ಬೇಕಾದಾಗ ಚೆನ್ನೋಬಯ್ಯ ರತ್ನಮ್ಮನ ಮನೆಗೆ ಬಂದು ಹೋಗುತ್ತಿದ್ದ.

ದಿನದಿನಕ್ಕೆ ಅವನ ಉಪಕಾರ ಭಾರ ರತ್ನಮ್ಮನ ಹೆಗಲ ಮೇಲೆ ಹೆಚ್ಚುತ್ತಿತ್ತು. ದಿನ ಕಳೆದ ಹಾಗೆ ರತ್ನಮ್ಮನಿಗೆ ಅವನ ನೆರವಿಲ್ಲದೆ ತಾನು ಹಳ್ಳಿಯಲ್ಲಿ ಬಾಳುವುದೇ ಅಸಾಧ್ಯವೆನಿಸಿತು ; ದಿನಕಳೆದ ಹಾಗೆ ಚೆನ್ನೋ ಬಯ್ಯನ ಮಾತು ರತ್ನಮ್ಮನಿಗೆ ವೇದವಾಕ್ಯವಾಯಿತು.

ತನ್ನ ಗಂಡನ ಮೇಲಿದ್ದ ವಿಶ್ವಾಸದಿಂದ ಚೆನ್ನೋಬಯ್ಯ ಈ ಭಾರವ ವನ್ನೆಲ್ಲಾ ಹೊರುತ್ತಿದ್ದಾನೆ ಎಂದು ರತ್ನಮ್ಮ ನಂಬಿದ್ದಳು.

ಆದರೆ ಚೆನ್ನೋಬಯ್ಯನ ಮನಸ್ಸಿನಲ್ಲಿದ್ದ ಮಾತೇ ಬೇರೆ.

' ನನ್ನ ವಿಷಯ ಎಷ್ಟು ಹಚ್ಚಿಕೊಂಡು ಒದ್ದಾಡುತ್ತಿದ್ದಾನೆ. ದಿನಕ್ಕೆ ಎಷ್ಟು ಸಲ ಬಂದು ಹೋಗುತ್ತಾನೆ'

—ಎಂದು ರತ್ನಮ್ಮ ಚಿಂತಿಸುತ್ತಿದ್ದಳು.

ಆದರೆ ದಿನಕ್ಕೆ ಎಷ್ಟು ಬಾರಿ ಬಂದು ಹೋದರೂ ಚೆನ್ನೋಬಯ್ಯನಿಗೆ ತೃಪ್ತಿ ಇರಲಿಲ್ಲ. ಹೋದತ್ತ ಬಂದತ್ತ ರತ್ನಮ್ಮನ ಮುಖ ಅವನ ಕಣ್ಣುಗಳ ಮುಂದೆ ಸುಳಿಯುತ್ತಾ, ಎಲ್ಲೋ ಹೊರಟ ಕಾಲುಗಳನ್ನು ಮತ್ತೆ ರತ್ನಮ್ಮನ ಮನೆಯ ಬಳಿಯೇ ತಂದು ನಿಲ್ಲಿಸುತ್ತಿದ್ದವು. ಆಕೆಯ ಮುಖ, ಕಣ್ಣುಗಳು, ಮೈ ಎದುರಿಗಿರುವ ಉರಿಯಂತೆ ಅವನ ಮೈಯಲ್ಲಿ ಬಯಕೆಯು ಕಾವೇ ರಿಸಿ, ಎಂದಿಗೆ ಇದು ನನ್ನದಾದೀತು ಎಂದು ಕಾತರಿಸುವಂತೆ ಮಾಡುತ್ತಿ

ದ್ದವು. ಅದನ್ನು ಆಕೆಗೆ ತಿಳಿಸಬೇಕು, ತನ್ನ ಮನದ ಬಯಕೆಯನ್ನು ಆಕೆಗೆ ಹೇಳಿ ಆಕೆಯನ್ನು ವಶಪಡಿಸಿಕೊಳ್ಳಬೇಕು ಎಂದು ಅವನ ಮನಸ್ಸು ತುಡಿಯುತ್ತಿತ್ತು. ತನ್ನಿಂದ ಅಷ್ಟು ಉಪಕೃತಳಾದ ಆಕೆ, ತನ್ನ ಬೇಡಿಕೆಯನ್ನು ನಿರಾಕರಿಸದಿರಬಹುದು ಎಂದೂ ಅವನ ಬಯಕೆ ಅವನಿಗೆ ಧೈರ್ಯ ಹೇಳುತ್ತಿತ್ತು. 'ಏನಾದರಾಗಲಿ, ಈ ದಿನ ಅದನ್ನು ತಿಳಿಸಬೇಕು' ಎಂದುಕೊಂಡೇ ಆಕೆಯ ಮನೆಗೆ ಬರುತ್ತಿದ್ದ. ಆದರೆ, 'ಅಣ್ಣ' ಎಂದ ಆಕೆಯ ಮಾತನ್ನು ಕೇಳಿದಾಗ, ಯಾವ ಬಯಕೆಯೂ ಇಲ್ಲದೆ, ನಿರ್ವಿಕಾರವಾದ ಸ್ನೇಹದ ಬೆಳಕು ತುಂಬಿದ ಆಕೆಯ ಮುಖವನ್ನು ನೋಡಿದಾಗ, ಅವನ ಧೈರ್ಯವೆಲ್ಲ ಬಸಿದು ಹೋಗಿ, ನಾಲಗೆ ಇದ್ದಲ್ಲೇ ಉಡುಗಿ ಹೋಗಿ, ಹೇಳಬೇಕು ಅಂದುಕೊಂಡ ಮಾತುಗಳನ್ನು ಹೇಳಲಾಗದೆ, ಹಾಗೇ ಹಿಂದಿರುಗುತ್ತಿದ್ದ.

ತನ್ನನ್ನು ಕಂಡಾಗ ಚಿನ್ನೋಬಯ್ಯನ ಮುಖ ಬೆವರುವುದು, ಮಾತು ಏನೋ ಒಂದು ರೀತಿಯಾಗುವುದನ್ನು ನೋಡಿ 'ಹೀಗೇಕೆ' ಎನಿಸಿದರೂ, ರತ್ನಮ್ಮನಿಗೆ ಅವನ ಸಜ್ಜನಿಕೆಯ ವಿಷಯದಲ್ಲಿ ಯಾವ ಸಂಶಯವೂ ಇರಲಿಲ್ಲ. ಎಂತಲೇ ಆತನೊಂದಿಗೆ ಯಾವ ಸಂದೇಹ, ಸಂಕೋಚಗಳೂ ಇಲ್ಲದೆ ನಡೆದುಕೊಳ್ಳುತ್ತಿದ್ದಳು. ಆತ ಎಷ್ಟೇ ಹೊತ್ತಿನಲ್ಲಿ ಬಂದರೂ, ಬಾಗಿಲು ತೆಗೆದು, ಅವನೊಂದಿಗೆ ಮಾತನಾಡಲು ಹಿಂಜರಿಯುತ್ತಿರಲಿಲ್ಲ.

ರತ್ನಮ್ಮನಿಗೇನೋ ಚಿನ್ನೋಬಯ್ಯನ ವಿಷಯದಲ್ಲಿ ಸಂಶಯವಿರಲಿಲ್ಲ. ಆದರೆ ಹುಟ್ಟಿದಂದಿನಿಂದ ಅವನನ್ನು ಕಂಡು, ಅವನ ಸ್ವಭಾವವನ್ನು ಅರಿತ ಊರವರಿಗೆ ಚಿನ್ನೋಬಯ್ಯನ ನಡತೆಯಲ್ಲಿ ನಂಬಿಕೆ ಇರಲಿಲ್ಲ. ಎಂತಲೇ ರತ್ನಮ್ಮನ ಮನೆಯ ಬಳಿ ದಿನದಿನಕ್ಕೆ ಚಿನ್ನೋಬಯ್ಯನ ಓಡಾಟ ಹೆಚ್ಚಾದುದನ್ನು ಕಂಡ ಜನ, ಅದಕ್ಕೆ ಕಾರಣವೇನೆಂಬುವನ್ನರಿಯುವ ಗೋಜಿಗೆ ಹೋಗದೆ, ತಮ್ಮ ಸಂಶಯವೇ ಸತ್ಯವಿರಬೇಕು ಎಂದು ಎಣಿಸಿದರು. ಅಲ್ಲದೆ ಸತ್ಯದ ಅಗತ್ಯವೂ ಅವರಿಗಿರಲಿಲ್ಲ. ಅವರಿಗೆ ಬೇಕಾದುದು ಹೊತ್ತು ಕಳೆಯಲು ಒಂದು ಹೊಸ ಮಾತು.

ಎಲ್ಲರಿಗಿಂತ ಮೊದಲು ಈ ಮಾತು ಬಂದುದು ಈರಮ್ಮನ ಬಾಯಲ್ಲಿ.

ರತ್ನಮ್ಮನ ಮನೆಯ ಕಡೆ ಚಿನ್ನೋಬಯ್ಯನ ಓಡಾಟ ಹೆಚ್ಚಿದ ಹಾಗೆ, ಅವನು ಈರಮ್ಮನ ಮನೆಯ ಕಡೆ ಬರುವುದು ಕಡಮೆಯಾಗಿತ್ತು. ಮೊದ

ಇಷ್ಟು ದಿನ ಈರಮ್ಮ ಚಿನ್ನೋಬಯ್ಯನ ಓಡಾಟವೆಲ್ಲಾ ತಮಗಾಗಿಯೇ ಎಂದು ನಂಬಿಕೊಂಡಿದ್ದಳು. ಆದರೆ ದಿನ ಕಳೆದ ಹಾಗೆ ಚಿನ್ನೋಬಯ್ಯ ಅವಳ ಮನೆಗೆ ಬರುವುದು ಕಡಮೆಯಾಯಿತೇ ವಿನಾ ಈರಮ್ಮನ ಕೆಲಸ ಆಗುವ ಸೂಚನೆಗಳಾವುದೂ ಕಾಣಲಿಲ್ಲ. ಚಿನ್ನೋಬಯ್ಯನೇ ನೋಡಿಕೊಳ್ಳಲಾರಂಭಿಸಿದ ಶಾನುಭೋಕಿಯ ವಿಷಯವನ್ನು ಈರಮ್ಮನೋ, ವಿಠೋಬನೋ ತಾವೇ ಎತ್ತಿದಾಗಲೂ, ಅವನು ಅವರ ಪ್ರಶ್ನೆಗೆ ನೇರವಾದ ಉತ್ತರಕೊಡದೆ, ಏನಾದರೊಂದು ನೆಪ ಹೇಳಿ ಜಾರಿಕೊಳ್ಳುತ್ತಿದ್ದ. ಇದನ್ನು ಕಂಡು ಎಂದು ಶಾನುಭೋಕಿ ತನ್ನದಾದೀತೋ ಎಂದು ಜಪಿಸುತ್ತಿದ್ದ ವಿಠೋಬನಿಗೆ, ದಿನಕ್ಕೆ ದಿನ ದೂಡುತ್ತಿದ್ದುದನ್ನು ಕಂಡು, ಚಿನ್ನೋಬಯ್ಯ ಕಡೆಗೆ ತನಗೇ ನೀರು ತಿದ್ದುತ್ತಾನೋ ಏನೋ ಎಂದು ಗಾಬರಿಯಾಯಿತು. ಅವನ ಗಾಬರಿ ಈರಮ್ಮನಿಗೂ ಇತ್ತು. ಅದಕ್ಕಿಂತ ದೊಡ್ಡ ಚಿಂತೆ, ಚಿಕ್ಕರುದ್ರಿಯಲ್ಲಿ ಚಿನ್ನೋಬಯ್ಯನಿಗೆ ಆಸಕ್ತಿ ಕಡಮೆ ಆಗುತ್ತಿದ್ದುದು. ಆದುದರಿಂದ ಈರಮ್ಮ ಚಿಕ್ಕರುದ್ರಿಗೆ ಚಿನ್ನೋಬಯ್ಯನನ್ನು ಆದಷ್ಟು ಹೆಚ್ಚು ಹತೋಟಿಯಲ್ಲಿಟ್ಟುಕೊಳ್ಳುವಂತೆ ಅಪ್ಪಣೆ ಮಾಡಿದಳು. ಆದರೆ ಚಿನ್ನೋಬಯ್ಯನಿಗೆ ಆ ಮದ್ದೂ ನಾಟಿದಂತೆ ಕಾಣಲಿಲ್ಲ. ಅತ್ತು ಕರೆದು, ಚಿನ್ನೋಬಯ್ಯನನ್ನು ಒಲಿಸಿಕೊಳ್ಳಲೆತ್ನಿಸಿದ ಚಿಕ್ಕರುದ್ರಿ ಕಡೆಗೆ ಕಣ್ಣೀರಿಡುತ್ತಾ ಬಂದುದನ್ನು ನೋಡಿ, ಈರಮ್ಮನಿಗೆ ಹೊಟ್ಟೆಯಲ್ಲಿ ಕೆಂಡ ಕಲಸಿದಂತಾಯಿತು. ಆ ಸಿಟ್ಟನ್ನು ತಡೆಯಲಾರದೆ—

'ಆ ಮುಂಡೆ ಅವನಿಗೇನು ಮಾಟ ಮಾಡಿದಾಳೋ. ಮೂರು ಹೊತ್ತು ಅಲ್ಲೇ ಬಿದ್ದು ಸಾಯ್ತಾನೆ.'

—ಎಂದು ವಿಠೋಬನ ಮುಂದೆ ಕಹಿಯನ್ನು ಕಕ್ಕಿದಳು.

'ಪಾಪ. ಇವನ ತಪ್ಪಿಗೆ ರತ್ನಕ್ಕನ್ನ ಯಾಕೆ ಬಯ್ತಿ. ಆಕೆ ಅಂಥೋಳಲ್ಲ.'

—ಎಂದು ವಿಠೋಬ ರತ್ನಮ್ಮನನ್ನು ಸಮರ್ಥಿಸಿ ಮಾತನಾಡಿದ. ಆದರಿಂದ ಈರಮ್ಮನ ಸಿಟ್ಟು ಶಾಂತವಾಗದೆ ಮತ್ತಷ್ಟು ಹೆಚ್ಚಿ—

'ಐ, ಸುಮ್ಕೆ ಕೂತ್ಕೋಬಾರ್ದ ಮೂದೇವಿ. ನಿನ್ಮಾತು ಕೇಳ್ಕೊಂಡು ಬಂಗಾರ್ದಂಥ ಹುಡುಗೀನ ಆ ಬಾವಲಿ ಬಾಯಾಗಿಟ್ಟಿದ್ದಾಯ್ತು. ನಿನಗಷ್ಟು ಬುದ್ಧಿ ಇದ್ದಿದ್ರೆ ಇನ್ಯಾಕೆ? ಏನೋ ಕಡೀತೀನೀಂತ, ಈ ಹುಡುಗೀನೂ

ಕೆಡಿಸಿಕೂಡಿಸ್ದೆ. ಬೆಕ್ಕು ಕಜ್ಜಾಯ ಹಂಚಿದಂಗೆ ಮಾಡ್ದ ಅವನು.'

'ಇವನೇನೋ ಅಂಥ ಹಲ್ಕಾನೇ ಅನ್ನು. ಆದ್ರೆ ರತ್ನಕ್ಕ ಅಂಥೋಳಲ್ಲ'

'ಅಂಥೋಳಲ್ಲ. ಅಂಥೋಳಲ್ದೆ ಹೋದ್ರೆ ಹಗಲೂ ರಾತ್ರಿ ಇಬ್ರೂ ಕೂತ್ಕೊಂಡೇನು ಪುರಾಣ ಓದ್ತಿರ್‍ತಾರಾ? ನಂಗೆಲ್ಲಾ ಗೊತ್ತದೆ ಸುಮ್ನಿರು. ನೀನು ನಾನೇಳ್ದಂಗೆ ಕೇಳು. ಚಿನ್ನೋಬಯ್ಯನ್ನ ನನ್ನ ಕೆಲ್ಸ ಏನ್ಮಾಡ್ತಿ ಅಂತ ಒಂದ್ಸಲ ಪಟ್ಟಾಗಿ ಕೇಳ್ಬಿಡು. ಮಾಡಿಕೊಟ್ಟನೊ ಸರಿ........'

'ಇಲ್ದೆ ಹೋದ್ರೆ....'

'ಅವನೂ ಅವಳೂ ಈ ಊರ್‍ನಲ್ಲಿ ಮೊಕ ಎತ್ತಿಕೊಂಡು ಹೆಂಗಿರ್‍ತಾರೊ ನಾನೂ ನೊಡೇಬಿಡ್ತೀನಿ. ನನ್ನವಾಸಾನೂ ಎಂಥಾದೂಂತ ಒಂದು ಕೈ ತೋರ್‍ಸೇ ಬಿಡ್ತೀನಿ.'

—ಎಂದಳು ಅಸೂಯೆಯಿಂದ ಉರಿಯುತ್ತಾ.

ಆ ಮಾತನಾಡಿದ ಹೊತ್ತಿನಲ್ಲಿ ಅವಳ ಮುಖ ನೋಡಿ, ಅವಳ ಸಹ ವಾಸ ಚಿರಪರಿಚಯವಾದ ವಿಠೋಬನಿಗೂ ಗಾಬರಿಯಾಯಿತು. ಆ ಹೊತ್ತಿನಲ್ಲಿ ಆಕೆಗೆ ಎದುರಾಡಲು ಅವನಿಗೂ ಧೈರ್ಯವಾಗದೆ—

'ನೀನು ಇಲ್ಲದ್ದೆಲ್ಲಾ ಮಾತಾಡೋಕೆ ಹೋಗಬೇಡ. ನಾನು ಚಿನ್ನೋಬಯ್ಯನ ಹತ್ತಿರ ಮಾತಾಡ್ತೀನಿ'

—ಎಂದು ಸಮಾಧಾನ ಹೇಳಿ ಚಿನ್ನೋಬಯ್ಯನನ್ನು ಕಾಣಲು ಹೋದ, ಈ ಪ್ರಸಂಗ ಹೆಚ್ಚು ಬೆಳೆಯಲು ಬಿಡಬಾರದು ಎಂದು.

ವಿಠೋಬ ಚಿನ್ನೋಬಯ್ಯನನ್ನು ನೊಡ ಬಂದ ಹೊತ್ತಿನಲ್ಲಿ, ಚಿನ್ನೋಬಯ್ಯನ ಮನಸ್ಸೂ ಸಮಾಧಾನ ಸ್ಥಿತಿಯಲ್ಲಿರಲಿಲ್ಲ. ಆ ದಿನವೇನು, ರತ್ನಮ್ಮನನ್ನು ಕಂಡು ಅವನಲ್ಲಿ ಆಕೆಯ ಬಗ್ಗೆ ದಾಹ ಮೂಡಿದಂದಿನಿಂದಲೂ ಅವನ ಮನಸ್ಸು ಸ್ಥಿಮಿತದಲ್ಲಿರಲಿಲ್ಲ. ಆಕೆ ಎದುರಿಗಿದ್ದಾಗ ಒಂದು ಬಗೆಯ ಚಿಂತೆ, ಇಲ್ಲದಿದ್ದಾಗ ಮತ್ತೊಂದು ಬಗೆಯ ಕಾತುರ ಅವನನ್ನು ಕಾಡುತ್ತಿತ್ತು. ಸ್ವಲ್ಪ ಹಣವಂತನಾದ ಅವನಿಗೆ, ಅದುವರೆಗೂ ಬಯಕೆಗಳನ್ನೆಲ್ಲಾ ಸುಲಭವಾಗೇ ಈಡೇರಿಸಿಕೊಂಡು ಅಭ್ಯಾಸವಾಗಿತ್ತಲ್ಲದೆ, ಈ ಬಗೆಯ ಕಾಯುವಿಕೆ ಗೊತ್ತಿರಲಿಲ್ಲ. ಎಂತಲೇ ಅವನ ಸ್ವಭಾವ ವಿರುದ್ಧವಾದ ಪರಿಸ್ಥಿತಿಯೇ ಅವನ ಚಿತ್ತವನ್ನೂ ಸಾಕಷ್ಟು ಕಲಕಿದ್ದುದರ ಜೊತೆಗೆ, ಚಿಕ್ಕರುದ್ರಿಯ ಅಳು, ಈರಮ್ಮನ

ಕಿಡಿನುಡಿಗಳೂ ಅವನನ್ನು ಸಾಕಷ್ಟು ಪ್ರಕ್ಷುಬ್ಧಗೊಳಿಸಿದ್ದವು. ತನ್ನ ಚಿಂತೆಯನ್ನು ಯಾರ ಮುಂದೂ ಹೇಳಿಕೊಳ್ಳಲಾರದೆ, ತನ್ನ ಸಿಟ್ಟನ್ನು ಯಾರ ಮೇಲೂ ಕಾರಲಾಗದೆ ಮೂಗುಬ್ಬಸ ಪಡುತ್ತಿದ್ದ. ಎಂತಲೇ ವಿಠೋಬ ಎದುರಿಗೆ ಬಂದಾಗ, ಅವನ ಮುಖ ನೋಡಿಯೇ ಚಿನ್ನೋಬಯ್ಯನ ಮುಖ ಮುದುಡಿಕೊಂಡಿತು. ತನ್ನನ್ನು ಕಂಡ ಕೂಡಲೇ ಚಿನ್ನೋಬಯ್ಯ ಬೇರೆ ಕಡೆ ಮುಖ ಮಾಡಿಕೊಂಡುದನ್ನು ಕಂಡು ವಿಠೋಬನಿಗೂ ಮನಸ್ಸು ಕಹಿಯಾಯಿತು.

' ಏನು ಬಂದೆ ವಿಠೊಬ ? '

—ಎಂದು ಮನಸ್ಸಿಲ್ಲದ ಮನಸ್ಸಿಂದ ಕೇಳಿದ ಚಿನ್ನೋಬಯ್ಯ, ಎದುರಿಗೆ ಬಂದು ಕುಳಿತ ವಿಠೋಬನನ್ನ ಮಾತನಾಡಿಸದೆ ಇರಲಾಗದೆ.

' ಬರದಿದ್ರೆ ಆಗ್ತದ ಚಿನ್ನೋಬಯ್ಯ. ನಮ್ಮ ಕೆಲಸ ಆಗಬೇಕೂಂದ್ರೆ ಬಾಂದ್ರೂ ಬರಬೇಕು, ಬ್ಯಾಡಾಂದ್ರೂ ಬರಬೇಕು. ನಿನ್ನ ಕೆಲಸ ಆಗೋಯ್ತು. ನೀನು ನನ್ನ ಮರತು ಬಿಟ್ರೂ ಆಗ್ತದೆ. ಅದರೆ ನಂಗೆ ಹಂಗಿರೋಕಾಗ್ತದಾ ? ನಿಮ್ಮನ್ನೆಲ್ಲಾ ನಂಬಿಕೊಂಡು ಮದ್ದಲೆ ಹಂಗಾಯ್ತು ನನ್ನ ಪಾಡು. ಎತ್ಲಾಗೆ ತಿರುಗಿದ್ರೂ ಪೆಟ್ಟೆ. '

—ಎಂದ ವಿಠೋಬ ತನ್ನ ಮನಸ್ಸಿನಲ್ಲಿಯ ಅಸಮಾಧಾನವನ್ನು ತೋರಿಸಿಕೊಳ್ಳುತ್ತಾ.

' ಈಗ ನಿಂಗೆ ಅಂಥದೇನಾಯ್ತು ? '

—ಗಾಳಿ ಸೋಕಿದ ಕಿಡಿಯಂತೆ ಕೆದರುತ್ತಾ ಕೇಳಿದ ಚಿನ್ನೋಬಯ್ಯ.

' ಆಗೋದೇನು. ನಿಂಗೆ ಗೊತ್ತಿಲ್ವಾ ? ನಾನು ಈರಮ್ಮನ ಮನೆ ಕಡೆ ಹೋಗೊದೇ ಕಷ್ಟಕ್ಕೆ ಬಂದಿದೆ.'

' ಯಾಕೆ ? '

' ನೀನು ಏನೋ ಮಾಡಿಕೊಡ್ತೀಯಾಂತ, ಈರಮ್ಮನಿಗೆ ಹೇಳಿಕೊಂಡು ಚಿಕ್ಕರುದ್ರೀನ ನಿಂಗೆ ಮಾಡಿಸಿ ಕೊಟ್ರೆ, ಈಗ ನೀನು ನನ್ನೂ ಕೈ ಬಿಟ್ಟೆ, ಚಿಕ್ಕ ರುದ್ರಿಗೂ ಕೈ ಕೊಟ್ಟೆ........'

' ನಾನೆಲ್ಲಿ ಅವಳ ಕೈ ಬಿಟ್ಟಿದೀನೆ ? '

' ಮತ್ತೇನಿದೆ. ಅಮಾವಾಸ್ಯೇಗೊ ಹುಣ್ಣಿಮೆಗೊ ಅಲ್ಲಿಗೊಗ್ತೀಯಂತೆ.

ಹೋದ್ರೂ ಉರೀತಿರ್ತೀಯಂತೆ. ಆ ಹುಡ್ಗಿ ನಿನ್ನೆಸ್ರು ಹೇಳಿ ದಿನಾ ಕಣ್ಣೀರಾಗೆ ಕೈತೊಳೀತಾಳೆ. ಈರಮ್ಮ ಕೆಂಡಕೆಂಡವಾಗಿದಾಳೆ. ನನ್ನ ಮುಖ ಕಂಡ್ರೆಸಾಕು, ಇಬ್ಬರೂ 'ನೀನೇ ಇಷ್ಟಕೆಲ್ಲಾ ಕಾರಣ' ಅಂತ ನನ್ನ ಸೋಟೆ ತಿವೀತಾರೆ. ಉಂಡೋನಿಗೆ ಉಂಡದ್ದೇ ಬಂತು, ಗುಂಡನಿಗೆ ನವೆದದ್ದೆ ಬಂತು ಅನ್ನೋ ಹಂಗಾಗೋಯ್ತಲ್ಲಾ ನನ್ನ ಬಾಳು. ಸ್ನೇಹಿತ ಅಂದ್ರೆ ಹಿಂಗೇನಾ ಮಾಡೋದು.'

'ಅದಕ್ಕೆ ಈರಮ್ಮನಿಗೇನಂತೆ ಗುನುಗಾಗಿರೋದು. ಅವಳ ಇನ್ನೂ ಧೈವತ್ತು ರೂಪಾಯಿ ಬರೋಹಂಗೆ ಮಾಡಲಿಲ್ವಾ?'

'ಅದು ಹೆಂಗಿದ್ರೂ ಬರೋದು, ಅದಕ್ಕೆ ಚಿಕ್ಕರುದ್ರೀನ ನಿಂಗೆ ಒಪ್ಪಿಸ ಬೇಕಾಗಿತ್ತಾ?'

—ವಿಠೋಬನೂ ಕೊಂಚ ಖಾರವಾಗಿ ಕೇಳಿದ.

'ಆಯ್ತು. ಅದಕ್ಕೀಗ ಏನಾಗಬೇಕು?'

'ಶಾನುಭೋಕೀನ ನಂಗೆ ಮಾಡಿಸ್ಕೊಡ್ತೀನಿಂತ ಹೇಳ್ದೆಯಲ್ಲಾ, ಎಲ್ಲಿ, ಅದರ ಗಂಧಾನೂ ಇಲ್ಲ. ಅದು ಯಾವಾಗ ಮಾಡಿಸ್ಕೊಡ್ತಿ ಹೇಳು.'

'ಅದೇನು ನಮ್ಮಪ್ಪನ ಆಸ್ತೀನಾ ತಗೊಂಡುಹೋಗು ಅನ್ನೋಕೆ, ರತ್ನಕ್ಕ ಒಪ್ಪಬ್ಯಾಡ್ವಾ?'

'ನೀನು ಹೇಳಿದ್ರೆ ರತ್ನಕ್ಕ ಒಪ್ಪೋಕಿಲ್ವಾ? ನೀನು ಹೇಳ್ದೆ ಈಗ ಅಲ್ಲಿಂದ ಒಂದು ಕಡ್ಡೀನೂ ಕದಲೋಕಿಲ್ಲ. ನಂಗೊತ್ತಿಲ್ವಾ? ಆ ಮಾತೆಲ್ಲಾ ಯಾಕೆ ಚಿನ್ನೋಬಯ್ಯ, ನನ್ನ ಕೆಲ್ಸ ಮಾಡಿಕೊಡ್ತೀಯೋ ಇಲ್ವೋ ಹೇಳ್ಬಿಡು. ಈ ಪಂಚಾಯ್ತಿ ಎಲ್ಲಾ ಬ್ಯಾಡ. ಎಷ್ಟು ದಿನಾಂತ ನಿನ್ನ ಮನೆ ಬಾಗ್ಲಿಗೆ ಅಲೀಲಿ.'

—ವಿಠೋಬ ತಾಳ್ಮೆ ತಪ್ಪುತ್ತಾ ಕೇಳಿದ.

'ಏನು ನನ್ನುಪಕಾರಕ್ಕೆ ಬರ್ತೀಯಾ? ನಿನ್ನ ಕೆಲಸ ಆಗಬೇಕೂಂದ್ರೆ ಬರಬೇಕು.'

—ವಿಠೋಬನ ಧ್ವನಿ ಏರಿದ್ದನ್ನು ಕಂಡು ಚಿನ್ನೋಬಯ್ಯನೂ ಧ್ವನಿ ಏರಿಸಿ ಹೇಳಿದ.

'ಹಂಗಾದ್ರೆ ಅಷ್ಟೇ ಅನ್ನು.'

'ಹೂ. ಅಷ್ಟೇನೇ.'

'ಅಂದ್ರೆ ಈರಮ್ಮ ಹೇಳಿದ್ದೇ ನಿಜ ಆಯ್ತು.'

'ಏನು ನಿಜ ಆಯ್ತು........'

'ರತ್ನಕ್ಕ ನಿನಗೇನೊ ಮಾಟ ಮಾಡಿದಾಳೇಂತ. ಅದಿಲ್ದೆ ಹೋಗಿದ್ರೆ, ನೀನು ಹಿಂಗೆ ತಿರುಗ್ತಾ ಇರಲಿಲ್ಲ—'

—ತನ್ನ ಹೃದಯದಲ್ಲಿ ಮೂಡಿದ ನಿರಾಶೆಯ ಕಹಿಯಲ್ಲಿ ಕಟುವಾಗಿ ಹೇಳಿದ ವಿಠೋಬ.

ಅವನು ಆಡಿದ ಮಾತನ್ನು ಕೇಳಿ ಚಿನ್ನೋಬಯ್ಯನ ಮುಖ ಕೆಂಪೇರಿತು.

'ನಾಲ್ಗೆ ಉಚಾಯಿಸ್ಬೇಡಾ ವಿಠೋಬ, ಏನು ಮಾತಾಡ್ತಿದೀನೀಂತ ಸಿಗಾ ಇರ್ಲಿ.'

—ಸಿಟ್ಟಾಗಿ ಹೇಳಿದ ಚಿನ್ನೋಬಯ್ಯ.

'ಇದ್ದದ್ದು ಇದ್ದಂಗೆ ಹೇಳಿದ್ರೆ ಸಿದ್ದಪ್ಪನಿಗೆ ಸಿಡಿಲು ಬಡೀತಂತೆ. ನಿನ್ನ ಹಣೆಬರಾ ನಂಗೆ ಗೊತ್ತಿಲ್ವ, ಸೆರಗಿನ ಗಾಳಿ ಬೀಸಿದ್ರೆ ಬಾಯಿ ಬಿಡೋನು ನೀನು. ಇನ್ನು ತಾನಾಗೆ ಕೈಗೆ ಸಿಕ್ಕಿದ್ದನ್ನು ಬಿಡ್ತೀಯಾ. ಆ ರುಚಿ ಕಂಡಿ ರೋಹೊತ್ತಿಗೆ ಇಷ್ಟೆಲ್ಲಾ ಮಾತು ಹೊರಡ್ತಾ ಇರೋದು.'

—ವಿಠೋಬನೂ ಪ್ರಜ್ಞೆ ತಪ್ಪುತ್ತಾ ಹೇಳಿದ.

'ಇನ್ನೊಂದ್ಸಲ ಹಂಗ್ಮಾತಾಡಿದ್ರೆ ಬಾಯಾಗೆ ಹಲ್ಲುಳಿಯಾಕಿಲ್ಲ ವಿಠೋಬ'

—ಉಕ್ಕಿ ಬಂದ ಸಿಟ್ಟಿನಲ್ಲಿ ಏದುತ್ತಾ ಹೇಳಿದ ಚಿನ್ನೋಬಯ್ಯ.

'ಒಂದ್ಸಲ ಅಲ್ಲ ನೂರು ಸಲ ಹೇಳ್ತೀನಿ.'

—ವಿಠೋಬನೂ ಸೆಟೆದು ಹೇಳಿದ.

ಚಿನ್ನೋಬಯ್ಯ ವಿಠೋಬನ ಆ ಮಾತಿಗೆ ಉತ್ತರ ಕೊಡಲಿಲ್ಲಿ. ಅವನಿಗಿಂತ ಮುಂದಾಗಿ ಅವನ ಬಿಗಿದ ಮುಷ್ಟಿ ಉತ್ತರಕೊಟ್ಟಿತು. ಏಟು ತಿಂದ ವಿಠೋಬ ಹೆಡೆ ತುಳಿದ ಹಾವಾದ.

ಪೆಟ್ಟು ಬಿದ್ದ ಕೆನ್ನೆಯನ್ನು ಸವರಿಕೊಳ್ಳುತ್ತಾ, ನುಂಗುವವನಂತೆ ಚಿನ್ನೋಬಯ್ಯನನ್ನು ಕೆಂಪೇರಿದ ಕಣ್ಣುಗಳಿಂದ ನೋಡುತ್ತಾ—

'ನಿನಗೆ, ನೀನು ಮಡಗಿಕೊಂಡಿರೋಳಿಗೆ ಏಳೇಳು ಕೆರೆ ನೀರು ಕುಡಿಸ್ದೆ

ಹೋದ್ರೆ ನನ್ನೆಸ್ರು ವಿಠೋಬನೇ ಅಲ್ಲ.

—ಎಂದು ಹೇಳಿ, ಹೊರಟುಹೋದ ವಿಠೋಬ.

ಚಿನ್ನೋಬಯ್ಯನೂ ಸಿಟ್ಟು ತುಂಬಿದ ಕಣ್ಣುಗಳಿಂದಲೇ ವಿಠೋಬ ಹೋದತ್ತಲೇ ನೋಡುತ್ತಿದ್ದ ಹೊತ್ತು ಕಳೆದ ಹಾಗೆ, ಅವನ ಸಿಟ್ಟು ಇಳಿದು, ಸಿಟ್ಟಿನ ಜಾಗದಲ್ಲಿ ಭಯ ಸುಸುಳಿ, ಅವನ ಅಂಗೈ ಬೆವರಲಾರಂಭಿಸಿತು.

# ೭

ವಿಠೋಬ, ಈರಮ್ಮ ಇವರ ಹೃದಯದ ಕಹಿ, ರತ್ನಮ್ಮನ ವಿಷಯದಲ್ಲಿ ಅಪವಾದವಾಗಿ, ಹೊಗೆಯಂತೆ ಹಳ್ಳಿಯಲ್ಲಿ ಹಬ್ಬಿತು. ರಾಘಣ್ಣ ರತ್ನಮ್ಮನ ಮನೆಯ ಕಡೆ ಹೋಗುವುದು ತಪ್ಪಿ, ಚಿನ್ನೋಬಯ್ಯನ ಓಡಾಟ ಹೆಚ್ಚಿದಂದಿನಿಂದಲೂ ಒಳಗೊಳಗೇ ಕವುರುತ್ತಿದ್ದ ಆ ಕೆಟ್ಟ ಮಾತು, ಈರಮ್ಮನ ಬಾಯಿಂದ ಪ್ರಕಟವಾಗಿ ಬಂದ ಮೇಲೆ, ವಿಠೋಬ ಅಲ್ಲಲ್ಲಿ ಸೂಚ್ಯವಾಗಿ ಆಡಿದ ಬಳಿಕ, ಕಟ್ಟೆಯ ಕಲ್ಲು ಸಡಿಲವಾದಾಗ ಜಿನಗುವ ನೀರಿನಂತೆ, ಪಿಸು ಮಾತಾಗಿ, ಅರ್ಥಗರ್ಭಿತವಾದ ನೋಟವಾಗಿ, ಕೆಣಕು ನಗೆಯಾಗಿ, ವ್ಯಂಗ್ಯವಾದ ಮಾತಾಗಿ ಹರಿದಿತು.

ಮೊದಮೊದಲು ಗಟ್ಟಿಯಾಗಿ ಮಾತನಾಡಲು ಯಾರಿಗೂ ಧೈರ್ಯವಿರಲಿಲ್ಲವಾದರೂ, ಗಂಡಸರ ಕಿವಿಗೆ ಈ ಮಾತು ಬೀಳುವುದು ತಡವಾದರೂ, ಕಮಲಮ್ಮನ ಕಿವಿಗೆ ಈ ಮಾತು ಬೀಳದೆ ಹೋಗಲಿಲ್ಲ.

ಕೇಳಬಾರದ ಈ ಸುದ್ದಿಯನ್ನು ಕೇಳಿ ಕಮಲಮ್ಮನಿಗೆ ಕರುಳಿಗೇ ಬೆಂಕಿ ಹೊತ್ತಿಸಿದಂತಾಯಿತು. ಆ ಸುದ್ದಿಯನ್ನು ಕೇಳಿದ ದಿನ ಆಕೆಯ ಗಂಟಲಲ್ಲಿ ಅನ್ನ ನೀರು ಇಳಿಯಲಿಲ್ಲ. ಹತ್ತಾರು ಕಡೆಯಿಂದ ಪೆಟ್ಟು ತಿಂದವಳಂತೆ ಮಿಡುಕಿದಳು. ಛಾವಣಿಯೇ ನೆತ್ತಿಯ ಮೇಲೆ ಕುಸಿದು ಬಿದ್ದವಳಂತೆ, ಏನು ಮಾಡಬೇಕೆಂದು ತೋಚದೆ ಕುಳಿತುಬಿಟ್ಟಳು— ರಾಘಣ್ಣ ಮನೆಗೆ ಬರುವುದನ್ನೇ ಕಾಯುತ್ತಾ.

ರಾಘಣ್ಣ–ರತ್ನಮ್ಮನ ನಡುವೆ ವಿರಸ ಮೂಡಿದ ಹೊಸದರಲ್ಲಿ, ಆವನು

ಮಾಡಿದ ಕಟ್ಟಿಗೆ ಹೆದರಿ, ಒಂದೆರಡು ದಿನದಲ್ಲಿ ಇದು ಸರಿ ಹೋಗಬಹು ದೆಂದು, ತಾನೂ ರತ್ನಮ್ಮನ ಮನೆಗೆ ಹೋಗುವುದನ್ನು ಬಿಟ್ಟಿದ್ದಳು ಕಮಲಮ್ಮ. ಬರಬರುತ್ತಾ ಆ ವಿರಸ ದೂರವಾಗದೆ, ದಿನ ದಿನಕ್ಕೆ ಬೆಳೆದುದನ್ನು ಕಂಡು, ರತ್ನಮ್ಮನೂ ತಮ್ಮ ಮನೆಗೆ ಬರದೆ, ಮಗನನ್ನು ಕಳಿಸುವುದನ್ನು ಬಿಟ್ಟುದನ್ನು ಕಂಡು, ರತ್ನಮ್ಮ ಚಿನ್ನೋಬಯ್ಯನ ಮಾತಿನಂತೆ ನಡೆಯುತ್ತಿದ್ದಾಳೆ ಎಂಬುದನ್ನು ಕೇಳಿ, ತಮ್ಮನ್ನು ದೂರ ಮಾಡಿದ ರತ್ನಮ್ಮನ ವಿಷಯದಲ್ಲಿ ಕಮಲಮ್ಮನಿಗೂ ಅಸಮಾಧಾನವಾಗಿತ್ತು.'

'ಮಗಳ ಹಾಗೆ ಸಾಕಿದ ಹುಡುಗಿ, ಎಷ್ಟಾದರೂ ಹೆಣ್ಣು ಹೆಂಗಸು, ಗಂಡಸು ಒಂದು ಮಾತು ಮಾತಾಡಿದ ಅಂತ ಅಷ್ಟು ಹಟ ಸಾಧಿಸೋದೇ? ತಾನೇ ಸ್ವಲ್ಪ ಸೋತು ನಡೆದುಕೊಂಡಿದ್ದರೆ ಏನಾಗುತ್ತಿತ್ತು.'

—ಎಂದು ಮುನಿಸಿಕೊಂಡಿದ್ದಳು.

ಆದರೂ ಈ ಕೆಟ್ಟಸುದ್ದಿಯನ್ನು ಕೇಳಿದ ಹೊತ್ತಿನಲ್ಲಿ ಆ ಅಸಮಾಧಾನ, ಮುನಿಸು ಎಲ್ಲವೂ ಕರಗಿಹೋಗಿ, ರತ್ನಮ್ಮನ ವಿಷಯದಲ್ಲಿ ಮೊದಲಿದ್ದ ಪ್ರೀತಿ ತಾನೇ ತಾನಾಗಿ ಮೆರೆಯಿತು. ಆಕೆ ಆ ಕೆಟ್ಟ ಸುದ್ದಿಯನ್ನು ನಂಬಲಿಲ್ಲ. ಅದಕ್ಕೆ ಬದಲಾಗಿ, ತನ್ನ ಕಿವಿಗೆ ಬಿದ್ದ ಈ ಮಾತು ಆ ಮರ್ಯಾದಸ್ಥಳಾದ ಹುಡುಗಿಯ ಕಿವಿಗೆ ಬಿದ್ದರೆ, ಅವಳು ಏನು ಮಾಡಿಕೊಂಡಾಳೋ ಎಂಬ ಭೀತಿ ಬಲಿಯಿತು. ತನ್ನಲ್ಲಿ ಮೂಡಿದ ಭೀತಿಯ ಬೆಂಕಿಯಲ್ಲಿ ಬಳಲುತ್ತಾ, ರಾಘಣ್ಣ ಬರುತ್ತಿದ್ದ ಹಾಗೆ—

'ರಾಘೂ .... ರಾಘೂ .... ಈ ಕೆಟ್ಟ ಸುದ್ದಿ ಕೇಳ್ದೇನೊ.'

—ಎಂದಳು ತಾನೇ ತಾನಾಗಿ ಉಕ್ಕಿಬಂದ ಕಂಬನಿಯಲ್ಲಿ ಕರಗಿ ಹೋಗುತ್ತಾ.

ತಾಯಿಯ ಅನಿರೀಕ್ಷಿತವಾದ ಈ ದುಃಖ, ಕೆಟ್ಟ ಸುದ್ದಿ ಎಂದ ಮಾತನ್ನು ಕೇಳಿ ರಾಘಣ್ಣನೂ ಗಾಬರಿಯಾದ.

'ಏನು....ಏನಾಯಿತು....'

—ಎಂದು ಉದ್ವಿಗ್ನನಾಗಿ ಕೇಳಿದ.

'ಹೆಂಗೆ ಹೇಳ್ಲೋ ಆ ಸುಡುಗಾಡು ಮಾತ್ನ .......'

—ಆ ಮಾತನ್ನು ಬಾಯಾರ ಆಡಲಾಗದೆ, ಆರ್ತತೆಯಿಂದ ಹೇಳಿದಳು ಕಮಲಮ್ಮ.

'ಹೇಗೇಂದ್ರೆ ಏನು ಹೇಳ್ಲಿ. ಏನೂಂತ ಹೇಳ್ದೆ ಹೋದ್ರೆ ನನಗೆ ತಿಳಿಯೋದು ಹೇಗೆ? ನೀನು ಸುಮ್ನೆ ಅಳ್ತಾ ಇದ್ರೇ ನನಗೆಲ್ಲಾ ಅರ್ಥ ಆಗ್ತದೆಯೇ? ಅದೇನೋ ಹೇಳು. ಆಮೇಲೆ ಅಳೋವಂತೆ.'

—ತಾಯಿಯ ಅಳುಮುಖವನ್ನು ನೋಡಲಾಗದೆ ಆಕ್ರೋಶದಿಂದ ಕೇಳಿದ ರಾಘಣ್ಣ.

ಆ ಮಾತನ್ನು ಹೇಳಲಾಗದೆ, ಹೇಳಲೂ ಇರಲಾಗದೆ, ತಡೆತಡೆದು ವಿಷ ನುಂಗುವವಳಂತೆ ಹೇಳಿದಳು ಕಮಲಮ್ಮ. ಆ ಮಾತನ್ನು ಕೇಳ ಕೇಳುತ್ತಾ ರಾಘಣ್ಣನ ಮುಖದಲ್ಲಿದ್ದ ಬಣ್ಣವೆಲ್ಲಾ ಬಸಿದು ಹೋಯಿತು. ಕಣ್ಣಿನಲ್ಲಿ ಕತ್ತಲೆ ತುಂಬಿ ಬಂದಂತಾಯಿತು. ನಿಂತಿದ್ದವನು ಹಾಗೇ ಕುಸಿದು ಕುಳಿತು ಬಿಟ್ಟ. ಅಷ್ಟು ಹೊತ್ತು ತೋಳಿನಲ್ಲಿ ಮುಖ ಮುಚ್ಚಿಕೊಂಡು ಕುಳಿತಿದ್ದವನು, ಕಷ್ಟಪಟ್ಟು ಮುಖವೆತ್ತಿ, ಶುಷ್ಕವಾದ ಧ್ವನಿಯಲ್ಲಿ—

'ಆಯ್ತು. ಈಗ ಅವಕ್ಕೇನು ಮಾಡಬೇಕೂಂತೀಯ.'

—ಎಂದು ಕೇಳಿದ.

'ಹಂಗಂದ್ರೇನು ರಾಘೂ, ಇಂಥ ಸುದ್ದಿ ಕೇಳಿದ ಹೊತ್ತಿನಲ್ಲಿ ಸುಮ್ಮನಿದ್ದರೆ ಹುಟ್ಟಿದ್ದಕ್ಕೇನು ಸಾರ್ಥಕ?'

'ನಾನು ಬ್ಯಾಡ ಬ್ಯಾಡಾಂತ ಬಡುಕೊಂಡೆ. ರತ್ನಕ್ಕ ನನ್ನ ಮಾತು ಕೇಳಲಿಲ್ಲ. ತಾನೇ ತನ್ನ ತಲೆಮೇಲೆ ತಂದುಕೊಂಡಳು ಈ ಪೀಡೇನ. ಅದಕ್ಕೆ ನಾನೇನು ಮಾಡಲಿ ಹೇಳು. ನನ್ನ ಮಾತು ಕೇಳಿಕೊಂಡು ಇದ್ದಿದ್ದರೆ ಇಷ್ಟಕ್ಕೆಲ್ಲಾ ಅವಕಾಶವಾಗ್ತ ಇರಲಿಲ್ಲ. ಅದು ಹೇಳೋಕೆ ಹೋಗಿ ನಾನೇ ಬೇಡವವನಾದೆ. ಸಗಣಿ ಮುಟ್ಟಿದವನು ವಾಸನೇನೂ ಅನುಭವಿಸಬೇಕು.'

'ಇದೇ ಹಾಳ್ಮಾತಾಡ್ತೀಯೋ, ಅಥವಾ ನನ್ನ ಮಾತು ಅಷ್ಟು ಕೇಳ್ತೀಯೋ.'

—ಮಗನ ಮಾತು ಕೇಳಿ ಕಮಲಮ್ಮ ಸಿಟ್ಟಾಗಿ ಹೇಳಿದಳು.

'ಅದೇನು ಹೇಳು.'

‘ ಎರಡು ದಿನ ನಿನ್ನ ದುರಭಿಮಾನವೆಲ್ಲ ಒಂದು ಕಡೆ ಕಟ್ಟಿಟ್ಟು ರತ್ನಾ ಮನೇಗೆ ಹೋಗಿ ಅವಳಿಗೆ ಬುದ್ಧಿ ಹೇಳು.’

‘ ಆಯ್ತು. ನಿನ್ನ ಮಾತಿಗೆ ಒಪ್ಪಿ ನಾನು ನನ್ನ ಮರ್ಯಾದೆ ಹಾಳಾಗಲಿ ಅಂತ ಹೋಗಿ ಬುದ್ಧಿವಾದ ಹೇಳಬಹುದು. ಆದರೆ ರತ್ನಕ್ಕ ನನ್ನ ಮಾತನ್ನು ಕೇಳದಿದ್ದರೆ ಏನು ಮಾಡಲಿ. ಮತ್ತೆ ಮುಖಕ್ಕೆ ಮಂಗಳಾರತಿ ಎತ್ತಿಸಿಕೊಂಡು ಬರಲೇನು?’

‘ ನಿನ್ನ ಮಾತು ಕೇಳ್ದೆ ಹೋದ್ರೆ, ನಂಗೆ ಹೇಳು. ಕಪಾಳಕ್ಕೆ ಎರಡೇಟು ಹಾಕಿ, ಅವಳನ್ನು ಕರಕೊಂಡ್ಹೋಗಿ ಅವಳ ತೌರೂರಿನಲ್ಲಾದರೂ ಅದ್ದಿ ಬರ್‍ತೀನಿ—ನಿನ್ನಂಥೋರಿಗೆ ಈ ಊರಿನ ಸಹವಾಸ ಅಲ್ಲ ಅಂತ ಹೇಳಿ.’

‘ ನಾನು ಹೋಗಿ ಇಲ್ಲ ಅನ್ನಿಸಿಕೊಂಡು ಬರುವ ಮೊದಲೇ ನೀನೇ ಹೋಗಿ, ಈಗ ಹೇಳಿದ ಕೆಲಸ ಮಾಡಬಾರದೇಕೆ ? ’

‘ ಹೆಂಗ್ಸಾಗಿ ಹುಟ್ಟಿ, ಆ ಹುಡುಗಿ ಮುಖಕ್ಕೇ ಈ ಮಾತು ಹೇಗೆ ಹೇಳ್ಳೋ ರಾಘು ? ಆ ಮಾತು ಕೇಳ್ದಾಗ್ಲೇ ಹಾಗೇ ಪ್ರಾಣ ಹೋಗ್ಬಾರ್ದೆ ಭಗವಂತಾ ಅನ್ನಿಸ್ತು.’

‘ ನಾನು ತಾನೇ ಆ ಮಾತು ಹೇಗೆ ಹೇಳಲಿ ? ’

‘ ಎಷ್ಟಾದರೂ ನೀನು ಗಂಡಸು. ಹೇಗೆ ಹೇಳಬೇಕೋ ಹಾಗೆ ಹೇಳಿ, ಮೊದಲು ಈ ಚಂಡಾಲ ಸಹವಾಸ ತಪ್ಪಿಸು. ನನ್ನ ಮಗನಾಗಿ ಹುಟ್ಟಿದ್ದಕ್ಕೆ ಇದೊಂದು ಮಾತು ಕೇಳು ರಾಘು. ನನ್ನ ಮರ್ಯಾದೆಗಿಂತ ಅವಳ ಮೇಲಿನ ವ್ಯಾಮೋಹಾನೇ ಹೆಚ್ಚಾಯ್ತು ಅಂತ ಕೇಳ ಬೇಡ.’

—ಮಗನನ್ನು ಅಂಗಲಾಚಿ ಬೇಡಿ ಕೇಳಿದಳು ಕಮಲಮ್ಮ.

ತಾಯಿಯ ಆ ಬೇಡಿಕೆಗೆ ಇಲ್ಲವೆನ್ನಲಾಗದೆ, ರಾಘಣ್ಣ ಆಗಲೇ ಎದ್ದು ರತ್ನಮ್ಮನ ಮನೆಯತ್ತ ಹೊರಟ.

* * * * *

ನಡುಮನೆಯಲ್ಲಿ ಯಾರೋ ರೈತರಹೆಂಗಸಿನೊಂದಿಗೆ ಮಾತನಾಡುತ್ತಾ ಮುಂದಿದ್ದ ಮಣೆಯ ಮೇಲೆ ಹರಡಿಕೊಂಡ ಅಕ್ಕಿಯಲ್ಲಿ ಕಲ್ಲು ಆರಿಸುತ್ತಾ ಕುಳಿತಿದ್ದ ರತ್ನಮ್ಮ ಬಿರುಗಾಳಿಯಂತೆ ಒಳಗೆ ಬಂದ ರಾಘಣ್ಣನನ್ನು ಕಂಡು ಮಿಂಚು ಸೋಕಿದಂತಾದಳು.

ಒಳಗೆ ಬಂದ ರಾಘಣ್ಣನನ್ನು ಕಂಡ ರೈತ ಹೆಂಗಸು, ತಲೆಯ ಮೇಲೆ ಓರೆಯಾಗಿದ್ದ ಮುಸುಕನ್ನು ಎಳೆದು ಕೊಂಡು—

‘ ಮತ್ತೆ ನಾನು ಬರ್‍ತೀನಿ ಕಣಕ್ಕ’

—ಎಂದು ಹೇಳಿ ಎದ್ದು ಹೋದಳು.

ನಿಂತೇ ಇದ್ದ ರಾಘಣ್ಣನನ್ನು ಕಂಡ ರತ್ನಮ್ಮ ಒಂದು ಗಳಿಗೆ ಮಾತೇ ಆಡದೆ ಅವನ ಮುಖವನ್ನೇ ದಿಟ್ಟಿಸಿ ನೋಡಿ—

‘ ಅಂತು ಇಷ್ಟು ದಿನಕ್ಕಾದರೂ ಬಡವರ ಮೇಲೆ ದಯ ಬಂತಲ್ಲ ರಾಘಣ್ಣ ’

—ಎಂದಳು. ಆ ಮಾತಿನಲ್ಲಿ ಆಪಾದನೆಯ ಕಟುತೆ ಇರಲಿಲ್ಲ, ನೋವಿನ ಮೃದುತೆ ಇತ್ತು.

ಆ ಮಾತು ಕೇಳಿ ರಾಘಣ್ಣನ ಕರುಳಲ್ಲಿ ಚೂರಿಯನ್ನು ಆಡಿಸಿದಂತಾಯಿತು. ತನ್ನತ್ತ ನೋಡುತ್ತಿದ್ದ ರತ್ನಕ್ಕನ ಮುಖವನ್ನು ನೋಡಲಾಗದೆ, ಬೇರೆ ಕಡೆ ಮುಖ ತಿರುಗಿಸಿಕೊಂಡು—

‘ ಅದೆಲ್ಲಾ ಮಾತಿಗೆ ಈಗ ಹೊತ್ತಿಲ್ಲ ರತ್ನಕ್ಕ. ನಿನ್ನ ಒಂದು ಮಾತು ಕೇಳಲಿಕ್ಕೆ ಬಂದಿದೀನಿ.’

—ಎಂದ.

‘ ಏನು ಹೇಳು ರಾಘಣ್ಣ.’

‘ ಈಗಲೇ ನೀನು ಹೊರಡಬೇಕು.’

‘ ಆ—ಎಲ್ಲಿಗೆ ? ’

—ರಾಘಣ್ಣನ ಮಾತು ಕೇಳಿ ಚಕಿತಳಾಗಿ ಕೇಳಿದಳು ರತ್ನಮ್ಮ.

‘ ನಮ್ಮ ಮನೆಗೆ.’

‘ ಯಾಕೆ—ಕಮಲತ್ತೆ ಕರೆದಳೇ?’

‘ ಹೂ.’

‘ ಕೈಲಿ ಹಿಡಿದಿರೋ ಕೆಲ್ಸ ಮುಗಿಸಿಕೊಂಡು ಬರ್‍ತೀನೀಂತ ಹೇಳು.’

‘ ಈ ಕೆಲ್ಸಕ್ಕೆಲ್ಲಾ ಬೆಂಕಿ ಬೀಳಲಿ. ನೀನಿನ್ನು ಈ ಮನೇಲಿರಕೂಡದು ನಡಿ ಹೋಗೋಣ.’

—ಬೆಂಕಿ ತಗುಲಿದ ಮದ್ದಿನಂತೆ ಸಿಡಿದು ಹೇಳಿದ ರಾಘಣ್ಣ.

'ಇದೇನು ಮಾತು ರಾಘಣ್ಣ. ನೀನಾಡೋ ಮಾತೇ ನನಗೆ ಅರ್ಥ ವಾಗ್ತಾ ಇಲ್ಲ.'

—ರಾಘಣ್ಣನ ಮಾತು ಕೇಳಿ ದಿಗ್ಭ್ರಾಂತಳಾಗಿ ಕೇಳಿದಳು ರತ್ನಮ್ಮ.

'ನಿನಗೆ ಯಾವ ಮಾತೂ ಅರ್ಥವಾಗೋದು ಬೇಕಾಗಿಲ್ಲ ರತ್ನಕ್ಕ. ನನ್ನ ಹೆಚ್ಚಿಗೆ ಏನೂ ಕೇಳಬೇಡ. ನಾನೇನೂ ಹೇಳಲಾರೆ.'

—ಮಾತನ್ನು ತಡೆತಡೆದು ಹೇಳಿದ ರಾಘಣ್ಣ.

ಅವನ ಮಾತು, ಮಾತಿನ ರೀತಿ ರತ್ನಮ್ಮನಿಗೆ ಅರ್ಥವಾಗದೆ ಮತ್ತಷ್ಟು ಗೊಂದಲದಲ್ಲಿ ಬಿದ್ದಳು.

'ಈ ಮನೆ ಬಿಟ್ಟು ಹೋಗಬೇಕೂಂತೀಯ. ಎಲ್ಲಿಗೆ, ಏಕೆ ಅಂತ ಕೇಳಲೂ ಬಾರದೆ ನಾನು ?'

'ಊಹೂ. ಇವತ್ತು ನನ್ನೇನೂ ಕೇಳಬೇಡ.'

'ಏಕೆ ?'

'ಏಕೆ....ಏಕೆ....ಏಕೆ....ಸುಮ್ಮನೇ ಅದೇ ಮಾತಾಡಿ ನನ್ನ ಕೊಲ್ಲ ಬೇಡ ರತ್ನಕ್ಕ. ನಾನು ಹೇಳಿದಷ್ಟು ಕೇಳಿ ಇಲ್ಲಿಂದ ಹೊರಟು ಬಿಡು.'

'ಈ ಮನೇಲಿರಲಿಕ್ಕೇ ಅವರು ನನ್ನ ಬಿಟ್ಟು ಹೋಗಿದಾರೆ. ಅವನ್ನು ಹೇಗೆ ಬಿಟ್ಟು ಬರಲಿ ರಾಘಣ್ಣ ? ಇದನ್ನು ಯಾರಿಗೆ ಒಪ್ಪಿಸಿ ಬರಲಿ.'

'ದೇವರಿಗೆ. ನನ್ನ ಮಾತುಕೇಳು ರತ್ನಕ್ಕ. ನೀನು ಇನ್ನು ಈ ಮನೇಲಿ ಇರಲಾರೆ. ಕೈ ಮಿಂಚಿ ಹೋಗುವ ಮೊದಲು ನಮ್ಮ ಮನೆಗೆ ಬಾ. ನನ್ನಲ್ಲಿ ನಿನಗೆ ನಂಬಿಕೆ ಇಲ್ಲವಾದರೆ, ಸುಮ್ಮನೆ ತವರು ಮನೆಗಾ ದರೂ ಹೊರಟು ಹೋಗು. ನೀನಿನ್ನು ಇಲ್ಲಿರಲು ಸಾಧ್ಯವಿಲ್ಲ. ಇರಕೂಡದು.'

'ಅಂಥಾದ್ದು ಈಗೇನಾಗಿದೆ ರಾಘಣ್ಣ ? ಅದೇನೋ ಮಾತು ನೀನು ನನ್ನಿಂದ ಮುಚ್ಚಿಡ್ತಾ ಇದೀಯ. ಅದೇನು ಹೇಳು.'

'ಅದೇನು ಅಂತ ಕೇಳಬೇಡ ಅಂತ ಒಂದು ಸಲ ಹೇಳಲಿಲ್ಲವೇ ರತ್ನಕ್ಕ.. .....'

'ಹೇಳಿದೆ. ಆದರೂ ಅಷ್ಟಕ್ಕೇ ಸಮಾಧಾನ ಪಟ್ಟುಕೊಳ್ಳಲೇ? ಅದೇ ನಿದ್ದರೂ ಹೇಳು, ಮುಚ್ಚುಮರೆ ಏಕೆ ? ಅಷ್ಟು ಹೇಳಲಾರದಂಥ ಮಾತು ತಾನೇ ಯಾವುದು ಇದೆ.'

—ರತ್ನಮ್ಮ ರಾಘಣ್ಣನ ಹಿಂಜರಿಯುವಿಕೆಯಿಂದ ಮತ್ತಷ್ಟು ಕುತೂಹಲ ಕೆರಳಿ ಒತ್ತಾಯಮಾಡಿ ಕೇಳಿದಳು.

'ಅಂತೂ ಈ ಹಾಳು ಮಾತು ನನ್ನ ಬಾಯಿಂದ ಹೊರಡಿಸೋವರೆಗೂ ನಿನಗೆ ಸಮಾಧಾನ ಇಲ್ಲ ಅನ್ನು'

— ಸಿಡಿದು ಕೇಳಿದ ರಾಘಣ್ಣ.

ಆ ಮಾತಿಗೆ ರತ್ನಮ್ಮ ಉತ್ತರ ಕೊಡದೆ ಹೌದು ಎಂಬಂತೆ ರಾಘಣ್ಣನ ಮುಖವನ್ನು ನೋಡಿದಳು. ಆ ನೋಟದಿಂದ ಪ್ರಕ್ಷುಬ್ಧನಾಗಿ ಹೇಳಿದ ರಾಘಣ್ಣ—

'ಅಷ್ಟು ಕೇಳಬೇಕೂಂತಲೇ ಹಟ ಇದ್ದರೆ ಕೇಳ್ಳೇ ಬಿಡು. ಈ ಮಾತು ಹೇಳೋಕೆ ಮೊದಲು ನನ್ನ ನಾಲಗೆ ಉದುರಿ ಹೋಗಿದ್ದರೂ, ನನಗೆ ಸಂತೋಷ ಆಗ್ತಾ ಇತ್ತು. ಅಷ್ಟು ಪುಣ್ಯಾನೂ ನನ್ನ ಹಣೇಲಿ ಬರೆದಿಲ್ಲ. ಊರೆಲ್ಲಾ ಏನು ಆಡಿಕೋತಾ ಇದೆ ಗೊತ್ತೆ ರತ್ನಕ್ಕ....'

ರಾಘಣ್ಣ ಆ ಮಾತನ್ನು ಆಡಿದ ರೀತಿಯನ್ನು ಕೇಳಿ ರತ್ನಮ್ಮನಿಗೆ ಹೃದಯವನ್ನು ಹಿಂಡಿದಂತಾಯಿತು.

'ಏ....ಏ....ಏನು....ಆಡ್ಕೋತಾ....ಇ....ದಾ....ರೆ....ರಾಘಣ್ಣ....'

—ಎಂದು ಒಣಗಿದ ತುಟಿಯನ್ನು ನಾಲಗೆಯಿಂದ ಸವರಿಕೊಳ್ಳುತ್ತಾ, ತಡೆತಡೆದು ಕೇಳಿದಳು.

'ಚಿನ್ನೋಬಯ್ಯ ನಿನ್ನ ಇಟ್ಕೊಂಡಿದಾನಂತೆ.'

ಆ ಮಾತು ಕಿವಿಗೆ ಬೀಳುತ್ತಿದ್ದ ಹಾಗೇ ರತ್ನಮ್ಮನ ಮುಖಕ್ಕೆ ರಪ್ಪನೆ ಹೊಡೆದಂತಾಯಿತು. ತಲೆ ಸುತ್ತಿ ಬಂದು, ಕೈಕಾಲುಗಳು ನಡುಗ ತೊಡಗಿದುವು.

'ನಿ....ನಿ....ನಿ....ಜಾ....ನೇ....ರಾಘಣ್ಣ....'

—ಅಮಲೇರಿದವಳಂತೆ ತೊದಲುತ್ತಾ ಕೇಳಿದಳು ರತ್ನಮ್ಮ.

'ಜನ ಆಡ್ಕೊಳ್ದೆ ಹೋಗಿದ್ರೆ, ನಾನೇ ಹುಟ್ಟಿಸಿಕೊಂಡು ಬಂದು ಹೇಳ್ತಾ ಇದ್ನೆ ಈ ಹೊಲಸು ಮಾತನ್ನು? ನಿನ್ನ ದೃಷ್ಟೀಲಿ ನಾನು ಬಹಳ ಕೆಟ್ಟೋನೇ ಇರಬಹುದು ರತ್ನಕ್ಕ, ಆದರೆ ಅಷ್ಟು ನೀಚನಲ್ಲ. ಅಷ್ಟಾದರೂ ನನ್ನಲ್ಲಿ ನಂಬಿಕೆ ಇಡು.'

'ನೀ....ನೀ....ನೀ....ನೂ....ಇ....ಇ....ದ....ನ್ನ....ನಂಬಿದ್ಯಾ....

—ರಾಘಣ್ಣನ ಮಾತೇ ಕಿವಿಗೆ ಬೀಳದವಳಂತೆ ಕೇಳಿದಳು ರತ್ನಕ್ಕ.

'ನಾನು–ನಂಬೋದು! ನಾನು ನಂಬಿದ್ರೆ ಇಲ್ಲೀವರೆಗೂ ಬರ್‍ತಾ ಇರಲಿಲ್ಲ, ರತ್ನಕ್ಕ. ನಂಬದೆ ಹೋದದ್ದಕ್ಕೇ ಈ ಗಟಾರದಿಂದ ನಿನ್ನನ್ನು ಎಳೆದುಕೊಂಡು ಹೋಗಲಿಕ್ಕೆ ಬಂದದ್ದು. ಮೊದಲೇ ಹೇಳಿದೆ ಈ ಸಹವಾಸ ಬೇಡ ಅಂತ. ನನ್ನ ಮಾತು ಕೇಳಲಿಲ್ಲ. ಈ ಚಂಡಾಲರನ್ನು ಮನೆ ಬಾಗಿಲಿಗೆ ಸೇರಿಸಬೇಡ, ಬಂದರೆ ಜೋಡು ತೆಗೆದುಕೊಂಡು ಹೊಡೆದು ಕಳಿಸು ಅಂತ ಗಿಣೀಗೆ ಹೇಳಿದ ಹಾಗೆ ಹೇಳಿದೆ. ಹಾಗೆ ಹೇಳಿ ನಾನೇ ಕೆಟ್ಟವನಾದೆ; ಅವರೇ ಒಳ್ಳೆಯವರಾದರು. ಉದ್ಧಾರ ಮಾಡ್ತಾರೆ ಅಂತ ನೀನು ನಂಬಿದೋರು ಈಗ ಮಾಡಿದಾರೆ ನೋಡು.'

—ಬಹುದಿನದಿಂದ ಎದೆಯಲ್ಲಿ ಗೂಡುಕಟ್ಟಿಕೊಂಡಿದ್ದ ನಂಜನ್ನು ಫೂತ್ಕರಿಸುತ್ತಾ ಹೇಳಿದ ರಾಘಣ್ಣ.

'ಯಾರು ರಾಘಣ್ಣ, ಯಾರ ವಿಷಯ ನೀನು ಆಡ್ತಾ ಇರೋದು....'

'ಇನ್ಯಾರು. ನೀನು ಸಾಕ್ಷಾತ್ತು ದೇವರು ಅಂತ ತಿಳಿದುಕೊಂಡಿದ್ಯಲ್ಲಾ ಆ ಸೂಳೆ ಮಗ ಚಿನ್ನೋಬಯ್ಯ. ಅವನ್ನ ನೀನು ಮನೇಲಿ ಬಿಟ್ಕೊಂಡದ್ದೇ ಇಷ್ಟಕ್ಕೆಲ್ಲಾ ಕಾರಣ.'

ತನ್ನ ದುಃಖ, ಕ್ರೋಧ, ಉನ್ಮಾದದಲ್ಲಿ ಹುಚ್ಚಾಗಿದ್ದ ರಾಘಣ್ಣನ ಬಾಯಿಂದ ಬಂದ ಕಟುವಾದ ಮಾತುಗಳನ್ನೂ, ಚಿನ್ನೋಬಯ್ಯನ ಮೇಲಿನ ನಿರಾಧಾರವಾದ ಅಪಾದನೆಗಳನ್ನು ಕೇಳಿ, ರತ್ನಮ್ಮನಿಗೆ ಆ ಯೋಚನೆಯಲ್ಲಿ ತನ್ನ ಮೇಲೆ ಬಂದ ಘೋರ ಆಪಾದನೆಯ ಮಾತೂ ಮರೆತುಹೋಗಿ—

'ರಾಘಣ್ಣ, ದುಃಖದಲ್ಲಿ ಹಾಗೆಲ್ಲಾ ಪ್ರಜ್ಞೆ ತಪ್ಪಿ, ಉಚಾಯಿಸಿ ಮಾತನಾಡಬಾರದು.'

—ಎಂದಳು.

'ಏನು....ಏನಂದೆ....ನಾನು ಉಚಾಯಿಸಿ ಮಾತಾಡ್ತಾ ಇದೀನಾ ರತ್ನಕ್ಕ?'

—ಅನಿರೀಕ್ಷಿತವಾದ ರತ್ನಮ್ಮನ ಮಾತು ಕೇಳಿ, ಚಕಿತನಾಗಿ ಕೇಳಿದ ರಾಘಣ್ಣ.

' ಹೂ. ನೀನೇ. ಯಾರೋ ನನ್ನ ವಿಷಯದಲ್ಲಿ ಕೆಟ್ಟ ಮಾತು ಆಡಿದ ರೂಂತ ಕೇಳಿ ನಿನಗೆ ದುಃಖವಾಗಿದೆ ರಾಘಣ್ಣ. ನಿನ್ನ ಸಂಕಟ ನನಗೂ ಅರ್ಥವಾಗುತ್ತೆ. ನಿನ್ನ ಮಾತು ನಾನು ಕೇಳಲಿಲ್ಲ ಅಂತ ನಿನಗೆ ಸಿಟ್ಟಿದ್ದರೆ ನನ್ನನ್ನು ಬೇಕಾದಷ್ಟು ಅನ್ನು. ಆದರೆ ಏನೂ ತಪ್ಪು ಮಾಡದೆ, ಯಾವ ಆಸೆ ಯನ್ನು ಪಡದೆ ನನಗಾಗಿ ದುಡೀತಾ ಇರೋರನ್ನ ಅಂದರೆ ದೇವರು ಮೆಚ್ಕೊಲ್ಲ ರಾಘಣ್ಣ. ಇನ್ನೊಂದು ಸಲ ಅಂಥ ಮಾತಾಡಬೇಡ. ನೀನು ಹೇಗೋ ಚಿನ್ನೋಬಯ್ಯನೂ ಹಾಗೇ ನನಗೆ. '

' ಅಂದರೆ....ಅಂದರೆ....ನನ್ನ, ಚಿನ್ನೋಬಯ್ಯನ್ನ ಇಬ್ಬರನ್ನೂ ಒಂದೇ ತೂಕ ಮಾಡ್ತೀಯಾ ? '

' ನಿಜ. ನನ್ನ ದೃಷ್ಟಿಯಲ್ಲಿ ನೀವಿಬ್ಬರೂ ಒಂದೇ. ಆತ ನನಗೆ ಯಾವ ದ್ರೋಹವನ್ನೂ ಮಾಡಲಿಲ್ಲ. ಎಂಥ ನೀಚ ಆಸೆಯನ್ನೂ ಇಟ್ಟುಕೊಳ್ಳಲಿಲ್ಲ. ನಾನು ಬಲ್ಲೆ. ನಾನು ಸುಖವಾಗಿರಲಿ ಅಂತ, ತನ್ನ ಕೆಲಸಾನೂ ಬಿಟ್ಟು, ಅವರ ಸ್ನೇಹಕ್ಕೆ ಕಟ್ಟು ಬಿದ್ದು ದುಡೀತಾ ಇರೋ ಜೀವಾನ ಹಾಗೆಲ್ಲಾ ಅನ್ನ ಬಾರದು ರಾಘಣ್ಣ,ಅನ್ನಬಾರದು. ಹಾಗಂದೋರಿಗೆ ಒಳ್ಳೇದಾಗೊದಿಲ್ಲಾ. '

ತನ್ನ ನೆತ್ತಿಯ ಮೇಲೆ ಕವಿದು ಬಂದ ಅಪವಾದದ ಆಪತ್ತನ್ನು ಮರೆತು ರತ್ನಮ್ಮ ಚಿನ್ನೋಬಯ್ಯನ ರಕ್ಷಣೆಗೆ ಧಾವಿಸಿದ್ದನ್ನು ಕಂಡು ರಾಘಣ್ಣನಿಗೆ ಆಕೆಯ ಒಳ್ಳೆಯತನ ಅರಿವಾಗದೆ, ಅದಕ್ಕೆ ಪ್ರತಿಯಾಗಿ ಸಿಟ್ಟೇ ಹೆಚ್ಚಿತು.

' ಅಕ್ಕತಮ್ಮಂದಿರ ಹಾಗಿದ್ದ ನಮ್ಮನ್ನು ಅಗಲಿಸಿದ ಆ ನೀಚ. ಗಂಗಾ ಜಲದ ಹಾಗಿದ್ದ ನಿನ್ನ ಹೆಸರಿಗೆ ಈ ಕೆಸರು ಬಳಿದ. ಅಷ್ಟಿದ್ದರೂ ಅವನೇ ನಿನಗೆ ದೊಡ್ಡವನಾದನಲ್ಲವೇ ರತ್ನಕ್ಕ. ನಿನ್ನ ಹುಚ್ಚು ಮಾತುಗಳ ಅಗತ್ಯ ನನಗಿಲ್ಲ. ಈಗ ಅದಾವುದೂ ಬೇಕಿಲ್ಲ. ಈಗ ನೀನೇನು ನಾನು ಹೇಳಿದ ಹಾಗೆ ಕೇಳ್ತೀಯೋ ಇಲ್ಲವೊ ಅಷ್ಟೇ ಹೇಳು? '

' ಈ ಮಾತು ಹೇಳಬೇಕೂಂತಲೇ ಬಂದೆಯಾ ರಾಘಣ್ಣಾ? '

' ಹ್ಞೂ '

' ಜನದ ಮಾತಿಗೆ ಹೆದರಿ, ನಾನು ಇಲ್ಲಿಂದ ಬಿಟ್ಟು ಓಡಬೇಕೇ ? ಸುಳ್ಳಿಗೆ ಹೆದರಬೇಕೇ ? '

' ಜನದ ನಾಲಗೆ ಎಂಥ ಭಯಂಕರ ವಸ್ತು ಎನ್ನುವುದು ನಿನಗೆ ತಿಳಿಯದು ರತ್ನಕ್ಕ. ಹತ್ತು ಜನರ ಬಾಯಲ್ಲಿ ಬಂದ ಮಾತು ಸುಳ್ಳಾದರೂ ಸತ್ಯವಾಗುತ್ತದೆ. ನೀನು ಅದ್ಯಾವುದನ್ನೂ ಅರಿಯೆ ರತ್ನಕ್ಕ. ಈಗಲೂ ಯಾವುದೂ ಮಿಂಚಿ ಹೋಗಿಲ್ಲ. ಈಗಲಾದರೂ ಈ ಹುಚ್ಚು ಬಿಟ್ಟು ನಾನು ಹೇಳುವುದನ್ನು ಕೇಳು.'

—ಲೋಕದ ರೀತಿಯನ್ನು ಅರಿಯದ ರತ್ನಮ್ಮನ ಮುಗ್ಧತೆಗೆ ಕರಗುತ್ತಾ ಹೇಳಿದ ರಾಘಣ್ಣ.

' ಅನ್ನುವ ಜನ ಓಡಿ ಹೋದರೆ ಬಿಡುತ್ತಾರೆಯೇ ರಾಘಣ್ಣ. ಅವರಿಗೆ ಹೆದರಬೇಕೇ ನಾನು ?'

' ಅವಕ್ಕೆ ಹೆದರದೆ ಮತ್ತಾವುದಕ್ಕೆ ಹೆದರಬೇಕೂಂತ ಇದೀಯ.'

' ನನ್ನಲ್ಲಿಯ ಸತ್ಯಕ್ಕೆ. ದೇವರಿಗೆ ಅಂಜಿ ನಡೆಯದೆ, ಇಂಥ ಸಣ್ಣ ಮಾತಾಡುವ ಜನಕ್ಕೆ ಹೆದರಿ ಓಡಿ ಹೋದರೆ ಅನ್ನುವ ಜನಕ್ಕೆ ನಾವೇ ಅವಕಾಶ ಕೊಟ್ಟಂತಾಗುವುದಿಲ್ಲವೇ ? ಹೆದರುವವರನ್ನು ಕಂಡರೆ ಜನ ಮತ್ತಷ್ಟು ಹೆದರಿಸುತ್ತಾರೆ.'

' ಹೆದರದೆ ಇದ್ದವಳನ್ನು ಕಂಡು ಈ ಜನ ಕನಿಕರಿಸುವುದಿಲ್ಲ; ಗೌರವಿಸುವುದಿಲ್ಲ. ಏನನ್ನುತ್ತಾರೆ ಗೊತ್ತೆ ?'

' ಏನನ್ನುತ್ತಾರೆ ?'

' ಮೂರೂ ಬಿಟ್ಟವಳು ಅಂತ. ಅದೆಲ್ಲಾ ಮಾತು ಉಪಯೊಗವಿಲ್ಲ ರತ್ನಕ್ಕ. ಈಗೇನು ನಾನು ಹೇಳಿದಹಾಗೆ ಕೇಳ್ತೀಯೊ ಇಲ್ಲವೋ'

' ನೀನು ಹೇಳೊದು ಇದೇ ಆದ್ರೆ ನಾನು ಕೇಳೊಲ್ಲ ರಾಘಣ್ಣ.'

—ರಾಘಣ್ಣನ ಮಾತಿನಷ್ಟೇ ಖಡಾಖಂಡಿತವಾಗಿ ಹೇಳಿದಳು ರತ್ನಮ್ಮ.

'ನನ್ನ ಮನೆಗೆ ಬರದೆ ಹೋದರೆ ಹೋಗಲಿ. ನಿನ್ನ ತೌರುಮನೆಗಾದರೂ ಹೊರಟು ಹೋಗು.'

' ಕೆಟ್ಟ ಹೆಸರು ಹೊತ್ತುಕೊಂಡು ಅಲ್ಲಿಗೆ ಹೋಗಲೇ ರಾಘಣ್ಣ. ಅದು ನನ್ನಿಂದ ಸಾಧ್ಯವಿಲ್ಲ. ಜನ ಏನಾದರು ಅನ್ನಲಿ ಬಿಡು. ನನ್ನ ಅಂತರಾತ್ಮವೇ ನನಗೆ ಸಾಕ್ಷಿ; ನನ್ನ ಮನೆಯೇ ನನಗೆ ಆಶ್ರಯ.'

ರತ್ನಮ್ಮ ಹೇಳಿದದುನ್ನು ಕೇಳಿ ರಾಘಣ್ಣ ಮರು ಮಾತನಾಡದೆ

ಸುಮ್ಮನೆ ರತ್ನಮ್ಮನ ಮುಖವನ್ನೇ ನೋಡಿ, ಬಳಿಕ ಶುಷ್ಕವಾದ ಧ್ವನಿಯಲ್ಲಿ–

'ನನ್ನ ಮಾತಿಗೆ ನೀನು ಇಷ್ಟೇ ಬೆಲೆ ಕೊಡೋದೂಂತ ನಾನು ತಿಳಿದಿದ್ದೆ ರತ್ನಕ್ಕ. ಅದಕ್ಕೇ ನನಗೆ ಪುತ್ತೆ ಇಲ್ಲಿಗೆ ಬರುವ ಆಸೆ ಇರಲಿಲ್ಲ. ಆದರೆ ಅಮ್ಮನ ದುಃಖ ನೋಡಲಾರದೆ ಬಂದೆ. ಸರಿಯೇ. ನೀನು ಎಲ್ಲಾ ತಿಳಿದವಳು. ನಿನಗೆ ನಾನು ಹೇಳಬೇಕಾದುದೇನೂ ಇಲ್ಲ, ಹೇಗೆ ಬೇಕೋ ಹಾಗೆ ಮಾಡಿಕೊ. ನಾನು ಅಡ್ಡಿ ಬರುವುದಿಲ್ಲ, ನಿನಗೆ ಯಾರು ಹಿತೈಷಿಗಳೋ ಅವರ ಮಾತನ್ನೇ ಕೇಳು.'

—ಎಂದಷ್ಟೇ ಹೇಳಿ, ಬಂದಹಾಗೇ ಹೊರಟು ಹೋದ.

ಯಾವುದೋ ಶಕ್ತಿ ಆಡಿಸಿದಂತೆ ಅಷ್ಟು ಮಾತನಾಡಿದ ರತ್ನಮ್ಮ, ರಾಘಣ್ಣ ಹೋದ ಬಳಿಕ, ಶಕ್ತಿಹೀನಳಾಗಿ, ನಿಲ್ಲಲಾರದೆ, ಹತ್ತಿರದಲ್ಲೇ ಇದ್ದ ಗೋಡೆಗೆ ಮೈಯನ್ನು ಒರಗಿಸಿದಳು.

ಮನೆಯನ್ನು ಮುಸುಕಿದ ಮೌನದಲ್ಲಿ, ಅವಳಿಗೆ ತನ್ನ ಸುತ್ತಲೂ ನೂರಾರು ಹಿಂಸ್ರ ಪಶುಗಳು ಭೀಕರವಾಗಿ ಮೊರೆಯುತ್ತಿರುವಂತಿತ್ತು.

ತನ್ನ ಮೇಲೆ ಬಂದ ಆಪಾದನೆಯ ನೋವು ಒಂದು ಪಾಲಾದರೆ, ತನ್ನಿಂದಾಗಿ ಚಿನ್ನೋಬಯ್ಯನ ಮೇಲೆ ಬಂದ ಆಪಾದನೆಯ ನೋವು ಹತ್ತು ಪಾಲಾಗಿ ಅದನ್ನು ನೆನೆದು ಅವಳ ಹೃದಯ ಅಸಹ್ಯವೇದನೆಗೆ ಒಳಗಾಗಿತ್ತು.

ವಿವರ್ಣವಾದ ಅವಳ ಮುಖದಲ್ಲಿ ಕಪ್ಪಾಗಿ ಎದ್ದು ಕಾಣಿಸುತ್ತಿದ್ದ ಕಣ್ಣುಗಳಿಂದ, ಬುಗ್ಗೆಯಂತೆ ನೀರು ಒಂದೇ ಸಮನೆ ಉಕ್ಕಿ ಹರಿಯುತ್ತಿತ್ತು.

# ೭

ತನ್ನ ಮನೆಯ ಬಳಿ ಆಡುವುದಕ್ಕೆ ಬಂದಿದ್ದ, ನಾರಾಯಣನನ್ನು ಮನೆಗೆ ಬಿಟ್ಟು, ಹಾಗೇ ರತ್ನಮ್ಮನೊಂದಿಗೆ ಒಂದೆರಡು ಮಾತು ಆಡಬೇಕೆಂದು ಬಂದ ಚಿನ್ನೋಬಯ್ಯ, ಕಡೆದ ಪ್ರತಿಮೆಯಂತೆ ಗೋಡೆಗೆ ಒರಗಿಕೊಂಡು ಕುಳಿತಿದ್ದ ರತ್ನಮ್ಮನ ಕಂಬನಿಯ ಕರೆಗಟ್ಟಿ ಮಲಿನವಾದ ಮುಖ, ಅತ್ತತ್ತು ಕೆಂಪಗೆ ಊದಿಕೊಂಡಿದ್ದ ಕಣ್ಣುಗಳನ್ನು ಕಂಡು, ಕಾಣದೆ ಕೆಂಡವನ್ನು ತುಳಿದವನ ಹಾಗಾದ. ಎತ್ತಿಕೊಂಡಿದ್ದ ಚಿನ್ನೋಬಯ್ಯನ ತೋಳಿನಿಂದ ಧುಮುಕಿ, ತನಗೆ ಅವನು ಕೊಡಿಸಿದ ತಿಂಡಿಯ ಪೊಟ್ಟಣವನ್ನು ತಾಯಿಗೆ ತೋರಿಸಲು ನುಗ್ಗಿ ಬಂದ ಮಗನನ್ನೂ ಮಾತನಾಡಿಸದೆ,ಸುಮ್ಮನೆ ಅವನ ತಲೆಯನ್ನೊಮ್ಮೆ ನೇವರಿಸಿ, ಕಣ್ಣೀರು ಜಿನುಗುತ್ತಿದ್ದ ಕಣ್ಣುಗಳಿಂದ ಏನನ್ನೋ ನೋಡುತ್ತಾ ಕುಳಿತಂತೆಯೇ ಕುಳಿತಿದ್ದಳು ರತ್ನಮ್ಮ. ಆ ಮೌನ ಚಿನ್ನೋಬಯ್ಯನ ಕತ್ತನ್ನು ಹಿಸುಕಿ ಉಸಿರು ಕಟ್ಟಿಸಿತು. ಅದರ ಯಾತನೆಯನ್ನು ತಾಳಲಾರದೆ—

' ಇದ್ಯಾಕೆ ರತ್ನಕ್ಕ ಹಿಂಗಿದೀಯ ? '

—ಎಂದು ತಾನೇ ಮೌನವನ್ನು ಮುರಿದು ಕೇಳಿದ. ಅವಳ ಮೌನದಿಂದ ಆರ್ತತೆಯ ಜೀವಂತ ಚಿತ್ರದಂತಿದ್ದ ನೋಟದಿಂದ ಅವನ ಎದೆಗಾದ ಯಾತನೆಯೆಲ್ಲವೂ ಆ ಮೂರು ಮಾತಾಗಿ ಮೂಡಿತ್ತು. ಆ ಮಾತನ್ನು ಕೇಳಿದ ಬಳಿಕ ಸುಮ್ಮನಿರಲಾಗದೆ ರತ್ನಮ್ಮ, ಎಲ್ಲೋ ಕಂಬನಿಯಾಳದಲ್ಲಿ ಅವಿತುಕೊಂಡಿದ್ದ ಧ್ವನಿಯನ್ನು ಹೊರಗೆ ಎಳೆದು ತಂದು —

' ರಾಘಣ್ಣ ಬಂದಿದ್ದ ಚಿನ್ನೋಬಣ್ಣ '

—ಎಂದಳು ಜಡವಾದ ಧ್ವನಿಯಲ್ಲಿ.

ರಾಘಣ್ಣ ಬಂದಿದ್ದನೆಂಬುದನ್ನು ಕೇಳಿ ಚಿನ್ನೋಬಯ್ಯನಿಗೆ ನೀರಿನಲ್ಲಿ ಅದ್ದಿ ತೆಗೆದಂತಾಯಿತು. ಆ ಮನೆಯ ಕಡೆ ಕಾಲಿಡುವುದಿಲ್ಲವೆಂದು ಶಪಥ ಮಾಡಿ, ಇಷ್ಟುದಿನ ಹಾಗೇ ನಡೆದುಕೊಂಡಿದ್ದ ರಾಘಣ್ಣ ಈ ದಿನ ಆಕಸ್ಮಿಕ ವಾಗಿ ಬರಲು ಕಾರಣವೇನಿರಬಹುದು, ಅವನು ಬಂದುದಕ್ಕೂ, ರತ್ನಮ್ಮನ ಇಂದಿನ ವಿಚಿತ್ರ ಸ್ಥಿತಿಗೂ ಏನು ಸಂಬಂಧ, ಇದಕ್ಕೆ ಕಾರಣವಾಗುವಂಥ ಯಾವ ಮಾತನ್ನು ಅವನು ಹೇಳಿರಬಹುದು? ತನ್ನ ಹೃದಯದೊಳಗಿದ್ದ ಮಾತು ಅವನಿಗೇನಾದರೂ ತಿಳಿಯಿತೇ, ಅದನ್ನೇನಾದರೂ ಅವನು ರತ್ನಮ್ಮ ನಿಗೆ ಹೇಳಿರಬಹುದೇ—ಹೀಗೆ ಸಾವಿರ ಪ್ರಶ್ನೆಗಳನ್ನು, ಒಂದುಗಳಿಗೆಯೊಳ ಗಾಗಿ ಚಿಂತಿಸಿತು ಅವನ ಮನಸ್ಸು. ಅವನಿಗರಿವಾಗದಂತೆಯೇ ಅವನ ಎದೆಯಲ್ಲಿ ಭೀತಿತುಂಬಿತು. ಆ ಭೀತಿ, ಚಿಂತೆಗಳಲ್ಲಿ ತುಯ್ದಾಡುತ್ತಾ ಅಷ್ಟು ಹೊತ್ತು ಸುಮ್ಮನಿದ್ದು, ಬಳಿಕ–

'ಯಾಕಂತೆ?'

—ಎಂದು ಕೇಳಿದ, ಅಷ್ಟು ಕೇಳುವುದೇ ತುಂಬಾ ಶ್ರಮವಾದಂತೆ.

ತನ್ನ ಮಾತಿನಿಂದ ಚಿನ್ನೋಬಯ್ಯನ ಮುಖದಲ್ಲಿ ಮೂಡಿದ ಬಗೆ ಬಗೆಯ ಭಾವಗಳ ನೆರಳು—ಬೆಳಕನ್ನು ನೋಡುತ್ತಿದ್ದ ರತ್ನಮ್ಮ ಸುಮ್ಮನೆ ಪುಟಿಯುತ್ತಿದ್ದ ಮನಸ್ಸನ್ನು ಸ್ತಿಮಿತಕ್ಕೆ ತಂದುಕೊಂಡು—

'ಚಿನ್ನೋಬಣ್ಣಾ, ನಿನ್ನೊಂದು ಪ್ರಶ್ನೆ ಕೇಳ್ತೀನಿ. ಉತ್ತರ ಹೇಳ್ತೀಯಾ?'

—ಎಂದು ಕೇಳಿದಳು.

'ಹೂ. ಕೇಳು ರತ್ನಕ್ಕ....'

'ಮನಸ್ಸಿನಲ್ಲಿ ಒಂದಿಟ್ಟುಕೊಂಡು, ಹೊರಗೆ ಒಂದು ಮಾತು ಹೇಳಬಾರದು.'

'ಊಹೂ,'

'ಈ ಮಗುವಿನಾಣೆಯಾಗಿಯೂ.'

ರತ್ನಮ್ಮ ಹೇಳಿದುದನ್ನು ಕೇಳಿ ಚಿನ್ನೋಬಯ್ಯನಿಗೆ, ಹಾಯಾಗಿ ಉಸಿರಾಡುತ್ತಿದ್ದವನಿಗೆ ಇದ್ದಕ್ಕಿದ್ದ ಹಾಗೇ ಕತ್ತು ಹಿಸುಕಿದಂತಾಯಿತು. ಆ ಮಾತಿಗೆ ಕೂಡಲೇ ಉತ್ತರ ಕೊಡಲಾಗದೆ ಅಳಿದು–ಸುರಿಯತೊಡಗಿದ.

ಅವನ ಮುಖದಿಂದ ಬೆವರು ಬಸಿಯಲಾರಂಭಿಸಿ, ಗಂಟಲು ಒಣಗಿಕೊಂಡು ಬಂದಿತು. ತನ್ನನ್ನು ಆ ಪ್ರಶ್ನೆ ಕೇಳಿದ ಮುಖವನ್ನು ನೋಡಲಾಗದೆ, ಕಣ್ಣು ಎತ್ತೆತ್ತಲೋ ಅಲೆಯತೊಡಗಿತು. ನಾಲಗೆಯ ತೇವವಾರಿ, ರತ್ನಮ್ಮನ ಪ್ರಶ್ನೆಗೆ ಉತ್ತರ ಹೊರಡಲಿಲ್ಲ. ಅಷ್ಟು ಹೊತ್ತಾದರೂ ತನ್ನ ಪ್ರಶ್ನೆಗೆ ಉತ್ತರ ಬರದಿದ್ದುದನ್ನು ಕಂಡು ರತ್ನಮ್ಮ ತಾನೇ ಮತ್ತೆ ಕೇಳಿದಳು—

' ಏಕೆ ಚಿನ್ನೋಬಣ್ಣ, ನನ್ನ ಪ್ರಶ್ನೆಗೆ ಉತ್ತರ ಕೋಡೋ ಮನಸ್ಸಿಲ್ವೆ ? ಇಷ್ಟ ಇಲ್ಲದಿದ್ದರೆ ಹಾಗಂತಲಾದರೂ ಹೇಳಿಬಿಡು. ನನ್ನ ಪ್ರಾಣ ಹೋದರೂ ಕೇಳುವುದಿಲ್ಲ.'

ರತ್ನಮ್ಮ ಆ ಮಾತನಾಡಿದ ರೀತಿಯನ್ನರಿತು ಚಿನ್ನೋಬಯ್ಯನಿಗೆ ಗಾಬರಿಯಾಯಿತು. ಅವಳು ಆ ಮಾತಾಡಿದ ಮೇಲೂ ಸುಮ್ಮನಿರಲಾಗದೆ, ಹೊಯ್ದಾಡುತ್ತಿದ್ದ ಮನಸ್ಸನ್ನು ಒಂದು ನೆಲೆಗೆ ತಂದುಕೊಂಡು, ದೇವರ ಮೇಲೆ ಭಾರ ಹಾಕಿ ಹೇಳಿದ—

' ಅದೇನು ಬೇಕು ಕೇಳು ರತ್ನಕ್ಕ?'

' ನಾರಾಯಣನಾಣೆಗೂ ನಿನ್ನ ಮನಸ್ಸಿನಲ್ಲಿರೋದನ್ನ ಹೇಳ್ತೀಯಾ? '

' ಹೂ. '

' ನಿನಗೆ ನಾನು ಏನಾಗಬೇಕು ಚಿನ್ನೋಬಣ್ಣ ? '

ರತ್ನಮ್ಮನ ಪ್ರಶ್ನೆ ತೋಫಿನಿಂದ ಹಾರಿದ ಗುಂಡಿನಂತೆ ಚಿನ್ನೋಬಯ್ಯನ ಗುಂಡಿಗೆಯನ್ನು ಭೇದಿಸಿತು, ಆ ಪ್ರಶ್ನೆಯನ್ನು ಕೇಳಿದ ರತ್ನಮ್ಮ ನನ್ನು ನುಂಗುವವನಂತೆ ನೋಡಿದ. ಜೀವನದಲ್ಲಿ ಚಿನ್ನೋಬಯ್ಯ ಎಂಥೆಂಥ ಪ್ರಸಂಗಗಳನ್ನೋ ಎದುರಿಸಿದ್ದ. ಆದರೆ ಇಂದಿನಂತಹ ಪ್ರಸಂಗ ಎಂದೂ ಬಂದಿರಲಿಲ್ಲ. ಆ ಪ್ರಶ್ನೆಗೆ ನೇರವಾದ ಉತ್ತರ ಕೊಡಲು ಮನಸ್ಸಾಗದೆ 'ಸುಳ್ಳಾಡಿ ಜಾರಿಕೊ' ಎಂದು ಅವನೊಳಗಿನ ಧ್ವನಿ ಹೇಳಿತು. ಆದರೆ ತನ್ನ ತ್ತಲೇ ನೋಡುತ್ತಿದ್ದ ರತ್ನಮ್ಮನ ಕಣ್ಣುಗಳನ್ನು ನೋಡಿದ ಮೇಲೆ ಸುಳ್ಳಾಡಲು ಸಾಧ್ಯವಾಗಲಿಲ್ಲ. ಒಣಗಿದ ತುಟಿಗಳನ್ನು ನಾಲಗೆಯ ತುದಿಯಿಂದ ಒದ್ದೆ ಮಾಡಿಕೊಳ್ಳುತ್ತಾ—

' ಹೇಳಲೇ....ಹೇಳಲೇ ಬೇಕೇ....ರತ್ನಕ್ಕ....'

—ಎಂದ.

'ಹೂ. ನಿನ್ನ ಪಾಲಿಗೆ ನಾನು ಬದುಕಿರಬೇಕು ಎಂದರೆ ಹೇಳಲೇ ಬೇಕು.'

'ಏನಾರ ಮಾಡಿಕೊ. ನನ್ನ ಎಂಥೋನು ಅಂತ ಬೇಕಾದರೂ ಅನ್ನು. ಇದ್ದ ಮಾತು ಹೇಳೇ ಬಿಡ್ತೀನಿ. ಈ ಗಳಿಗೆವರೆಗೂ ನನ್ನ ಮನಸ್ಸಿನಲ್ಲಿದ್ದುದು ನೀನು ನನ್ನೋಳಾಗಬೇಕೂಂತಲೇ. ಎಷ್ಟೋ ದಿನ ನಿನಗೆ ಆ ಮಾತು ಹೇಳಬೇಕೂಂತ ಅಂದುಕೊಂಡಿದ್ದೆ ರತ್ನಕ್ಕ. ಆದರೆ ಯಾಕೋ ಧೈರ್ಯ ಬರಲಿಲ್ಲ. ನನ್ನ ಮನಸ್ಸಿನಲ್ಲಿದ್ದದ್ದು ಅಷ್ಟೆ. ಈಗ ಗೊತ್ತಾಯಿತಲ್ಲ. ಇನ್ನು ಬೇಕಾದ್ದು ಮಾಡು.'

—ಆದದ್ದಾಗಲಿ ಎಂದು ಎದೆಯನ್ನು ಕಲ್ಲು ಮಾಡಿಕೊಂಡು ಹೇಳಿದ— ತಾನು ಆ ಮಾತಾಡಿದ ಕೂಡಲೇ ರತ್ನಮ್ಮ ಕೆರಳಿದ ಹುಲಿಯಂತೆ ತನ್ನ ಮೇಲೆ ಬೀಳಬಹುದು, ತನ್ನನ್ನು ಮನೆಯಿಂದ ಹೊರಗಟ್ಟಬಹದು ಎಂದು ನಿರೀಕ್ಷಿಸಿ; ಎಲ್ಲಕ್ಕೂ ಸಿದ್ಧವಾಗಿ.

ಆದರೆ ರತ್ನಮ್ಮ ಅವನ ನಿರೀಕ್ಷೆಯಂತೆ ನಡೆದುಕೊಳ್ಳಲೇ ಇಲ್ಲ. ಆ ಮಾತು ಕೇಳಿ, ತಲೆಯ ಮೇಲೆ ಬೆಟ್ಟ ಕವಿದು ಬಿದ್ದವಳಂತೆ ತಲೆ ತಗ್ಗಿಸಿ, ಸ್ವಲ್ಪ ಹೊತ್ತು ಹಾಗೇ ಸುಮ್ಮನೆ ಕುಳಿತಿದ್ದು, ಬಳಿಕ ತಲೆ ತಗ್ಗಿಸಿಯೇ ಹೇಳಿದಳು—

'ನಿನ್ನ ಮನಸ್ಸಿನಲ್ಲಿರೋ ಭಾವನೆ ಬದಲಾಯಿಸೋಕೆ ಸಾಧ್ಯವೇ ಇಲ್ಲವೇ ಚೆನ್ನೋಬಣ್ಣ? ನನ್ನ ಹೆಂಗಸೂಂತ ನೋಡಬೇಡ. ಅವರು ಹೋದ ದಿನಾನೇ ನನ್ನ ಹೆಣ್ಣುತನ ಸುಟ್ಟು ಹೋಯ್ತು. ಈಗುಳಿದಿರೋದೆಲ್ಲಾ ಆ ಆಕಾರದ ಬೊಂಬೆ. ನಾನೂ ನಿನ್ನ ನಂಬಿದೆ, ಪ್ರೀತಿಸಿದೆ. ಆದರೆ ನೀನು ಅಂದುಕೊಂಡ ರೀತಿಯಲ್ಲಲ್ಲ. ಅವರ ಬೆನ್ನಲ್ಲಿ ಬಿದ್ದ ಅಣ್ಣ ಎಂದು. ಆ ಪ್ರೀತಿ ನನ್ನಲ್ಲಿ ಎಷ್ಟಿತ್ತೋ ಅಷ್ಟನ್ನೂ ನಿನಗೆ ಧಾರೆ ಎರೆದೆ. ನಾನು ಯಾವ ಸುಖ ಬೇಕೂಂತಲೂ ಬದುಕಿಲ್ಲ ಚೆನ್ನೋಬಣ್ಣ. ಅವರ ಹೆಸರು ಹೇಳಲು ಹುಟ್ಟಿರೋ ಈ ಕೂಸನ್ನು ಸಾಕೋದಕ್ಕೆ,ಬೆಳೆಸೋದಕ್ಕೆ ಮಾತ್ರ ಬದುಕಿದೀನಿ. ಒಂಟಿ ಹೆಂಗಸು, ನನ್ನ ಕೈಲಿ ಆದಾಗೊಲ್ಲ ಅಂತ ನಿನ್ನಂಥವರ ಸಹಾಯ ಕೇಳಿದೆ. ರಾಘಣ್ಣನನ್ನು ನಂಬಿದೆ. ಅವನಿಗೆ ನನ್ನ ವಿಶ್ವಾಸಕ್ಕಿಂತ ತನ್ನ ಅಭಿಮಾನಾನೇ ಹೆಚ್ಚಾಗಿ ಬಿಟ್ಟುಹೋದ. ಆಗ ನನಗೆ, ಈ ಹಸುಳೇಗೆ

ಯಾರು ದಿಕ್ಕು ಅಂತ ಕಂಗೆಟ್ಟಿರೋ ಹೊತ್ತಿನಲ್ಲಿ ನನ್ನ ಪಾಲಿಗೆ ದೇವರ ಹಾಗೆ ನೀನು ಬಂದೆ. ನೀನೂ ಇನ್ನೊಬ್ಬ ಅಣ್ಣ ಎಂದು ನಂಬಿದೆ. ಈಗ ನೀನೂ ನನ್ನ ನಿನ್ನ ಬಯಕೆಗಾಗಿ ಬಿಟ್ಟುಹೋಗ್ತೀಯಾ ಚಿನ್ನೋಬಣ್ಣ, ? ಹುಟ್ಟಿದಾಗಲಂತೂ ಅಣ್ಣನನ್ನು ಪಡೆದುಕೊಂಡು ಬರಲಿಲ್ಲ ನಾನು. ತಾಯಿ ಕೊಡದ ಅಣ್ಣನನ್ನು ದೇವರೇ ತಂದುಕೊಟ್ಟ ಅಂತಿದ್ದೆ. ಆ ಮಾತು ಸುಳ್ಳು ಮಾಡ್ತಿಯಾ ? ಅಣ್ಣಂದಿರನ್ನು ಕಾಣೋ ಪುಣ್ಯ ಇಲ್ಲದ ನಿರ್ಭಾಗ್ಯೆ ನೀನು ಅಂತ ಹೇಳಿ ಹೋಗ್ತೀಯಾ ಚಿನ್ನೋಬಣ್ಣ. ನನ್ನ ಮೇಲೆ ಅಷ್ಟು ಕನಿಕರ ಇಲ್ಲವೇ ? ·

ಆ ಮಾತು ಹೇಳ ಹೇಳುತ್ತಾ, ಮಾತು ಮಾತಿಗೆ ಅವಳ ಧ್ವನಿಯಲ್ಲಿದ್ದ ಆರ್ತತೆ ಉತ್ಕಟವಾಗಿ, ದೈನ್ಯದ ಕಂಬನಿಗಳು ಹೊರಸೂಸಿ, ಮೈಯೆಲ್ಲಾ ಬಾಯಾಗಿ ಬೇಡಿದಳು ರತ್ನಮ್ಮ. ಆ ಮಾತುಗಳನ್ನು ಕೇಳಕೇಳುತ್ತಾ ಚಿನ್ನೋಬಯ್ಯನ ಹೃದಯವನ್ನು ಪುಟಕ್ಕಿಟ್ಟಂತಾಯಿತು. ಪಶ್ಚಾತ್ತಾಪದ ಕಂಬನಿ ಉಕ್ಕಿ ಹರಿಯಿತು.

‘ ರತ್ನಕ್ಕ....ನನ್ನ ಕ್ಷಮಿಸು....ನಿನ್ನ ಕೈಲಿ ಅಣ್ಣ ಅಂತ ಕರೆಸಿಕೊಳ್ಳೋ ಯೋಗ್ತೆ ನನಗಿಲ್ಲ. ಜೋಡು ಬಿಡೋ ಹತ್ತಿರ ಇರಬೇಕಾದೋನು ನಾನು. ಮನಸ್ಸಿನಲ್ಲಿ ಕೆಟ್ಟ ಆಸೆ ಮಡಗಿಕೊಂಡು ನಿನ್ನ ಜೀವಕ್ಕೆ ಭಾಳ ಹಿಂಸೆ ಕೊಟ್ಟೆ. ಇವತ್ನಿಂದ ಆ ಬುದ್ಧಿ ಬಿಟ್ಬಿಟ್ಟೆ ರತ್ನಕ್ಕ’

—ಎಂದು ರತ್ನಮ್ಮನ ಕಾಲುಹಿಡಿದು ನಮಸ್ಕರಿಸಿ ಅಳುತ್ತಾ, ಕಣ್ಣೀರಿನಿಂದ ಆಕೆಯ ಕಾಲನ್ನು ತೊಳೆಯುತ್ತಾ ಹೇಳಿದ.

ಆ ಮಾತಿಗೆ ರತ್ನಕ್ಕ ಕೂಡಲೇ ಏನೋ ಹೇಳಬಂದು—ಆಕೆಯ ಕಣ್ಣುಗಳೂ ಕಣ್ಣೀರಿನ ಕಾರಂಜಿಯಾಗಿದ್ದವು. ಯಾವುದೋ ಅನಿರ್ವಚನೀಯವಾದ ಭಾವನೆಯ ಸೆಳತಕ್ಕೆ ಸಿಕ್ಕಿದ ರತ್ನಮ್ಮ ಸ್ವಲ್ಪ ಹೊತ್ತಿನ ಬಳಿಕ ತನ್ನ ಬುದ್ಧಿಯನ್ನು ಹತೋಟಿಗೆ ತಂದುಕೊಂಡು—

‘ ಇನ್ನು ನನ್ನ ಬೇಕಾದೋರು ಬೇಕಾದ್ದು ಅನ್ನಲಿ. ನನಗೆ ಹೆದರಿಕೆ ಇಲ್ಲ ಅಣ್ಣ.’

—ಎಂದಳು.

ಆ ಮಾತು ಕೇಳಿ ಚಿನ್ನೋಬಯ್ಯನಿಗೆ ತಟಕ್ಕನೆ ಏನೋ ಹೊಳೆದು, ಕೇಳಿದ—

‘ರಾಘಣ್ಣ ಹೀಗೆಲ್ಲಾ ಹೇಳಿದ್ನಾ? ಈ ಮಾತು ಹೇಳೋಕೇನಾ ಅವನು ಇಲ್ಲಿಗೆ ಬಂದದ್ದು.’

‘ರಾಘಣ್ಣ ಈ ಮಾತು ಅನ್ನಲಿಕ್ಕಲ್ಲ ಬಂದದ್ದು, ಊರಿನ ಜನ ಆಡಿ ಕೊಂಡ ಮಾತು ಕೇಳಿ, ಅದಕ್ಕಾಗಿ ನಾನು ಇಲ್ಲಿರಕೂಡದು ಎಂದು ಹೇಳಲು ಬಂದಿದ್ದ.’

‘ಪೋಲಿ ಜನದ ಮಾತಿಗೆ ಹೆದರಿಕೊಂಡು ನೀನು ಮನೆ ಬಿಟ್ಟು ಹೋಗಬೇಕಂತಾ?’

—ತಟಕ್ಕನೆ ಸಿಡಿದು ಕೇಳಿದ ಚಿನ್ನೋಬಯ್ಯ.

‘ಹೂ.’

‘ಅದಾಗೋಕಿಲ್ಲ ರತ್ನಕ್ಕ. ನೀನೆಲ್ಲೂ ಹೋಗಬ್ಯಾಡ, ಇಲ್ಲೇ ಇರು. ಗಂಡಸು ಅಂತ ಹುಟ್ಟಿದವನು, ಇವತ್ತಿನಿಂದ ನಿನ್ನನ್ನು ಅಂದು ಬದುಕಿದರೆ, ನಾನು ನಮ್ಮಪ್ಪನಿಗೆ ಗಂಡುಮಗನಾಗಿ ಹುಟ್ಟಿದುದೇ ಸುಳ್ಳು. ಅದ್ಯಾರಂತೆ ಆ ಮಾತಾಡಿದ್ದು, ಹೇಳು. ಅವನು ಎಂಥೋನಾದರೂ ಅವನ ತಲೆ ಉಳಿ ಸೋಕಿಲ್ಲ.’

—ಶಪಥ ಮಾಡುತ್ತಾ ಹೇಳಿದ ಚಿನ್ನೋಬಯ್ಯ.

‘ನಾನು ಊರು ಬಿಟ್ಟು ಹೋಗುವುದಿಲ್ಲ ಚಿನ್ನೋಬಣ್ಣ, ನೀನು ಪುಂಡಾಟಕ್ಕೂ ಹೋಗಬೇಡ. ನಮ್ಮ ಸತ್ಯ ನಮ್ಮನ್ನು ಕಾಪಾಡುತ್ತದೆ. ನಾನು ಕನಸು ಮನಸಿನಲ್ಲೂ ಯಾರಿಗೂ ಕೆಡಕು ಬಯಸಲಿಲ್ಲ. ಆದ್ದ ರಿಂದ ದೇವರು ನನಗೂ ಕೆಡಕು ಮಾಡುವುದಿಲ್ಲ, ಅದನ್ನು ನಂಬಿಕೊಂಡು ಇರು ಚಿನ್ನೋಬಣ್ಣ. ಆಡುವ ಜನ ನಾಲ್ಕುದಿನ ಆಡಿ ಬಳಿಕ ತಾವೇ ಸುಮ್ಮನಾಗುತ್ತಾರೆ.’

ರತ್ನಕ್ಕ ಹೇಳಿದ ಮಾತುಗಳನ್ನು ಕೇಳಕೇಳುತ್ತಾ ಚಿನ್ನೋಬಯ್ಯನಿಗೆ ತನ್ನ ಕಣ್ಣು ಕಿವಿಗಳನ್ನು ನಂಬುವುದು ಅಸಾಧ್ಯವಾಯಿತು. ಹಾಗೆಯೇ ಕೆಟ್ಟಕಣ್ಣು, ಕೆಟ್ಟನಾಲಿಗೆಗಳಿಂದ ತುಂಬಿದ ಹಳ್ಳಿಯ ಜೀವನದಲ್ಲಿ ಈ ಹೂವಿ ನಂಥ ಹೃದಯ ಬಾಳುವುದು ಸಾಧ್ಯವೇ ಎನಿಸಿ, ಬೆಟ್ಟದಂಥ ಚಿಂತೆ ಅವನ

ತಲೆಯನ್ನು ಏರಿ ಕುಳಿತಿತು. ತನ್ನ ಸುತ್ತಲ ಜನವನ್ನು ನೆನಸಿಕೊಂಡ. ಅವರನ್ನು ನೆನದುಕೊಂಡಾಗ, ಅವನಿಗೆ ರತ್ನಮ್ಮ ನೂರು ತೋಳಗಳ ನಡುವೆ ಒಂಟಿಯಾಗಿ ನಿಂತ ಕುರಿಮರಿಯಂತೆ ಕಾಣಿಸಿದಳು. ಆ ಭಾನೆಯೊಂದಿಗೆ ಏನಾದರಾಗಲಿ, ಹಳ್ಳಿಯ ಜನದ ಹೊಲಸು ಕುಡಿಯ ಬೆಂಕಿ, ಆ ಬಾಳನ್ನು ಸುಡದಂತೆ ಕಾಪಾಡಬೇಕು ಎಂಬ ನಿಶ್ಚಯವೂ ಅವನ ಮನದಲ್ಲಿ ಮೂಡಿತು.

ಹೇಗೆ....ಹೇಗೆ....ಹೇಗೆ ಕಾಪಾಡುವುದು ಎಂದು ಚಿಂತಿಸಿದ

ಕತ್ತಿ ದೊಣ್ಣೆಗಳನ್ನಾಗಿದ್ದರೆ, ಕತ್ತಿ ದೊಣ್ಣೆಗಳಿಂದ ಎದುರಿಸಬಹುದಾಗಿತ್ತು; ಜಗಳಕ್ಕೆ ಬಂದರೆ ತೋಳಿಗೆ ತೋಳುಕೊಟ್ಟು ಜಗಳವಾಡಬಹುದಾಗಿತ್ತು ; ಇಂಥವರೇ ಎಂದು ತಿಳಿದರೆ ಪ್ರಾಣಕೊಟ್ಟಾದರೂ ಹೊಲಸು ನುಡಿದವರನ್ನು ಸುಮ್ಮನಾಗಿಸಬಹುದಿತ್ತು. ಆದರೆ ಎಲ್ಲಿ ಹುಟ್ಟಿತು ಹೇಗೆ ಬೆಳೆಯಿತು ಎಂದು ಸುಳಿವು ಕೂಡಾ ಕೊಡದೆ, ಹೇಗೋ ಹಬ್ಬಿ ಹೊಗೆಯಂತೆ ಹರಡುವ ಪಿಸುಮಾತಿನ ವಿಷವಾಯುವನ್ನು ಎದುರಿಸುವುದು ಹೇಗೆ?

ಆ ಹೊತ್ತಿನಲ್ಲಿ ಅವನ ಮನಸ್ಸಿಗೆ ತೋಚಿದುದು ಒಂದೇ ದಾರಿ.

ರತ್ನಮ್ಮನ ಮೇಲೆ ಈ ಅಪಾದನೆಯ ಗಾಳಿ ಬೀಸಲು ಕಾರಣವಾದದ್ದು ತಾನು ರತ್ನಮ್ಮನ ಮನೆಯತ್ತ ವಿಶೇಷವಾಗಿ ಓಡಾಡಿದುದರಿಂದ. ಒಂದು ವೇಳೆ ತಾನು ರತ್ನಮ್ಮನ ಮನೆಯ ಕಡೆ ಹೋಗುವುದನ್ನೇ ಬಿಟ್ಟುಬಿಟ್ಟರೆ, ಈ ಮಾತು ಹುಟ್ಟಿದ ಹಾಗೇ ಸಾಯಬಹುದೇನೋ ಎಂದು ತೋಚಿ, ಆ ಮಾತನ್ನೇ ಹೇಳಿದ.

ಚಿನ್ನೋಬಯ್ಯ ಹೇಳಿದುದನ್ನು ರತ್ನಮ್ಮ ಸಾವಧಾನವಾಗಿ ಕೇಳಿ ಕಡೆಗೆ ನಿರ್ಧಾರದ ಧ್ವನಿಯಲ್ಲಿ ಹೇಳಿದಳು :

‘ಊಹೂ, ಹಾಗಾಗೋದಿಲ್ಲ.’

‘ಏಕೆ ?’

—ರತ್ನಮ್ಮನ ಮಾತು ಅರ್ಥವಾಗದವನಂತೆ ಕೇಳಿದ ಚಿನ್ನೋಬಯ್ಯ.

‘ಹಾಗೆ ಮಾಡಿದರೆ ದೇವರು ಒಪ್ತಾನಾ ಚಿನ್ನೋಬಣ್ಣ. ಜನ ಆಡಿದ್ದು ನಿಜವಾಗಿದ್ರೆ, ಅವರ ಕಣ್ಣಲ್ಲಾದರೂ ಮರ್ಯಾದೆ ಉಳೀಲಿ, ಬರಬೇಡ ಅನ್ತಿದ್ದೆ. ಆದರೆ ಅವರ ಸುಳ್ಳುಮಾತಿಗೆ ಹೆದರಿ, ನಿನಗೆ ನನ್ನ ಮನೆ ಹತ್ತಿರ ಬರಬೇಡ ಅಂತ ಹೇಳಲೇ ? ಯಾವ ದೇವರು ಒಪ್ಪೋ ಮಾತು ಅದು

ನಮ್ಮ ಸತ್ಯ, ನಮ್ಮ ಪಾಲಿನ ದೇವರಾಗಿ ನಮ್ಮನ್ನು ಕಾಪಾಡುತ್ತದೆ ಚಿನ್ನೋ ಬಣ್ಣ. ಅನ್ನೋ ಜನ ಆ ದೇವರಿಗಿಂತಲೂ ದೊಡ್ಡವರೇ ? ಅದ್ಯಾವುದನ್ನೂ ನೀನು ಮನಸ್ಸಿಗೆ ಹಚ್ಚಿಕೊಳ್ಳಬೇಡ. ನನ್ನ ಮನೆಗೆ ಬರೋದನ್ನೂ ನಿಲ್ಲಿಸ ಬೇಡ. ಎಂದಿನ ಹಾಗೇ ಬಂದು ಹೋಗ್ತಾ ಇರು. ಇವತ್ತಲ್ಲ ನಾಳೆ, ಜನ ತಮ್ಮ ತಪ್ಪು ತಿಳಿದುಕೊಂಡು ತಾವೇ ಸುಮ್ಮನಾಗ್ತಾರೆ.

—ಎಂದಳು ರತ್ನಮ್ಮ.

ವ್ಯವಹಾರ ಜ್ಞಾನವಿಲ್ಲದೆ, ಸುತ್ತಲ ಜನದ ಹೃದಯದ ಕರಾಳತೆಯ ನೈಜತೆಯನ್ನರಿಯದೆ, ಮುಗ್ಧ ಶಿಶುವಿನಂತಾಡಿದ ರತ್ನಮ್ಮನ ಮಾತುಗಳನ್ನು ಕೇಳಿ ಚಿನ್ನೋಬಯ್ಯನಿಗೆ ಅಯ್ಯೋ ಎನ್ನಿಸಿತು. ತನ್ನ ವ್ಯವಹಾರ ಜ್ಞಾನದ ತರ್ಕದಿಂದ ಆಕೆಯ ನಂಬಿಕೆಯನ್ನು ಸೋಲಿಸಲು ಯತ್ನಿಸಿದ.

‘ ನಿಜ, ಚಿನ್ನೋಬಣ್ಣ, ನೀನು ಹೇಳೋದು ನಿಜ. ನನಗೆ ವ್ಯವ ಹಾರ ಜ್ಞಾನ ಗೊತ್ತಿಲ್ಲ. ಆದರೆ ವ್ಯವಹಾರ ಜ್ಞಾನ ದೇವರಿಗಿಂತಲೂ ದೊಡ್ಡದೇ ? ಅಂತೂ ದೇವರನ್ನು ನಂಬಿದ್ದೋರಿಗೆ ಇದರ ಭಯ ಏಕೆ ? ಇನ್ನೊಂದು ಸಲ ಆ ಮಾತೇ ಎತ್ತಬೇಡ. ’

—ಎಂದಳು ಕಟ್ಟಪ್ಪಣೆ ಮಾಡುವ ಧ್ವನಿಯಲ್ಲಿ.

ಆ ಮಾತಿಗೆ ಎದಿರಾಡಲಾಗದೆ ಚಿನ್ನೋಬಯ್ಯ ಸುಮ್ಮನಾದ.

‘ ದೇವರಿದ್ದಾನೋ ಇಲ್ಲೋ ನಂಗೆ ಗೊತ್ತಿಲ್ಲ ರತ್ನಕ್ಕ. ಯಾವ ದೇವರನ್ನೂ ನಾನು ನೋಡಿಲ್ಲ. ನಿನ್ನಂಗೆ ಮಾತಾಡೋ ಮನುಷ್ಯರನ್ನು ನಾನು ನೋಡಿಲ್ಲ. ಅದಕ್ಕೇ ಇವತ್ತಿನಿಂದ ನೀನೇ ನನ್ನ ಪಾಲಿನ ದೇವರು. ನನ್ನ ಯಾರೇನಾದ್ರೂ ಅನ್ನಲಿ. ನನ್ನ ದೇವರನ್ನ ಯಾರಾದರೂ ಅಂದರೆ, ಅವರನ್ನು ನಾನು ಉಳಿಸೋಕಿಲ್ಲ ’

—ಎಂದ ಶಪಥ ಮಾಡುವ ಧ್ವನಿಯಲ್ಲಿ. ಅವನ ಕಣ್ಣನ್ನು ತುಂಬಿ ತುಳುಕಿದ ಕಣ್ಣೀರಿನ ಹನಿಯೊಂದು ಅವನ ಮಾತಿಗೆ ಸಾಕ್ಷಿಯಾಯಿತು.

# ೮

'ವ್ಯವಹಾರ ಜ್ಞಾನ ದೇವರಿಗಿಂತಲೂ ದೊಡ್ಡದೇ'

—ಎಂದು ರತ್ನಮ್ಮ ಚೆನ್ನೋಬಯ್ಯನನ್ನು ಪ್ರಶ್ನೆ ಕೇಳಿದ್ದಳು, ದೇವರಿಗಿಂತಲೂ ಅದು ದೊಡ್ಡದಲ್ಲ ಎಂಬ ನಂಬಿಕೆಯಿಂದ.

ಆದರೆ, ಸ್ವಾರ್ಥವೇ ತುಂಬಿ ತುಳುಕುವ ಜಗತ್ತಿನಲ್ಲಿ ವ್ಯವಹಾರ ಜ್ಞಾನವೇ ದೇವರಾಗಿರುವುದನ್ನು ತನ್ನ ನಂಬಿಕೆಯಿಂದ ಕುರುಡಾದ ರತ್ನಮ್ಮನ ಕಣ್ಣು ಕಾಣಲಿಲ್ಲ. ವ್ಯವಹಾರದ ಹೆಸರಿನಲ್ಲಿ ಸ್ವಾರ್ಥವನ್ನೇ ದೇವತೆಯನ್ನಾಗಿ ಮಾಡಿಕೊಂಡ ಸಮಾಜ, ಅವಳ ದೇವರನ್ನು ಉಳಿಯಲು ಬಿಡಲಿಲ್ಲ. ಅವರ ವಿರುದ್ಧ ತನ್ನ ಪಿಸುಮಾತಿನ ಧಾಳಿಯನ್ನು ನಡೆಸಲಾರಂಭಿಸಿತು.

ಹತ್ತು ಕಡೆಯಿಂದಲೂ ಎಡೆಬಿಡದೆ ನಡೆದ ಆ ಗಾಳಿಗೆ ಸಿಕ್ಕಿ ಅವಳ ನಂಬಿಕೆ ಹೊಯ್ದಾಡತೊಡಗಿತು. ಸುತ್ತಮುತ್ತ ತನ್ನ ಕಿವಿಯ ಮೇಲೆ ಬೀಳುತ್ತಿದ್ದ ಮಾತುಗಳು, ಆಗಾಗ ತನ್ನ ಮೇಲೆ ಹಾಯುತ್ತಿದ್ದ ವಿಚಿತ್ರ ನೋಟಗಳು, ತುಟಿಯ ಮೇಲಿನ ಅಣಕ, ತಾತ್ಸಾರದ ಭಾವ ಅವಳ ಹೃದಯದ ಮೇಲೆ ದಿನದಿನವೂ ಧಾಳಿ ನಡೆಸಿದವು.

ಹೀಗಾಗಬಹುದು, ತನ್ನ ಬಾಳಿನಲ್ಲಿ ಇಂಥ ಪ್ರಸಂಗ ಎಂದಾದರೂ ಬರಬಹುದು ಎಂದು ರತ್ನಮ್ಮ ಎಂದೂ ಊಹಿಸಿರಲಿಲ್ಲ. ತನ್ನ ಹೃದಯದ ಒಳ್ಳೆಯತನದ ಆಧಾರದ ಮೇಲೆ, ತನ್ನ ಸುತ್ತಲಿದ್ದ ಜನರೆಲ್ಲರೂ ತನ್ನ ಹಾಗೇ, ಯಾರಿಗೂ ಕೆಡಕು ಬಗೆಯದ ತನಗೆ ಯಾರೂ ಕೆಡಕು ಬಗೆಯಲಾರರು, ಎಲ್ಲರೂ ತನಗೆ ಅಕ್ಕತಂಗಿಯರು, ಅಣ್ಣತಮ್ಮಂದಿರು ಎಂದೇ ನಂಬಿದ್ದಳು.

ಆದರೆ ಬಟ್ಟೆ ಒಗೆಯಲು ಕಾಲುವೆಗೆ ಹೋದಾಗ, ಕುಡಿಯುವ ನೀರು ತರಲು ಸಿಹಿ ನೀರಿನಭಾವಿಗೆ ಹೋದಾಗ, ಹಗಲು, ಸಂಜೆ, ಮನೆಯ ಮುಂದೆ ಕಸ ಉಡುಗಲು ಹೊರಗೆ ಬಂದಾಗ ಅವಳಿಗೆ ಕಾಣುತ್ತಿದ್ದ ಮುಖ ಗಳು, ಅವಳತ್ತ ತೋರುತ್ತಿದ್ದ ತೋರು ಬೆರಳು, ಕೇಳಿಯೂ ಕೇಳಿಸದಂತೆ ಕೇಳುವ ನಗು, ಪಿಸುಮಾತು, ಇವರೆಲ್ಲ ನಿನಗೆ ಶತ್ರುಗಳು ಎನ್ನುತ್ತಿದ್ದುವು.

ಹೀಗೇಕಾಯಿತು, ಇದ್ದಕ್ಕಿದ್ದಹಾಗೇ ಇವರೆಲ್ಲಾ ತನ್ನ ಶತ್ರುಗಳಾದ ರೇಕೆ ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಂಡಳು ರತ್ನಮ್ಮ. ಅವರಿಗೆ ಅವಳೇನೂ ಅಪರಾಧ ಮಾಡಿರಲಿಲ್ಲ, ಯಾವ ದ್ರೋಹವನ್ನೂ ಬಗೆದಿರಲಿಲ್ಲ; ತನ್ನ ಸ್ವಾರ್ಥಸಾಧನೆಗಾಗಿ ಯಾವ ವ್ಯವಹಾರದಲ್ಲೂ ತಾನು ಪ್ರವೇಶಿಸಿರಲಿಲ್ಲ.

ಆದರೂ ಹೀಗೇಕೆ ?

ರತ್ನಮ್ಮ ಜನ ಅನ್ನುವ ತಪ್ಪನ್ನು ಮಾಡಿರಲಿಲ್ಲ. ಆದರೆ ಜನ ಆ ಸತ್ಯ ವನ್ನು ಒಪ್ಪಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ.

ಸತ್ಯಕ್ಕಿಂತಲೂ ಅವರ ಸಂದೇಹಕ್ಕೇ ಹೆಚ್ಚು ಬೆಲೆಯೇ ?

ಸಂದೇಹದ ಮಬ್ಬು ಕವಿದ ಜನಕ್ಕೆ ಸತ್ಯವನ್ನು ಕಾಣುವ ಹೃದಯವೇ ಇಲ್ಲವೇ ?

ಇವರ ಸಂದೇಹಕ್ಕೆ ತನ್ನ ಬಾಳಿನ ನಂಬಿಕೆಯನ್ನು ಬಲಿಕೊಡುವುದೇ ವ್ಯವಹಾರವೇ ?

ಇದೆಂಥ ದೈತ್ಯ ವ್ಯವಹಾರ ?

ಈ ಆಸುರೀ ಶಕ್ತಿಯನ್ನು ಆರಾಧಿಸುವ ಜನಕ್ಕೆ ಬೆದರಿ, ತನ್ನಬಾಳನು. ಅವರ ಪದತಳಕ್ಕೆ ಅರ್ಪಿಸಬೇಕೇ ?

ಕೂಡದು, ಕೂಡದು ಎಂದು ಅವಳ ಹೃದಯ ಕೂಗಿ ಕೂಗಿ ಹೇಳು ತ್ತಿತ್ತು, ಆ ಭಾವನೆ ಅವಳ ಮನಸ್ಸಿನಲ್ಲಿ ಸುಳಿದಾಗ.

ಹತ್ತು ಜನ ಆಡಿದುದೇ ಸತ್ಯ. ಅವರ ಮನಸ್ಸಿಗೆ ಒಪ್ಪಿದಂತೆ ನಡೆಯು ವುದೇ ಬದುಕು ಎಂದು ಅವಳ ಮಿದುಳಿನಲ್ಲಿ ಯಾವುದೋ ಒಂದು ಕಹಿ ಧ್ವನಿ ಕೂಗುತ್ತಿತ್ತು.

ಈ ಇಬ್ಬಗೆಯ ಧ್ವನಿಗಳ, ಎರಡು ದಿಕ್ಕಿನಲ್ಲಿ ಸೆಳೆದ ಸೆಳೆತದಲ್ಲಿ ಸಿಕ್ಕಿ ರತ್ನಮ್ಮನ ಬಾಳು ಆನೆಯಕಾಲಿಗೆ ಸಿಕ್ಕ ಹಣ್ಣಿನಂತಾಯಿತು. ಗೊಂಬೆಗೆ ೨೫

ಹೂವಿನಂತಾಯಿತು.

ಯಾರ ಮುಂದಾದರೂ ಈ ದುಃಖವನ್ನು ತೋಡಿಕೊಳ್ಳಬೇಕು ಎನಿಸುತ್ತಿತ್ತು ಆಕೆಗೆ.

ಆದರೆ ತೋಡಿಕೊಳ್ಳಲು ಅವಳಿಗೆ, ಆ ಹಳ್ಳಿಯಲ್ಲಿ, ತನ್ನವರು ಎನ್ನುವವರು ಯಾರೂ ಇರಲಿಲ್ಲ.

ರಾಘಣ್ಣ ಮನೆಯತ್ತ ತುಳಿಯದಂಥ ದ್ವೇಷಿಯಾಗಿದ್ದ.

ಆಗಾಗ ಅವಳ ಮನೆಯತ್ತ ಬರುತ್ತಿದ್ದ ಹಳ್ಳಿಯ ಹೆಂಗಸರೂ ಬರುವುದನ್ನು ನಿಲ್ಲಿಸಿದ್ದರು. ಅಪರೂಪವಾಗಿ ಯಾರಾದರೂ ಬಂದರೂ 'ಭಗವಂತ, ಇವರು ಬೇಗ ಹೋಗಲಿ' ಎಂದು ಆಕೆಯೇ ಬಯಸುವಂತೆ ಮಾಡುತ್ತಿತ್ತು, ಹಾಗೆ ಬಂದವರು ರತ್ನಮ್ಮನನ್ನು ನೋಡುತ್ತಿದ್ದ ನೋಟದ ರೀತಿ.

ಚಿನ್ನೋಬಯ್ಯ ಮಾತ್ರ ಆಗಾಗ ಬರುತ್ತಿದ್ದ. ಅವನಲ್ಲಿ ರತ್ನಮ್ಮ ತನ್ನ ದುಃಖವನ್ನು ತೋಡಿಕೊಳ್ಳಬಹುದಾಗಿತ್ತು. ಆದರೆ ಹೇಳಿಕೊಳ್ಳುವ ಧೈರ್ಯವಿರಲಿಲ್ಲ. ಹಳ್ಳಿಗರ ಪಿಸುಣು ನುಡಿಗಳಿಂದ ಅವನ ಎದೆಯಲ್ಲಿ ಹೊತ್ತಿ ಉರಿಯುತ್ತಿದ್ದ ಕ್ರೋಧದ ಜ್ವಾಲಾಮುಖಿ ರತ್ನಮ್ಮನ ಭಯದಿಂದ, ಸಂಯಮದಿಂದ ಆಸ್ಫೋಟನೆಯಾಗದಿತ್ತು. ಅವರ ಬಾಯಿಗಟ್ಟೆ ಈ ಅಡ್ಡಿಯನ್ನು ಕೊಂಚ ಸಡಲಿಸಿದರೂ ಎಂಥ ರಕ್ತತಾಂಡವವಾದೀತೊ ಎಂಬ ಭಯ, ಚಿನ್ನೋಬಯ್ಯನ ಮುಖವನ್ನು ನೋಡಿದಾಗ ರತ್ನಮ್ಮನ ಹೃದಯವನ್ನು ಹಿಂಡುತ್ತಿತ್ತು. ಹಾಗಿರುವಾಗ ತಾನೇ ತನ್ನ ದುಃಖವನ್ನು ಅವನ ಮುಂದೆ ಹೇಳಿದರೆ, ಬೇಡವೆಂದು ತಡೆಹಿಡಿದ ಅಗ್ನಿವರ್ಷಕ್ಕೆ ತಾನೇ ಅಕ್ಷತೆಕೊಟ್ಟು ಕರೆದಂತಾಗದೇ ಎಂದು ಹೆದರಿ, ಆದಷ್ಟು ಮಟ್ಟಿಗೂ ಅವನ ಮುಂದೆ ತನ್ನ ಹೃದಯದ ಯಾತನೆಯನ್ನು ತೋರಿಸದೆ ಇರುತ್ತಿದ್ದಳು.

ರಾಘಣ್ಣ ತನ್ನಿಂದ ದೂರನಾದ ಹೊತ್ತಿನಲ್ಲಿ ತಾಯಿಗಿಂತ ತಾಯಿಯಾದ ಕಮಲಮ್ಮ ಏನಾದರೂ ತನ್ನನ್ನು ದೂರಮಾಡುವುದಿಲ್ಲ ಎಂಬ ನಂಬಿಕೆ ಅವಳ ಹೃದಯದಲ್ಲಿತ್ತು. ದಿನಕಳೆದಂತೆ ಕಮಲಮ್ಮನೂ ತನ್ನಿಂದ ದೂರವಾದಳು ಎಂಬುದು ಮನವರಿಕೆಯಾಗಿ, ಆ ನಂಬಿಕೆಯ ಎಳೆಯೂ ದುರ್ಬಲವಾಗಿ ಕಡೆಗೊಂದು ದಿನ ಆ ಎಳೆಯೂ ಕಡಿದು ಹೋಗುವ ಹೊತ್ತು ಬಂತು. ಆ ಭಾವನೆಯಿಂದ ರತ್ನಮ್ಮನ ಹೃದಯಕ್ಕೆ ಎಷ್ಟು ವೇದನೆ

ಯಾಗುತ್ತಿತ್ತೋ ಕಮಲಮ್ಮನ ಹೃದಯಕ್ಕೂ ಅಷ್ಟೇ ಯಾತನೆಯಾಗುತ್ತಿತ್ತು.

ತನ್ನ ಮಗನ ಸಿಟ್ಟು ಇವತ್ತಲ್ಲ ನಾಳೆ ಇಳಿದು ಎಲ್ಲವೂ ಮತ್ತೆ ಮೊದಲಿನ ಹಾಗಾಗುತ್ತದೆ ಎಂಬ ನಂಬಿಕೆ ಕಮಲಮ್ಮನಿಗೂ ಇತ್ತು. ಆ ನಂಬಿಕೆಯಿಂದಲೇ ರತ್ನಮ್ಮ ತನ್ನ ಮನೆಗೆ ಬರದೆ ಹೋದಾಗ, ನಾರಾಯಣನೂ ಬರುವುದು ತಪ್ಪಿದಾಗ, ಎಲ್ಲಾ ಎರಡು ದಿನದ ದುಃಖ ಎಂದು ಸಮಾಧಾನ ಹಚ್ಚಿಕೊಂಡಿದ್ದಳು. ಆ ಅಕ್ಕರೆ ಇದ್ದುದರಿಂದಲೇ, ರತ್ನಮ್ಮನ ಬಗ್ಗೆ ಅಪಾಪನೆಯ ಮಾತು ಕೇಳಿದಾಗ, ತನ್ನೆದೆಯ ಮೇಲೇ ಬರೆಬಿದ್ದಂತೆ ತಳಮಳಿಸಿದ್ದಳು. ಅದಕ್ಕಾಗಿಯೇ ರಾಘಣ್ಣನನ್ನು ರತ್ನಮ್ಮನ ರಕ್ಷಣೆಗಾಗಿ ಅಟ್ಟಿದ್ದಳು.

ಆದರೆ ರಾಘಣ್ಣ ತಾನೇ ಹೋಗಿ ರತ್ನಮ್ಮನನ್ನು ಎಚ್ಚರಿಸಿದಾಗಲೂ ರತ್ನಮ್ಮ ದುಷ್ಟ ಸಹವಾಸವನ್ನು ಬಿಡದೆ, ತನ್ನ ಮಗನನ್ನೇ ದೂರಮಾಡಿದುದನ್ನು ಕಂಡು ಆಕೆಯ ಹೃದಯಕ್ಕೆ ಅಪಾರ ವ್ಯಥೆಯಾಗಿತ್ತು. ರಾಘಣ್ಣ ಎಚ್ಚರಿಸಿದ ಮೇಲೂ ಚಿನ್ನೋಬಯ್ಯ ರತ್ನಮ್ಮನ ಮನೆಗೆ ಬಂದು ಹೋಗುವುದನ್ನು ನಿಲ್ಲಿಸದಿರುವುದನ್ನು ಕಂಡು ಆಕೆಗೆ ರತ್ನಮ್ಮನ ವಿಷಯದಲ್ಲಿದ್ದ ನಂಬಿಕೆ ಎಲ್ಲಾ ಸೋತುಹೋಗಿ—

'ಹಾಳಾದ ದೇವರು, ಯಾರಿಗೆ ಯಾವಕಾಲಕ್ಕೆ ಏನು ದುರ್ಬುದ್ಧಿ ಕೊಡುತ್ತಾನೊ'

—ಎಂದು, ರತ್ನಮ್ಮನ ಯೌವ್ವನ, ಅಕಾಲ ವೈಧವ್ಯಗಳ ಆಧಾರದ ಮೇಲೆ ಹಳ್ಳಿಗರು ಕಟ್ಟಿದ ಅಪವಾದದ ಸೌಧಕ್ಕೆ ತಾನೂ ಅಪನಂಬಿಕೆಯ ಗೋಪುರ ಇಟ್ಟಳು.

'ರತ್ನನಂಥ ಹುಡುಗಿಗೆ ಇಂಥ ಬುದ್ಧಿ ಬರಬಹುದೇ? ದೇವರ ಸ್ತ್ರೀಸೇವ್ಯ ನಾಯಿಯ ಪಾಲಾಗಬಹುದೇ ಭಗವಂತಾ'

—ಎಂದು ಮೂರುನಾಲ್ಕು ದಿನ ಕಂಬನಿಗರೆದು, ಬಳಿಕ—

'ಅವರವರ ಹಣೆಬರಹ ಅವರವರಿಗೆ. ಅದನ್ನು ತಪ್ಪಿಸಲು ಯಾರಿಂದ ಸಾಧ್ಯ'

—ಎಂದು ವಿಧಿಗೆ ಸೋತು ಕೈ ಊರಿದ್ದರು.

ಆ ಅಸಹಾಯಕತೆಯ ಭಾವನೆಯೊಂದಿಗೇ ಆಕೆಯಲ್ಲಿ ರತ್ನಮ್ಮನ ಬಗ್ಗೆ ಮುನಿಸೂ ಬೆಳೆಯಿತು.

‘ ಹಾಳಾದವಳು ತಾನು ಕೆಡುವುದಲ್ಲದೆ, ಅವಳನ್ನು ವಹಿಸಿಕೊಂಡ ತನಗೆ ಊರಿನಲ್ಲಿ ಮುಖ ಎತ್ತಿಕೊಂಡು ತಿರುಗದ ಹಾಗೆ ಮಾಡಿದಳಲ್ಲಾ ’

—ಎಂಬ ಅಸಮಾಧಾನ, ಮಗನಿಗಾದ ಅವಮಾನದ ಭಾವನೆಯೊಂದಿಗೆ ಬೆರೆತು ಸಿಟ್ಟಾಯಿತು.

ಆದರೆ ಹಾಗೆಂದು ಆಕೆ ತುಸು ಹೊತ್ತಿದ್ದ ಹೊಣೆಗಾರಿಕೆಯನ್ನು ಬಿಡಲು ಸಿದ್ಧವಾಗಲಿಲ್ಲ.

ರಾಘಣ್ಣ ತನ್ನ ಮುಂದೆ ರತ್ನಮ್ಮನ ಹೆಸರನ್ನೇ ಎತ್ತಕೂಡದೆಂದು ಕಟ್ಟು ಮಾಡಿದ್ದ, ಆದುದರಿಂದ ತಮ್ಮ ಹೃದಯದ ನೋವನ್ನು ಅವನ ಮುಂದೆ ಹೇಳಿಕೊಳ್ಳಲಾಗದೇ ಗಂಡನೆದುರಿಗೆ ಎಲ್ಲವನ್ನೂ ತೋಡಿಕೊಂಡು—

‘ ಲಕ್ಷ್ಮಣರಾಯರಿಗೆ ಒಂದು ಕಾಗದವಾದರೂ ಬರೆದು ಹಾಕಿ. ನಮ್ಮ ಮಾತಂತೂ ಅವಳಿಗೆ ಪಥ್ಯವಾಗಲಿಲ್ಲ. ನಮ್ಮ ನಂಬಿಕೆಯಿಂದ ಲಕ್ಷ್ಮಣರಾಯರು, ಸೀತಮ್ಮ ಒಂಟಿ ಹುಡುಗೀನ ಈ ಹಳ್ಳೀಲಿ ಬಿಟ್ಟು ಹೋದರು. ರತ್ನನಿಗೆ ನಾವು ಬೇಡವಾದರೂ ಚಿಂತೆಯಿಲ್ಲ. ಆ ತಂದೆತಾಯಿಗಾದರೂ ಇದ್ದ ವಿಷಯ ತಿಳಿಸೋಣ. ಅವರೇ ಬಂದು ಏನುಮಾಡುತ್ತಾರೊ, ಏನು ಬಂದೋಬಸ್ತು ಮಾಡುತ್ತಾರೋ ಮಾಡಿ ಹೋಗಲಿ ’

—ಎಂದಳು.

ಖಾಯಿಲೆಯಿಂದ ಮನೆಬಿಟ್ಟು ಕದಲದಿದ್ದ ಶ್ರೀನಿವಾಸರಾಯರಿಗೆ ಯಾವ ವಿಷಯವೂ ತಿಳಿದಿರಲಿಲ್ಲ. ಕೆಟ್ಟ ಸುದ್ದಿಯನ್ನು ಅವರ ಮುಂದೆ ಹೇಳಿ, ರತ್ನಮ್ಮನನ್ನು ಹೊಟ್ಟೆಯ ಮಗಳಂತೆ ಪ್ರೀತಿಸುತ್ತಿದ್ದ ಅವರ ಹೃದಯಕ್ಕೇಕೆ ನೋವುಂಟು ಮಾಡಬೇಕೆಂದು ಯಾರೂ ಈ ಸುದ್ಧಿಯನ್ನು ಅವರಿಗೆ ತಿಳಿಸಿರಲಿಲ್ಲ.

ಎಂತಲೇ ಮೊಟ್ಟ ಮೊದಲಬಾರಿಗೆ ಈ ಸುದ್ದಿಯನ್ನೆಲ್ಲಾ ಕೇಳಿ ಅವರಿಗೆ ಸಿಡಿಲು ಬಡಿದಂತಾಯಿತು.

‘ಆ ಸೂಳೇಮಗ ಚಿನ್ನದಂಥ ಹುಡುಗೀನ ಕೆಡಸ್ತಾ ಇದ್ದರೆ, ನೀವೆಲ್ಲಾ ನೋಡಿಕೊಂಡು, ಕೈ ಕಟ್ಟಿಕೊಂಡು ಕುಳಿತಿದ್ದಿರಾ ? ’

— ಎಂದು ತಮ್ಮ ಮನೆಯವರ ಮೇಲೆ ರೇಗಿದರು.

‘ ಅವಳಿಗೆ ನಾವೇ ಬೇಡವಾದ ಮೇಲೆ ನಮ್ಮ ಮಾತು ತಾನೇ ಏನು

ಲೆಕ್ಕ ? ನಾವೇನೋ ಹೇಳಬಹುದು. ಆದರೆ ಅವಳು ಕೇಳುತ್ತಾಳೆಯೇ ? ಹೇಳಲಿಕ್ಕೆ ಹೋಗಿ ರಾಘಣ್ಣ ಮುಖಕ್ಕೆ ಮಂಗಾಳರತಿ ಎತ್ತಿಸಿಕೊಂಡು ಬಂದ ನಲ್ಲಾ. ಅದು ಸಾಲದೇ ? '

—ಗಂಡ ತಮ್ಮ ಮೇಲೇ ತಪ್ಪು ಹಾಕಿದುದನ್ನು ಕಂಡು ಕಮಲಮ್ಮ ರೇಗಿ ಕೇಳಿದಳು.

' ಹೆತ್ತೋಳು ನೀನು. ನಿನ್ನ ಮಗನ ತಪ್ಪು ನಿನಗೆ ಕಾಣೊಲ್ಲ. ಇವನು ಮಹಾ ದುಡುಕು. ಅವಳು ಏನು ಹೇಳಿದಳೋ. ಇವನು ಏನು ಕೇಳಿಕೊಂಡು ಬಂದನೋ. ನೀನಾದರೂ ಹೋಗಿ ಒಂದು ಮಾತು ಕೇಳ ಬಾರದಾಗಿತ್ತೆ ? ಹೀಗಲ್ಲಾ ಅಂತ ಅವಳ ಕಪಾಳಕ್ಕೆ ಹಾಕಿ ಹೇಳೋ ಅಷ್ಟು ಅಧಿಕಾರ ಇರಲಿಲ್ಲವೇ ನಿನಗೆ ? '

—ಹೆಂಡತಿಯನ್ನೇ ಘಟ್ಟಿಸಿ ಕೇಳಿದರು ಶ್ರೀನಿವಾಸರಾಯರು.

' ಅವಳಿಗೆ ಅಷ್ಟು ನನ್ನ ಮೇಲೆ ಅಕ್ಕರೆ ಇದ್ದರೆ, ಅವಳೇ ಬಂದು ಹೇಳ್ತಾ ಇದ್ದಳು. ಅವಳಿಗೇ ಅದು ಬೇಡ. ಗಂಡಸಿಗಿಂತ ಹೆಚ್ಚಾಗಿ ರೋಷಾ ಸಾಧಿಸ್ತಾ ಇದಾಳೆ. ಅದು ಯಾವ ಲೋಕ ಗೆಲ್ಲೋಕೆ ಇಷ್ಟು ಹಟ. ಪ್ರೀತಿ ನೆಲ್ಲಾ ಎರೆದು ಅವಳನ್ನೂ ಒಬ್ಬ ಮನುಷ್ಯಳೂಂತ ಮಾಡಿದೋಳು ನಾನು. ಅವಳು ಬೇರೆ ಅಲ್ಲ, ಹೊಟ್ಟೇಲಿ ಹುಟ್ಟಿದ ಮಗಳು ಬೇರೆ ಅಲ್ಲ ಅನ್ನೋ ಹಾಗಿದ್ದೆನಲ್ಲಾ. ಅವಳಿಗೆ ಯಾತಕ್ಕೆ ಏನು ಕಡಿಮೆ ಮಾಡಿದ್ದೆ ನಾನು. ಒಂದು ವೇಳೆ ರಾಘಣ್ಣ ದುಡುಕಿ ಏನಾದ್ರೂ ಅಂದಿದ್ರೆ ನನ್ನ ಮುಂದೆ ಹೇಳಿದ್ರೆ ಆಗ್ತಾ ಇರಲಿಲ್ಲವಾ? ನನಗಿಂತ, ರಾಘಣ್ಣನಿಗಿಂತ ಆ ಚಿನ್ನೋಬಯ್ಯ ಅವಳಿಗೆ ದೊಡ್ಡೋನಾದನಾ ? ಅವನು ತುಳಿದ ನೆಲ ನಾನು ತುಳೀ ಬೇಕೇ ? ಅವಳು ಅಧಿಕಾರ ಮಾಡೋ ಕಡೆ ನಾನು ಅಂಗಲಾಚಿ ಬೇಡ ಬೇಕೇ ? ಚೆನ್ನಾಗಿದೆ ನೀವು ಹೇಳೋ ಮಾತು. ಸೋತುಕೊಂಡು ಹೋಗೋಕೂ ಒಂದು ಮಿತಿ ಇಲ್ಲವೇ ? '

—ಗಂಡನ ಬಾಯಿ ಮುಚ್ಚಿಸಿ ಕೇಳಿದಳು ಕಮಲಮ್ಮ.

' ಹಾಗಾದ್ರೀಗ ಏನು ಮಾಡು ಅಂತೀಯ ? '

—ಮುಂದೆ ಮಾತು ತೋಚದೆ ಕೇಳಿದರು ಶ್ರೀನಿವಾಸರಾಯರು.

' ಏನೂ ಇಲ್ಲ. ನಾವು ಮಾಡೋದು ಯಾವುದೂ ಉಳಿದಿಲ್ಲ. ಲಕ್ಷ್ಮಣ

ರಾಯರಿಗೆ ಒಂದು ಕಾಗದ ಬರೆದು ಹಾಕಿ, ಕಂಡಕೂಡ್ಲೇ ಬಂದು ಮಗಳನ್ನ, ಮೊಮ್ಮಗನನ್ನ ಕರೆದುಕೊಂಡು ಹೋಗಿ ಅಂತ ಹೇಳಿ—ಅಷ್ಟೇ ನಾವು ಮಾಡ್ಕೋದು ಉಳಿದಿರೋದು.

'ಈ ಸುಡುಗಾಡು ಮಾತು ಅವರಿಗೆ ಹ್ಯಾಗೆ ಬರಿಯೋದೇ ?'

'ಹ್ಯಾಗೆ ಅಂದರೆ....ಇಂಥ ಮಾತು ಬರಿಯೋದು ನಮ್ಮ ಕರ್ಮ, ಇಂಥ ಮಾತು ಕೇಳೋದು ಅವರ ಕರ್ಮ. ತಿಳಿದೂ ತಿಳಿದೂ ನಾವು ಅವರಿಗೆ ಹೇಳದಿದ್ದರೆ ಇನ್ಯಾರು ಹೇಳಬೇಕು. ನಾವೂ ಹೇಳದೆ, ನಾಳೆ ಮತ್ತೇನಾದರೂ ಆದರೆ 'ನೀವೆಲ್ಲಾ ಇದ್ದುಕೊಂಡು ನಮಗೊಂದು ಮಾತು ಹೇಳಬಾರದಾಗಿತ್ತೇ ?' ಅನ್ನೋದಿಲ್ಲವೇ ? ಆ ಅಪಖ್ಯಾತಿ ನಮಗೇಕೆ? ಇರೋ ವಿಷಯ ಹೇಳೋದು, ಆಮೇಲೆ ಅವರುಂಟು, ಅವರ ಮಗಳುಂಟು.'

—ಎಂದಳು ಕಮಲಮ್ಮ.

ಆ ಮಾತಿನ ತರ್ಕಕ್ಕೆ ಶ್ರೀನಿವಾಸರಾಯರು ಸೋಲಬೇಕಾಯಿತು. ಆ ಸಂದಿಗ್ಧದಿಂದ ಪಾರಾಗಲು ಬೇರೆ ದಾರಿಯೂ ಕಾಣದೆ, ಕಡೆಗೆ ಶ್ರೀನಿವಾಸ ರಾಯರು ಹೆಂಡತಿಯ ಮಾತಿಗೆ ಕಟ್ಟುಬಿದ್ದು, ಕೆರೆಸಂತೆ ಹಳ್ಳಿಯಿಂದ ವರ್ಗ ವಾಗಿ, ದೂರದ ಹಳ್ಳಿಯೊಂದರಲ್ಲಿದ್ದ ಲಕ್ಷ್ಮಣರಾಯರಿಗೆ ವಿಷಯವನ್ನು ತಿಳಿಸಿ ಕೂಡಲೇ ಹೊರಟು ಬರುವಂತೆ ಕಾಗದ ಬರೆದು ಹಾಕಿದರು.

ಶ್ರೀನಿವಾಸರಾಯರಿಂದ ಬಂದ ಕಾಗದ ನೋಡಿ ಲಕ್ಷ್ಮಣರಾಯರಿಗೆ ವಿದ್ಯುದಾಘಾತವಾದಂತಾಯಿತು. ಸೀತಮ್ಮ ತಮ್ಮ ಕಾಲಕೆಳಗಿನ ಭೂಮಿಯೇ ಬಿರಿದಂತೆ ತಲ್ಲಣಿಸಿ, ಕಂಬನಿಯ ವಿಗ್ರಹವಾಗಿ 'ಏನಾದರಾಗಲಿ, ರತ್ನಾನೂ ನಾರಾಯಣನನ್ನು ಕರೆದು ಕೊಂಡು ಬನ್ನಿ. ಆ ಆಸ್ತಿ ಹಾಳಾದರೆ ಹಾಳಾಗಲಿ' ಎಂದು ಹೇಳಿ ಕಳಿಸಿದಳು. ಕಾಗದ ತಲುಪಿದ ದಿನವೇ ಲಕ್ಷ್ಮಣರಾಯರು ಅಲ್ಲಿಂದ ಹೊರಟು ಸೋಮನ ಹಳ್ಳಿಗೆ ಬಂದವರು, ಮಗಳ ಮನೆಗೂ ಹೋಗದೆ ನೇರವಾಗಿ ಶ್ರೀನಿವಾಸರಾಯರ ಮನೆಗೇ ಹೋದರು—ಎಲ್ಲ ವಿಷ ಯವನ್ನೂ ಕೂಲಂಕಷವಾಗಿ ತಿಳಿದುಕೊಳ್ಳಲು.

ಮಗಳ ವಿಷಯದಲ್ಲಿ ಕೆಟ್ಟ ಸುದ್ದಿ ಕೇಳಿ, ಹುಚ್ಚು ಹಿಡಿದಂತೆ ಮನೆ ಬಾಗಿಲಿಗೆ ಬಂದ ಲಕ್ಷ್ಮಣರಾಯರನ್ನು ಕಂಡು ಕಮಲಮ್ಮನಿಗೆ ಕರುಳಿನಲ್ಲಿ ಬೆಂಕಿ ಸುರುವಿದಂತಾಯಿತು. ಮನೆಯೊಳಗೆ ಕಾಲಿಟ್ಟ ಗಳಿಗೆಯೇ—

' ಕಮಲಕ್ಕ—ಇದೇನು ಅನರ್ಥ'

—ಎಂದು ಅಳುತ್ತಾ ಪ್ರಶ್ನೆಮಾಡಿದ ಲಕ್ಷ್ಮಣರಾಯರಿಗೆ, ಆ ಮಾತಿಗೆ ಉತ್ತರ ಕೊಡದೆ, ಉತ್ತರ ಹೇಳುವ ವಿಷ ಗಳಿಗೆಯನ್ನು ಆದಷ್ಟು ಮುಂದು ವರಿಸುವ ಉದ್ದೇಶದಿಂದ,—

' ಅದೆಲ್ಲಾ ಆಮೇಲಾಗಲಿ. ಮೊದಲು ಸ್ನಾನಮಾಡಿ, ಊಟಕ್ಕೇಳಿ'

—ಎಂದಳು.

' ಊಟ....ಊಟ....ಈ ಮಾತಿಗಿಂತ ಇನ್ನು ಊಟ ಬೇಕೇ ಕಮಲಕ್ಕ. ಅದನ್ನು ಕೇಳಿಯೇ ಮೂರು ಮೂರು ಜನ್ಮಕ್ಕೂ ಹಸಿವೆಯಾಗದಷ್ಟು ಹೊಟ್ಟೆ ತುಂಬಿ ಹೋಗಿದೆ. ಇನ್ನೇನು ಊಟ ಮಾಡಲಿ ಹೇಳು. ನನಗೆ ಅದೊಂದೂ ಬೇಡ. ಅದೇನಾಯಿತೋ ಹೇಳು.'

—ಎಂದ ಲಕ್ಷ್ಮಣರಾಯ ಹುಚ್ಚುಹಿಡಿದವನಂತೆ.

ಶ್ರೀನಿವಾಸರಾಯರು, ರಾಘಣ್ಣ, ಕಮಲಮ್ಮ—ಯಾರು ಸಮಾಧಾನ ಹೇಳಿದರೂ ಲಕ್ಷ್ಮಣರಾಯರು ಕೇಳಲಿಲ್ಲ. ಗತ್ಯಂತರವಿಲ್ಲದೆ ಕಡೆಗೆ ರಾಘಣ್ಣನೇ ನಡೆದುದೆಲ್ಲವನ್ನೂ ಹೇಳಿ—

' ಈಗಲೂ ನನಗೆ ರತ್ನಕ್ಕ ದಾರಿತಪ್ಪಿದಾಳೆ ಅಂದರೆ ನಂಬಿಕೆ ಇಲ್ಲ ಮಾವಾ, ಈ ಚಂಡಾಲ ಸೂಳೇಮಕ್ಕಳು ಏನೇನೋ ಹೇಳಿ ಅವಳ ಬುದ್ಧಿ ಕೆಡಸಿದ್ದಾರೆ. ರತ್ನಕ್ಕ ಇಲ್ಲಿದ್ದರೆ ಈ ಸೂಳೇಮಕ್ಕಳು ಅವಳನ್ನು ಬದುಕೋಕೆ ಬಿಡೋದಿಲ್ಲ. ನೀನು ಹೇಗಾದರೂ ಮಾಡಿ ಅವಳನ್ನು ಇಲ್ಲಿಂದ ಕರಕೊಂಡು ಹೋಗು. ಅವಳ ಮಗನ ಆಸ್ತಿ ಕಾಪಾಡೋ ಭಾರ ನನಗಿರಲಿ '

— ಎಂದ.

' ನಿನ್ನ ಮಾತೂ ಕೇಳದಷ್ಟು ಜಿನ್ನೋಬಯ್ಯನ ಮೇಲೆ ವ್ಯಾಮೋಹಾನೇ ಅವಳಿಗೆ ? '

—ರಾಘಣ್ಣ ಹೇಳಿದುದನ್ನು ಕೇಳಿ, ಲಕ್ಷ್ಮಣರಾಯ ಕೇಳಿದ.

' ಅವನ ಮೇಲೆ ವ್ಯಾಮೋಹ ಅಲ್ಲ ಮಾವ, ನನ್ನ ಮೇಲಿನ ಅಪನಂಬಿಕೆ. ಮಗನ ಆಸ್ತಿ ಅಂದರೆ ಅದನ್ನು ಕಾಪಾಡೋ ವಿಷಯದಲ್ಲಿ ಅವಳಿಗಷ್ಟು ಆಸಕ್ತಿ. ಇವರು ಏನೇನೋ ದುರ್ಬೋಧನೆ ಮಾಡಿ ಅವಳ ತಲೇಲಿ ವಿಷ ತುಂಬಿದಾರೆ.'

‘ ನಿಮ್ಮ ವಿಶ್ವಾಸಕ್ಕಿಂತ ಆ ಆಸ್ತಿ ದೊಡ್ಡದಾಯಿತೇ ಅವಳಿಗೆ ? ಹೆಸರು ಕೆಡಿಸಿಕೊಂಡ ಮೇಲೆ ಯಾರನ್ನು ಹಾಕಿ ಸುಡಬೇಕು ಆ ಆಸ್ತೀಲಿ ? ’

—ಕೆರಳಿ ಕೇಳಿದ ಲಕ್ಷ್ಮಣರಾಯ.

‘ ಹಣಕಾಸಿನ ವಿಷಯಾನೇ ಹಾಗೆ ಮಾವ. ಎಂಥ ಸ್ನೇಹ, ವಿಶ್ವಾಸಾನೂ ಕೆಡಿಸಿಬಿಡುತ್ತೆ.’

—ನೀರಸವಾದ, ಜಡವಾದ ಧ್ವನಿಯಲ್ಲಿ ಹೇಳಿದ ರಾಘಣ್ಣ.

‘ ಇಲ್ಲ ರಾಘಣ್ಣ ನನ್ನ ಮನಸ್ಸಿಗೆ ನೋವಾಗುತ್ತೇಂತ ನೀನು ಏನೇನೊ ಹೇಳ್ತಾ ಇದೀಯ. ಎಷ್ಟು ಕೋಟಿ ವರಹ ಕೊಟ್ಟರೆ ಇಂಥ ವಿಶ್ವಾಸ ಸಿಗುತ್ತೆ. ಅವಳನ್ನು ಇಲ್ಲಿ ಬಿಟ್ಟುಹೋದ್ದೇ ನನ್ನ ತಪ್ಪಾಯಿತು.’

‘ ಆ ತಪ್ಪಿನಲ್ಲಿ ನನ್ನದೂ ಪಾಲಿದೆ ಮಾವ ನಾನೂ ಆಗ ಹೋಗು ಅಂದಿದ್ದರೆ ರತ್ನಕ್ಕ ಇಲ್ಲಿ ಇರ್ತಾ ಇರಲಿಲ್ಲ. ನಾನೇ ಕೈಯಾರ ಇಷ್ಟಕ್ಕೆಲ್ಲಾ ಕಾರಣ ಆದ ಹಾಗಾಯಿತು.’

—ಲಕ್ಷ್ಮಣರಾಯನ ವ್ಯಥೆಯನ್ನು ಕಂಡು ನೊಂದು ನುಡಿದ ರಾಘಣ್ಣ.

‘ ಆದ ಹೋದ ಮಾತಿನಿಂದ ಏನು ಉಪಯೋಗ. ಏನೋ ಇಂಥಾ ಮಾತೆಲ್ಲಾ ಕೇಳೋದು ನಮ್ಮ ಹಣೇಲಿ ಬರದಿತ್ತು. ಈಗ ಹಿಂದಾದ್ದು ಯೋಚಿಸದೆ ಮುಂದೆ ಏನು ಮಾಡಬೇಕೂಂತ ಚಿಂತಿಸು’

—ಎಂದರು ಶ್ರೀನಿವಾಸರಾಯರು ಎತ್ತೆತ್ತಲೋ ಹೋಗುತ್ತಿದ್ದ ಮಾತನ್ನು ತಡೆದು.

‘ ಈಗ ಮಾತಾಡೋಕೆ ಇನ್ನೇನೂ ಉಳಿದಿಲ್ಲ. ಅವಳು ನನ್ನ ಮಾತು ಕೇಳಿಕೊಂಡು, ಇವೆಲ್ಲಾ ನಿಮಗೆ ಒಪ್ಪಿಸಿ ನನ್ನ ಹಿಂದೆ ಬರಬೇಕು. ಇಲ್ಲ ಅಂದರೆ ಅವಳು ನನಗೆ ಮಗಳಲ್ಲ, ನಾನು ಅವಳಿಗೆ ತಂದೆಯಲ್ಲ. ಅವಳುಂಟು ಅವಳ ಹಣೆ ಬರಹ ಉಂಟು ’

—ಲಕ್ಷ್ಮಣರಾಯ ತನ್ನ ದುಃಖದಲ್ಲೇ ಭ್ರಮಿತನಾಗಿ ಹೇಳಿದ.

‘ ಅವಳನ್ನ ನೋಡಿ ಮಾತಾಡೋಕೆ ಮುಂಚೇನೇ ಇಂಥ ಮಾತೆಲ್ಲಾ ಅಂದುಕೊಂಡು ಹೋಗಬೇಡ. ಅದೂ ಬಹಳ ನೊಂದ ಜೀವ. ಎಲ್ಲಾ ಸಿಡಸಿಡಾಂತ ಅಂದರೆ ಅವಳು ಏನು ಮಾಡಬೇಕು ? ನೀನಾದರೂ ಸಮಾಧಾನವಾಗಿ ಮಾತಾಡು ’

—ಎಂದು ಕೇಳಿದಳು.

' ಹೂ. '

' ಕಾಫೀಗಾದರೂ ಇಡ್ತೀನಿ....ಕೂತುಕೋ.'

' ಈಗ ಅದ್ಯಾವುದೂ ಬೇಡ ರತ್ನ, ಕಾಫಿ ಊಟಕ್ಕೆ ಬರಲಿಲ್ಲ ನಾನು.'

' ಮತ್ತೆ........'

' ನಿನ್ನ ಇಲ್ಲಿಂದ ಕರೆದುಕೊಂಡು ಹೋಗೋಕೆ ನಾನು ಬಂದದ್ದು, ಈ ಊರು ಬಿಟ್ಟ ಮೇಲೇ ಊಟ ನೀರಿನ ಚಿಂತೆ.'

—ಕಡ್ಡಿಯನ್ನು ಮುರಿದು ತುಂಡು ಮಾಡುವಂತೆ ಹೇಳಿದ ಲಕ್ಷ್ಮಣ ರಾಯ.

ಆ ಮಾತನ್ನು ಕೇಳಿ ರತ್ನಮ್ಮನಿಗೆ ದಿಗ್ಭ್ರಮೆಯಾದಂತಾಯಿತು. ಆತ ಹೀಗೇಕೆ ಮಾತಾಡುತ್ತಿದ್ದಾನೆ ಎಂಬುದು ಒಂದುಗಳಿಗೆ ಅರ್ಥವಾಗಲಿಲ್ಲ. ಮಗುಗಳಿಗೆಂಯೇ ಊರಿಗೆ ಬಂದ ಆತ ನೇರವಾಗಿ ಮಗಳ ಮನೆಗೆ ಬರದೆ, ಕಮಲಮ್ಮನ ಮನೆಗೆ ಹೋದುದು ನೆನವಾಗಿ, ಅಲ್ಲಿಯವರೆಲ್ಲರೂ, ತನ್ನ ಮೇಲೆ, ತನ್ನ ತಂದೆಯ ಮನಸ್ಸು ಕೆಡುವಂಥ ಮಾತನ್ನೇನೋ ಹೇಳಿರಬೇಕು ಎನಿಸಿ, ಅಸಮಾಧಾನವೂ ಆಯಿತು. ಆದರೂ ಅದನ್ನು ತೋರಗೊಡದೆ–

' ಇದೇನಣ್ಣ ಹೀಗ್ಮಾತಾಡ್ತಿ '

—ಎಂದು ಕೇಳಿದಳು.

' ಆ ಪ್ರಶ್ನೆಗಳೆಲ್ಲಾ ಬೇಡ ರತ್ನ. ಅದ್ಯಾವುದನ್ನೂ ಬಾಯಿ ಬಿಟ್ಟು ಹೇಳೋಕೆ ನನಗೆ ಮನಸ್ಸಿಲ್ಲ. ಕೇಳಿದ್ದೇಸಾಕು–ಕಿವಿ ಹೊಲಸಾಗಿ ಹೋಗಿದೆ. ಇನ್ನೂ ಆಡಿ ಬಾಯಿ ಹೊಲಸು ಮಾಡಿಕೊಳ್ಳಲಾರೆ. ಏನೋ ಇದುವರೆಗೆ ಆದದ್ದು ಆಗಿಹೋಯಿತು. ಇನ್ನು ಅದು ಯಾವುದೂ ಬೇಕಾಗಿಲ್ಲ. ಸುಮ್ಮನೆ ನನ್ನ ಜೊತೆಗೆ ಊರಿಗೆ ನಡಿ.'

ತಂದೆಯಾಡಿದ ಆ ಮಾತುಗಳನ್ನು ಕೇಳಿ ರತ್ನಮ್ಮನ ಕಿವಿಯಲ್ಲಿ ಕಾದ ಸೀಸದ ರಸವನ್ನು ಸುರಿದ ಹಾಗಾಯಿತು. ಉದ್ವೇಗ ಮನಸ್ಸಿನಲ್ಲಿ ಉಕ್ಕಿ ಬಂತು; ಹಾಗೇ ತಂದೆಯ ಆ ಮಾತುಗಳ ಹಿನ್ನೆಲೆಯಲ್ಲಿದ್ದ ಕಠೋರ ಅಪಾದನೆಯೂ ಮನವರಿಕೆಯಾಯಿತು. ಒಂದುಗಳಿಗೆ ಅವಳಿಗೆ ತನ್ನ ಕಿವಿಯನ್ನೇ ನಂಬುವುದಾಗಲಿಲ್ಲ. ತನ್ನ ತಂದೆ.... ತನ್ನನ್ನು ಹಡೆದ ತಂದೆ....

ತನ್ನನ್ನು ಕುರಿತು ಇಂಥ ಮಾತು ಆಡುವುದೇ? ನೀನೇನು ಮಾಡಿದೆ, ನಿನ್ನ ವಿಷಯದಲ್ಲಿ ನಾನು ಕೇಳಿದ ಮಾತು ನಿಜವೇ, ಸುಳ್ಳೇ ಯಾವುದೊಂದನ್ನೂ ವಿಚಾರಿಸದೆ ಯಾರೋ ಹೇಳಿದ ಮಾತು ಕೇಳಿಕೊಂಡು ತನ್ನ ವಿಷಯದಲ್ಲಿ ಇಂಥ ವಿಷ ತೀರ್ಮಾನಕ್ಕೆ ಬರುವುದೇ?

ಬಗೆ ಬಗೆಯ ಭಾವನೆಗಳು ಅವಳ ಎದೆಯಲ್ಲಿ ಹೆಡೆಯುಪ್ಪಳಿಸಿದವು. ದುಃಖ, ಉದ್ವೇಗ, ಕ್ರೋಧ, ನಿರಾಶೆ, ಅಸಹಾಯತೆಗಳು ನಾನು ಮುಂದು, ತಾನು ಮುಂದೆಂದು ಅವಳ ಎದೆಯಲ್ಲಿ ನುಗ್ಗಿದವು. ಆ ಭಾವತುಮುಲದಲ್ಲಿ ಸಿಕ್ಕು ವಿಹ್ವಲಳಾಗಿ, ಏನು ಮಾತಾಡಲೂ ತೋಚದೆ ಸುಮ್ಮನೆ ತಂದೆಯ ಮುಖವನ್ನೇ ದಿಟ್ಟಿಸಿ ನೋಡಿದಳು. ಅವಳು ತನ್ನ ಪ್ರಶ್ನೆಗೆ ಉತ್ತರಕೊಡದೆ, ಸುಮ್ಮನೆ ತನ್ನ ಮುಖವನ್ನೇ ನೋಡುತ್ತಾ ನಿಂತುದನ್ನು ಕಂಡು ಲಕ್ಷ್ಮಣ ರಾಯನಿಗೆ ಸಿಟ್ಟು ಬಂತು.

' ನಾನು ಹೇಳಿದ್ದು ಕೇಳಿಸಲಿಲ್ವೆ ರತ್ನ. ನನ್ನ ಮುಖ ಏನು ನೋಡ್ತಿ ಈಗೇನು ಹೊರಡ್ತೀಯೋ ಇಲ್ಲವೋ? '

' ಎಲ್ಲಿಗೆ ಹೋಗಬೇಕು, ಏಕೆ? '

—ತಡೆತಡೆದು ಕೇಳಿದಳು ರತ್ನಮ್ಮ.

' ಮತ್ತೆ ಅದೇ ಮಾತೇ ಆಡ್ತೀಯಾ? ನಾನಾಗ್ಲೇ ಹೇಳಿಲ್ವೇ? ನೀನು ಈ ಊರು ಉದ್ಧಾರ ಮಾಡಿದ್ದು ಸಾಕು ಅಂತ.'

' ಅಣ್ಣಾ....ಸಿಟ್ಟಿನಲ್ಲಿ ನೀನೇನೇನೋ ಮಾತಾಡ್ತಾ ಇದೀಯ....'

'ಅದೆಲ್ಲಾ ಬೇಕಾಗಿಲ್ಲ. ಈಗ ನೀನು ಈ ಊರು ಬಿಡ್ತೀಯೋ ಇಲ್ಲವೋ ಅಷ್ಟು ಹೇಳು. '

' ಅಷ್ಟೇ. ಇನ್ನೇನೂ ನಿನಗೆ ಬೇಕಾಗಿಲ್ಲ. '

' ಊಹೂ. ಇನ್ನೇನೂ ಬೇಕಾಗಿಲ್ಲ. '

—ನಿರ್ಧಾರದ ಧ್ವನಿಯಲ್ಲಿ ಹೇಳಿದ ಲಕ್ಷ್ಮಣರಾಯ.

' ಆ ಪ್ರಶ್ನೆಗೆ ಉತ್ತರವಷ್ಟೇ ಬೇಕು? '

—ವಿಚಿತ್ರವಾದ ಧ್ವನಿಯಲ್ಲಿ ಕೇಳಿದಳು ರತ್ನಮ್ಮ.

' ಹೌದು. '

—ಆ ಮಾತು ಕೇಳಿ ರತ್ನಮ್ಮ ತಂದೆಯ ಮುಖವನ್ನೇ ದಿಟ್ಟಿಸಿ

ನೋಡಿದಳು. ಆತನ ಮುಖ ಬೆಂಕಿಯಲ್ಲಿ ಬಾಡಿಸಿದಂತಿತ್ತು. ಕಣ್ಣುಗಳಲ್ಲಿ ಹೊಳೆಯುತ್ತಿದ್ದ ಭಯಂಕರ ಬೆಂಕಿಯಾಳದಲ್ಲಿ ಎಲ್ಲೋ ದುಃಖದ ನೀರು ಜಿನುಗುತ್ತಿತ್ತು. ಅದನ್ನು ಕಂಡು ಅವಳ ಕಣ್ಣಿನಲ್ಲೂ ಒಸರಿದ ನೀರು, 'ಇಷ್ಟೇನೇ ಇವರು ನನಗೆ ಕೊಡುವ ಬೆಲೆ, ಇಷ್ಟೆಯೇ ಇವರಿಗೆ ನನ್ನಲ್ಲಿರುವ ನಂಬಿಕೆ' ಎಂದು ಮೂಡಿಬಂದ ಭಾವನೆಯೊಂದಿಗೆ ಇಂಗಿ ಹೋಯಿತು.

'ಅಂತೂ ನಿನ್ನ ದೃಷ್ಟಿಯಲ್ಲಿ ನಾನು ಅಪರಾಧಿ, ಅದಕ್ಕಾಗಿ ಈ ಊರು ಬಿಡಬೇಕು.'

—ಮನಸ್ಸಿಲ್ಲದಿದ್ದರೂ ಆಡಬೇಕಾಗಿ ಬಂದ ಕಾರಣದಿಂದಾಗಿ ವಿಕಾರವಾದ ಧ್ವನಿಯಲ್ಲಿ ಕೇಳಿದಳು ರತ್ನಮ್ಮ.

'ನೀನು ಅಪರಾಧಿಯೋ ಅಲ್ಲವೋ ನಿನಗೆ ಗೊತ್ತು, ಆ ಭಗವಂತನಿಗೇ ಗೊತ್ತು.'

'ಅಂತೂ ನಿನಗೆ ನನ್ನಲ್ಲಿ ನಂಬಿಕೆಯಿಲ್ಲ. ನನ್ನ ಮಾತಿಗಿಂತ ನಿಮ್ಮ ಅನುಮಾನಕ್ಕೇ, ಕಂಡವರ ಮಾತಿಗೇ ಬೆಲೆ ಹೆಚ್ಚು....'

'ಆ ಚರ್ಚೆ ಎಲ್ಲಾ ಈಗ ಬೇಡ ರತ್ನ, ನನ್ನ ಮಾತಿಗೆ ಏನು ಹೇಳುತ್ತೀಯೋ ಹೇಳು? ನೀನೀಗ ಹೊರಡುತ್ತೀಯೋ ಇಲ್ಲವೋ?'

—ಇದೇ ಕಡೆಯ ಮಾತೆಂಬಂತೆ ಕೇಳಿದ ಲಕ್ಷ್ಮಣರಾಯ.

'ಊಹೂ, ಬರುವುದಿಲ್ಲ.'

—ಲಕ್ಷ್ಮಣರಾಯ ಮಾತನಾಡಿದ ಬಳಿಕ ಒಂದು ಕ್ಷಣ ಸುಮ್ಮನಿದ್ದು, ಬಳಿಕ ತಟಕ್ಕನೆ ಹೇಳಿದಳು ರತ್ನಮ್ಮ. ಆ ಮಾತು ಕೇಳಿ ಲಕ್ಷ್ಮಣರಾಯ ಮೂಕನಾದ. ಬಳಿಕ ಸಿಡಿದು ಹೇಳಿದ—

'ಬರೋಲ್ಲಾ........'

'ಊಹೂ, ಇಲ್ಲ. ಮಗಳಾಗಿ ಬರುತ್ತಿದ್ದೆ, ಅಪರಾಧಿಯಾಗಿ ಬರುವ ಇಚ್ಛೆ ಇಲ್ಲ.'

'ಈ ಜೀವನವೇ ನಿನಗೆ ಬೇಕೇ?'

'ನನಗಿದು ಬೇಕೋ ಬೇಡವೋ ಭಗವಂತನಿಗೇ ಗೊತ್ತು.'

'ಥತ್. ನಿನ್ನಂಥವರ ಬಾಯಲ್ಲಿ ಭಗವಂತನ ಹೆಸರು ಬರಬಾರದು. ಜೀವರಂತೆ....ದೇವರು....'

' ಅಣ್ಣಾ.... '

—ಉದ್ರೇಕದಿಂದ ಲಕ್ಷ್ಮಣರಾಯ ಆಡುತ್ತಿದ್ದ ಮಾತನ್ನು ಕತ್ತರಿಸಿ ಹೇಳಿದಳು ರತ್ನಮ್ಮ—

' ಇದು ನನ್ನ ದೇವರ ಮನೆ. ಇಲ್ಲಿ ನಿಂತು ನೀನು ಈ ಮಾತು ಆಡಬಾರದು. ನಿನ್ನ ಮನಸ್ಸಿನಲ್ಲಿ ಈ ವಿಷ ತುಂಬಿದವರು ಹಾಯಾಗಿರಲಿ. ಊರೆಲ್ಲಾ ನನ್ನನ್ನು ಅಂದರು—ಸಹಿಸಿಕೊಂಡೆ; ನನ್ನವರು ಎಂದುಕೊಂಡವರೂ ಇದೇ ಮಾತನ್ನೇ ನಂಬಿ ನನ್ನನ್ನು ದೂರ ಮಾಡಿದರು—ಅದನ್ನೂ ಸಹಿಸಿ ಕೊಂಡೆ. ಆದರೆ....ನೀನು....ನೀನು....ನನ್ನನ್ನು ಹಡೆದ ತಂದೆ....ಮಗಳಿಗೆ ಹೇಳಬಾರದ ಮಾತನ್ನು ಹೇಳಲು ಬಂದಿದೀಯ—ನಂಬಬಾರದ ಮಾತನ್ನು ನಂಬಿ. ಅಪರಾಧಿ....ಅಪರಾಧಿ....ಅಪರಾಧಿ....ಎಲ್ಲರ ದೃಷ್ಟಿಯಲ್ಲೂ ನಾನು ಅಪರಾಧಿ. ಅವರವರ ಮೂಗಿನ ನೇರಕ್ಕೆ ತಲೆ ತಗ್ಗಿಸಿ ನಡೆಯಲಿಲ್ಲವೆಂದು—ನಾನು ಅಪರಾಧಿ....ರಾಘಣ್ಣ ಹೇಳಿದ ಹಾಗೆ ಕೇಳಲಿಲ್ಲವೆಂದು ಅವನಿಗೆ ಸಿಟ್ಟು; ನೀನು ಹೇಳಿದ ಹಾಗೆ ಕೇಳಲಿಲ್ಲವೆಂದು ನಿನಗೆ ಸಿಟ್ಟು. ಇದೇನೇ ಪ್ರೀತಿ, ಇದೇನೇ ಅಭಿಮಾನ ? ' ನಿನ್ನದು ತಪ್ಪು....ತಪ್ಪು....ತಪ್ಪು.... ಹಾಗೇಕೆ ಮಾಡಲಿಲ್ಲ....ಹೀಗೇಕೆ ಮಾಡಲಿಲ್ಲ'....ನಾನು ಎಲ್ಲರ ಕಾಲಕಸ ....ಅಷ್ಟೆ. ಹೋಗು ಅಣ್ಣಾ....ಎಲ್ಲರೂ ನನ್ನನ್ನು ಬಿಟ್ಟು ಹೋದ ಹಾಗೆ ನೀನೂ ಹೋಗು....ಯಾರಿಗೂ ನಾನು ವರದಿ ಒಪ್ಪಿಸಬೇಕಾಗಿಲ್ಲ....ಬೇಡಿ ನಡೆಯಬೇಕಾಗಿಲ್ಲ....ಯಾರೂ ನನ್ನನ್ನು ನಂಬಬೇಕಾಗಿಲ್ಲ....ನನ್ನನ್ನು ನಂಬುವ ಸ್ವಾಮಿ ನನ್ನ ಪಾಲಿಗೆ ಇರುವವರೆಗೂ ನಾನು ಯಾರಿಗೂ ಬಾಗಿ ನಡೆಯುವುದಿಲ್ಲ.'

—ಬಹು ದಿನದ ಅಕಾರಣ ಘಟನೆಯಿಂದ ಅವಳ ಹೃದಯದಲ್ಲೆಲ್ಲೋ ಗೂಡು ಕಟ್ಟಿಕೊಂಡಿದ್ದ ಕ್ರೋಧ ಹುಚ್ಚಾಗಿ ಹರಿಯಿತು. ಅದರ ಪ್ರವಾಹಕ್ಕೆ ಸಿಕ್ಕಿ ಲಕ್ಷ್ಮಣರಾಯ ತತ್ತರಿಸಿ ಹೋದ. ಆ ಆಘಾತದಿಂದ ಆತ ಚೇತರಿಸಿ ಕೊಳ್ಳುವ ಮುನ್ನವೇ, ಮುಚ್ಚಿದ ತಲೆಬಾಗಿಲನ್ನು ಯಾರೋ ತೆಗೆದುಕೊಂಡು ಬಂದ ಸದ್ದಾಯಿತು. ಬಂದವರು ಯಾರೆಂದು ತಂದೆ ಮಗಳಿಬ್ಬರೂ ತಲೆ ಬಾಗಿಲಿನತ್ತ ತಿರುಗಿ ನೋಡಿದರು.

ಒಳಗೆ ಬಂದವನು ಚಿನ್ನೋಬಯ್ಯ.

ಒಳಗೆ ಬರುತ್ತಿದ್ದ ಚಿನ್ನೋಬಯ್ಯ ಆಕಸ್ಮಿಕವಾಗಿ ಲಕ್ಷ್ಮಣರಾಯನನ್ನು ಕಂಡು ಹಾಗೇ ನಿಂತ.

ಚಿನ್ನೋಬಯ್ಯನನ್ನೂ, ಚಿನ್ನೋಬಯ್ಯನ ಹೆಗಲಮೇಲೆ ಮಲಗಿದ ತನ್ನ ಮೊಮ್ಮಗ ನಾರಾಯಣನನ್ನೂ ಕಂಡು ಲಕ್ಷ್ಮಣರಾಯನಿಗೆ ಇದ್ದಕ್ಕಿದ್ದಂತೆಯೇ ಪಿತ್ತೋದ್ರೇಕವಾದಂತಾಯಿತು. ಮಿಂಚಿನಂತೆ ಅವನ ಮೇಲೆ ನುಗ್ಗಿ, ಅವನ ತೋಳಲ್ಲಿದ್ದ ಮೊಮ್ಮಗನನ್ನು ಕಿತ್ತುಕೊಂಡು—

' ತೊಲಗೋ....ತೊಲಗೋ....ಮನೆಹಾಳು ಸೂಳೆಮಗನೆ, ಈ ಮನೆ ಬಿಟ್ಟು ತೊಲಗೋ.'

—ಎಂದು ಅರಚಿದ.

ಲಕ್ಷ್ಮಣರಾಯನ ನಡೆನುಡಿಯೊಂದೂ ಅರ್ಥವಾಗದ ಚಿನ್ನೋಬಯ್ಯ ಲಕ್ಷ್ಮಣರಾಯನ ಮಾತಿಗೆ ಉತ್ತರ ಕೊಡದೆ, ಬಲವಂತವಾಗಿ ನಿದ್ರೆಗೆ ಭಂಗ ಬಂದುದರಿಂದ ಅಳುತ್ತಿದ್ದ ನಾರಾಯಣನ ತಲೆಯನ್ನು ನೇವರಿಸತೊಡಗಿದ.

' ಥತ್....ಅವನ್ನ ಮುಟ್ಟಬೇಡ....ಅವನ್ನ ಮುಟ್ಟಿದ ಕೈ ಕಡಿದು ಹಾಕಿಬಿಡ್ತೀನಿ. '

—ಎಂದು ಅಬ್ಬರಿಸಿದ ಲಕ್ಷ್ಮಣರಾಯ, ನಾರಾಯಣನ ನೆತ್ತಿಯನ್ನು ನೇವರಿಸುತ್ತಿದ್ದ ಚಿನ್ನೋಬಯ್ಯನ ಕೈಯನ್ನು ಕಿತ್ತೆಸೆದು, ನಾರಾಯಣನನ್ನು ತನ್ನ ಬಳಿ ಎಳೆದುಕೊಂಡು.

ಅಷ್ಟು ಒರಟಾಗಿ ಆತ ನಾರಾಯಣನನ್ನು ತನ್ನಿಂದ ಕಿತ್ತುಕೊಂಡುದನ್ನು ನೋಡಿ ಚಿನ್ನೋಬಯ್ಯನಿಗೂ ಬೇಸರವಾಯಿತು. ತನ್ನ ತಾತನ ಗುರುತರಿಯದೆ ಅಳುತ್ತಿದ್ದ ನಾರಾಯಣನನ್ನು ನೋಡಿ—

' ನನ್ನ ಮೇಲೆ ಸಿಟ್ಟಿದ್ದರೆ ನನ್ನ ಮೇಲೆ ತೀರಿಸಿ. ಆ ಮಗೂನ ಅಳಿಸಬೇಡಿ. ತಾಯಿ ಹತ್ತಿರ ಬಿಡಿ. '

—ಎಂದ.

' ತಾಯಿ ಅಂತೆ.. .ಮಗು ಅಂತೆ....ಇವನದೇ ಮಗು ! .... ಮೊದಲು ಮನೆ ಬಿಟ್ಟು ಆಚೆ ತೊಲಗು ಚಂಡಾಲ. ನನ್ನ ಮಗಳ ಹೆಸರು ಕೆಡಿಸಿ, ನಾವು ಇದ್ದೂ ಸತ್ತೋರ ಹಾಗೆ ಮಾಡಿದೆ. ಸಾಲದೆ? ಮಗು ಅಂತೆ ಮಗು. ಇವನ ಅಭಿಮಾನಕ್ಕಿಷ್ಟು ಬೆಂಕಿ ಹಾಕ ! ಥತ್ '

—ಎಂದು ಚಿನ್ನೋಬಯ್ಯನತ್ತ ಉಗಿದ ಲಕ್ಷ್ಮಣರಾಯ.

ಆ ಮಾತು ಕೇಳಿ ಚಿನ್ನೋಬಯ್ಯನ ನ್ಯಾಯಲ್ಲಿ ಸಿಟ್ಟು ತಾನೇತಾನಾಗಿ ತುಂಬಿ ಬಂತು. ಮುಷ್ಟಿ ಬಿಗಿಯಿತು. ಕ್ರೋಧದಿಂದ ಕೆಂಪೇರುತ್ತಿದ್ದ ಕಣ್ಣುಗಳಿಂದ ಲಕ್ಷ್ಮಣರಾಯನನ್ನೇ ನೋಡುತ್ತಾ—

' ನೋಡಿ .... ನೀವು ದೊಡ್ಡವರು .... ವಯಸ್ಸಿನಲ್ಲಿ ಹಿರಿಯರು .... ಅದಕ್ಕೇ ಹೇಳ್ತೀನಿ. ನಾಲಗೆ ಸಡಿಲ ಬಿಡಬೇಡಿ. ಯಾರನ್ನ ಏನು ಅನ್ತೀರಿ ಅನ್ನೋದು ತಿಳಿದುಕೊಂಡು ಮಾತಾಡಿ. '

—ಎಂದ ಬಿಗಿಯುತ್ತಿದ್ದ ಧ್ವನಿಯಲ್ಲಿ.

' ಏನೋ....ಏನೋ.... ಏನು ತಿಳಿದುಕೊಂಡು ಮಾತಾಡಬೇಕೋ ನಾಯಿ....'

—ಎಂದವನೇ ಲಕ್ಷ್ಮಣರಾಯ ಚಿನ್ನೋಬಯ್ಯನ ಕೆನ್ನೆಗೆ ಹೊಡೆದನು. ಚಿನ್ನೋಬಯ್ಯನ ಮುಷ್ಟಿಯೂ ಮೇಲೆದ್ದಿತು. ಅದನ್ನು ಕಂಡು, ಅದುವರೆಗೂ ಸುಮ್ಮನಿದ್ದ ರತ್ನಮ್ಮ ಉಕ್ಕಿದ ಧ್ವನಿಯಲ್ಲಿ—

' ಚಿನ್ನೋಬಣ್ಣ '

—ಎಂದಳು. ಅವಳ ಕೂಗನ್ನು ಕೇಳಿ, ಚಿನ್ನೋಬಯ್ಯನ ಏರಿದ ಮುಷ್ಟಿ ಹಾಗೆ ಕೆಳಗಿಳಿಯಿತು. ಹಾಗೇ ರತ್ನಮ್ಮನ ಮುಖ ನೋಡಿದ.

'ಅವಳ ಮುಖ ಏನು ನೋಡ್ತೀಯೋ ಕುನ್ನಿ...ತೊಲಗು...ಹೋಗು.. ಹೋಗೋ.... '

—ಎಂದವನೇ ಲಕ್ಷ್ಮಣರಾಯ ಚಿನ್ನೋಬಯ್ಯನ ಎದೆಯನ್ನು ಹಿಡಿದು ನೂಕಿದ. ಅದನ್ನು ನಿರೀಕ್ಷಿಸದ ಚಿನ್ನೋಬಯ್ಯ ಕೆಳಗೆ ಬಿದ್ದ. ಅದನ್ನು ಕಂಡ ರತ್ನಮ್ಮ ಪ್ರಕ್ಷುಬ್ಧಳಾಗಿ—

' ಅಣ್ಣಾ—ಸಾಕು ನಿಲ್ಲಿಸಿ '

—ಎಂದು ಗದರಿಸಿದಳು.

' ಈ ಕುನ್ನೀನ ಮೊದಲು ಮನೆ ಬಿಟ್ಟು ತೊಲಗಿಸು. ಒಂದು ಗಳಿಗೆ ಕೂಡ ಅವನು ಇಲ್ಲಿರಕೂಡದು. '

' ಅಣ್ಣಾ, ನಿನಗೆ ಸಿಟ್ಟಿನಲ್ಲಿ ಬುದ್ಧಿಯೇ ನೆಟ್ಟಗಿಲ್ಲ. ಸ್ವಲ್ಪ ಸುಮ್ಮನಿರು.'

' ಮೊದಲು ಇವನನ್ನು ತೊಲಗಿಸ್ತೀಯೋ ಇಲ್ಲವೋ ಹೇಳು. ಅವನು

ನನ್ನ ಕಣ್ಣೆದುರಿಗೆ ಇರಕೂಡದು.'

—ರತ್ನಮ್ಮನ ಮಾತೇ ತನ್ನ ಕಿವಿಯ ಮೇಲೆ ಬೀಳದವನಂತೆ ಹೇಳಿದ ಲಕ್ಷ್ಮಣರಾಯ. ಆ ವೇಳೆಗೆ ಮೇಲಕ್ಕೆದ್ದ ಚಿನ್ನೋಬಯ್ಯ—

'ರತ್ನಕ್ಕ, ಅಯ್ಯನೋರು ಯಾಕೋ ಬಾಳ ಸಿಟ್ಟಾಗವ್ರೆ .... ನಾನು ಬರ್‍ತೀನಿ'

—ಎಂದ ಹೊರಡಲು ಸಿದ್ಧವಾಗಿ.

'ನಿಲ್ಲು ಚಿನ್ನೋಬಣ್ಣ, ನೀನು ಹೋಗಕೂಡದು.'

—ಅಪ್ಪಣೆ ಮಾಡುವ ಧ್ವನಿಯಲ್ಲಿ ಹೇಳಿದಳು ರತ್ನಮ್ಮ.

ಆ ಮಾತು, ಆ ಮಾತಿನ ಬಿರುಸನ್ನು ಕೇಳಿ ಹೋಗಲು ಸಿದ್ಧವಾಗಿದ್ದ ಚಿನ್ನೋಬಯ್ಯ ಛಟಕ್ಕನೆ ತಿರುಗಿ ನಿಂತು ರತ್ನಮ್ಮನನ್ನು ನೋಡಿದ.

'ಕೂಡದು. ಅವನು ಇಲ್ಲಿರಕೂಡದು. ಮತ್ತೆ ಈ ಮನೆ ಮೆಟ್ಟಲು ತುಳಿಯಕೂಡದು.'

—ಲಕ್ಷ್ಮಣರಾಯನೂ ಅಪ್ಪಣೆ ಮಾಡುವ ಧ್ವನಿಯಲ್ಲೇ ಹೇಳಿದ.

'ಇದು ನನ್ನ ಮನೆ, ಅಣ್ಣಾ. ಇಲ್ಲಿಂದ ಚಿನ್ನೋಬಣ್ಣನನ್ನು ಹೊರಗೆ ಕಳಿಸಲು ಯಾರಿಗೂ ಅಧಿಕಾರವಿಲ್ಲ.'

—ರತ್ನಮ್ಮ ಹೇಳಿದಳು.

'ನನಗೂ ಅಧಿಕಾರವಿಲ್ಲವೇ ?'

'ಇಲ್ಲ. ನಿನಗೂ ಅಧಿಕಾರವಿಲ್ಲ.'

'ನಾನು....ನಾನು....ನಿನ್ನ ತಂದೆ....'

'ತಂದೆ!.... ನನ್ನನ್ನು ಜಾರಿಣಿ ಎಂದಾಗ, ಅಪರಾಧಿ ಎಂದಾಗ ಎಲ್ಲಿ ಹೋಗಿತ್ತು ನಿಮ್ಮ ತಂದೆತನ? ನನ್ನ ಮೋರೆಗೆ ಕಪ್ಪು ಬಳಿಯಲು ಊರಿನವರೊಂದಿಗೆ ಜೊತೆ ಸೇರಿದಾಗ ಎಲ್ಲಿ ಹೋಗಿತ್ತು ನಿಮ್ಮ ತಂದೆತನ? ಆ ಮಾತು ಹೇಳುವುದಕ್ಕೇ ಇಲ್ಲಿಗೆ ಬಂದೆಯಾ ನೀನು? ಏನೂ ತಪ್ಪು ಮಾಡದ ನಾನು ಜಾರಿಣಿ; ಏನೂ ತಪ್ಪು ಮಾಡದ ಚಿನ್ನೋಬಣ್ಣ ಹಾದರ ಬಡಕ-ಅಲ್ಲವೇ ? ಅಲ್ಲಸಲ್ಲದ ಅಪವಾದ ಹೊರಿಸಿ ನನ್ನನ್ನು ಊರು ಬಿಡಿಸಲಿಕ್ಕೆ ಬರಲು ನಿನಗೆ ನಾಚಿಕೆಯಾಗಬೇಕಿತ್ತು ಅಣ್ಣಾ. ನಿರಪರಾಧಿ

ದೇವರ ಹೆಸರು ಬರಬಾರದು. ಅಲ್ಲವೇ? ನಿಜ. ನಿಮ್ಮಂಥವರ ಬಾಯಲ್ಲಿ ತಂದೆ ಅನ್ನುವ ಮಾತೂ ಬರಬಾರದು. ಎಲ್ಲರ ಯೋಗ್ಯತೆಯೂ ನನಗೆ ಗೊತ್ತಿದೆ ಅಣ್ಣಾ. ತಂದೆಯ ಬಾಯಲ್ಲೇ ಮಗಳನ್ನು ಬೈಸಲು ಕಳಿಸಿದವರ ಹೃದಯದ ವಿಷ ನನಗೆ ಗೊತ್ತಿದೆ. ನನಗಿಂತ ಅವರೇ ನಿನಗೆ ಹಿತವಾದವರು. ಅಲ್ಲಿ ಹೋಗಿ ನಿನ್ನ ಅಧಿಕಾರ ನಡೆಸು. ನನ್ನ ಮನೆಯಲ್ಲಿ, ನನ್ನದಲ್ಲದೆ ಬೇರೆ ಯಾರ ಅಧಿಕಾರವೂ ನಡೆಯುವುದಿಲ್ಲ.'

—ಕೆರಳಿಸಿದ ಸಿಂಹಿಣಿಯಂತೆ ಸೆಟೆದು ನಿಂತು, ಕಣ್ಣುಗಳಿಂದ ದಳ್ಳುರಿಯನ್ನು ಕಾರುತ್ತಾ ಹೇಳಿದಳು ರತ್ನಮ್ಮ.

ಚಿನ್ನೋಬಯ್ಯ ಅಂಥ ರತ್ನಮ್ಮನನ್ನು ಎಂದೆಂದೂ ನೋಡಿರಲಿಲ್ಲ. ದಂಗು ಬಡಿದು ನೋಡುತ್ತಾ ನಿಂತಿದ್ದ. ಮುಸಲಧಾರೆಯಂತಿದ್ದ ಆ ಮಾತಿನ ಹೊಯ್ಲಿಗೆ ಸಿಕ್ಕ ಲಕ್ಷ್ಮಣರಾಯನೂ ಮುನಿದ ಮಗಳನ್ನು ನೋಡಿದ. ಅವನ ಹೃದಯವೂ ಕ್ರೋಧ ಕರ್ಕಶವಾಗಿತ್ತು.

'ಇವನು ಇರಬೇಕು, ನಾನು ಹೋಗಬೇಕು. ಅಲ್ಲವೇ? ಆಯಿತು ಅವನನ್ನೇ ಇಟ್ಟುಕೊಂಡು ಸುಖಪಡು. ಆದರೆ ನನ್ನ ಮೊಮ್ಮಗನಿಗೆ ಮಾತ್ರ ಈ ಹಾದರದ ಕೂಳು ಬೇಡ'

—ಎಂದವನೇ, ರತ್ನಮ್ಮನ ಹತ್ತಿರ ಮುಂಕುಬಡಿದು ನಿಂತಿದ್ದ ನಾರಾಯಣನನ್ನು ಎತ್ತಿಕೊಂಡು, ತಡೆಯಲು ಅಡ್ಡ ಬಂದ ರತ್ನಮ್ಮನನ್ನು ತಳ್ಳಿ ಹೊರಟು ಹೋದ.

'ಚಿನ್ನೋಬಣ್ಣಾ .... ಚಿನ್ನೋಬಣ್ಣಾ .... ನಾರಾಯಣನನ್ನು ಕಸಿದು ಕೋ....ಕಸಿದುಕೋ....'

—ಎಂದು ಚೀರುತ್ತಾ, ನೆಲದಿಂದ ಮೇಲೆದ್ದು ಬಾಗಿಲಿನತ್ತ ನುಗ್ಗಿದಳು ರತ್ನಮ್ಮ.

'ರತ್ನಕ್ಕ, ನೀನು ಸುಮ್ಮನಿರು, ನಿನ್ನ ಮಗನನ್ನು ನಾನು ತಂದು ಕೊಡ್ತೀನಿ. ಬೀದಿರಂಪ ಆಗೋದು ಬೇಡ.'

—ಎಂದು ಬಾಗಿಲಿನತ್ತ ನುಗ್ಗುತ್ತಿದ್ದ ರತ್ನಮ್ಮನನ್ನು ತಡೆದು ಹೇಳಿದ ಚಿನ್ನೋಬಯ್ಯ. ಅವನ ಮುಖವೂ ರೋಷ ಭೀಷಣವಾಗಿತ್ತು.

ಅವನ ಮಾತೇ ತನ್ನ ಕಿವಿಗೆ ಬೀಳದವಳಂತೆ ರತ್ನಮ್ಮ—

‘ ನಾರಾಯಣಾ....ನಾರಾಯಣಾ....

—ಎಂದು ಕೂಗುತ್ತಿದ್ದಳು, ಮರಿಯನ್ನು ಕಳೆದುಕೊಂಡ ತಾಯಿ ಹಕ್ಕಿಯಂತೆ.

ಅವಳು ಬೀದಿಗೆ ನುಗ್ಗದಂತೆ ತಡೆದು ಚಿನ್ನೋಬಯ್ಯ—

‘ ನಿನ್ನ ಮಗನ್ನ ನಾನು ತಂದುಕೊಡ್ತೀನಿ. ನೀನು ಬೀದೀಲಿ ಕಾಲಿಟ್ಟರೆ ನನ್ನಾಣೆ.’

—ಎಂದವನೇ ಚಿನ್ನೋಬಯ್ಯ, ಮೂಲೆಯಲ್ಲಿದ್ದ ದೊಣ್ಣೆಯೊಂದನ್ನು ಕೈಯಲ್ಲಿ ಹಿಡಿದು, ರತ್ನಮ್ಮನನ್ನು ಒಳಗೆ ತಳ್ಳಿ, ಬೀದಿಗೆ ಇಳಿದ.

ಬೀದಿಗೆ ಬಂದರೂ, ಮುಚ್ಚಿದ ಬಾಗಿಲಿನ ಹಿಂದೆ ರತ್ನಮ್ಮ ಅಳುವುದು ಕೇಳುತ್ತಲೇ ಇತ್ತು.

ಅದನ್ನು ಕೇಳ ಕೇಳುತ್ತಾ ಚಿನ್ನೋಬಯ್ಯನ ಮುಖ ಬಿರುಸಾಗಿ, ಕಣ್ಣು ಕೆಂಡವಾದವು.

# ೧೦

ಚಿನ್ನೋಬಯ್ಯ ಶ್ರೀನಿವಾಸರಾಯರ ಮನೆಯ ಬಾಗಿಲನ್ನು ಸೇರಿದಾಗ, ಒಳಗೆ ನಾರಾಯಣ ಅಳುತ್ತಿರುವುದು, ಕಮಲಮ್ಮ, ರಾಘಣ್ಣ, ಲಕ್ಷ್ಮಣ ರಾಯ ಮಾತನಾಡುವುದು ಕೇಳಿಸುತ್ತಿತ್ತು.

'ರಾಘಣ್ಣಾ'

—ಎಂದು ಕೂಗಿ, ಕೈಯಲ್ಲಿದ್ದ ದೊಣ್ಣೆಯಿಂದಲೇ ಬಾಗಿಲನ್ನು ತಟ್ಟಿದ ಚಿನ್ನೋಬಯ್ಯ.

'ಯಾರದು ?'

—ಎಂದು ಕೇಳಿಕೊಂಡು, ಬಾಗಿಲು ತೆಗೆದು ಹೊರಗೆ ಬಂದ ರಾಘಣ್ಣ ಚಿನ್ನೋಬಯ್ಯನನ್ನು ನೋಡಿ, ಆಕಸ್ಮಿಕವಾಗಿ ಹಾವನ್ನು ನೋಡಿದವನಂತೆ, ತಟಕ್ಕನೆ ಒಂದು ಹೆಜ್ಜೆ ಹಿಂದೆ ಸರಿದು ನಿಂತು—

'ಏನು ಬೇಕು ?'

—ಎಂದು ಕೇಳಿದ. ಅವನ ಹೃದಯದಲ್ಲಿ ಚಿನ್ನೋಬಯ್ಯನ ವಿಷಯದಲ್ಲಿದ್ದ ದ್ವೇಷ, ಹಿಂಸೆ, ಕ್ರೋಧಗಳೆಲ್ಲವೂ ಆ ಎರಡು ಮಾತುಗಳಲ್ಲಿ ತುಂಬಿದ್ದವು.

'ನಾರಾಯಣ ಎಲ್ಲಿ ?'

—ಎಂದು ಕೇಳಿದ ಚಿನ್ನೋಬಯ್ಯ.

'ಎಲ್ಲಿದ್ದರೆ ನಿನಗೇನಾಗಬೇಕು ?'

—ಸಿಟಿದು ಕೇಳಿದ ರಾಘಣ್ಣ.

'ಇದು ವಿಷ ಘಳಿಗೆ ರಾಘಣ್ಣಾ. ಆ ಮಾತೆಲ್ಲಾ ಈಗ ಬೇಡ. ಮನೇಲಿ ರತ್ನಕ್ಕ ಅಳ್ತಾ ಇದಾಳೆ. ಸುಮ್ಮನೆ ನಾರಾಯಣನನ್ನು ಕಳಿಸಿಬಿಡು.'

—ಉಕ್ಕಿ ಬರುತ್ತಿದ್ದ ಸಿಟ್ಟನ್ನು ತಡೆಹಿಡಿದು ಹೇಳಿದ ಚಿನ್ನೋಬಯ್ಯ.

'ನಾರಾಯಣ ಇಲ್ಲಿಲ್ಲ.'

'ಒಳಗಿದ್ದಾನೆ....ರಾಘಣ್ಣ.'

'ಇರಬಹುದು.'

'ಸರಿ....ಕಳಿಸಿ ಬಿಡು.'

'ಕಳಿಸೋದಿಲ್ಲ.'

'ಆ ಮಾತು ಬ್ಯಾಡ ರಾಘಣ್ಣ....ಸುಮ್ಮನೆ ಕಳಿಸಿಬಿಡು'

—ಎಚ್ಚರಿಕೆ ಕೊಡುವ ಧ್ವನಿಯಲ್ಲಿ ಹೇಳಿದ ಚಿನ್ನೋಬಯ್ಯ.

'ಕಳಿಸೋದಿಲ್ಲ ಅಂತ ಹೇಳಿದ್ದು ಕೇಳಲಿಲ್ಲವೇ ?'

—ರಾಘಣ್ಣನೂ ಎಚ್ಚರಿಕೆ ತಪ್ಪುತ್ತಾ ಹೇಳಿದ.

'ಸರಿ. ನೀನು ಕಳಿಸದಿದ್ರೆ ನಾನು ಕರಕೊಂಡು ಹೋಗ್ತೀನಿ.'

—ಎಂದು ಚಿನ್ನೋಬಯ್ಯ ಮುಂದೆ ಹೆಜ್ಜೆ ಇಟ್ಟ.

'ಮನೆ ಮೆಟ್ಟಲು ಬಿಟ್ಟು ಕೆಳಗೆ ನಿಂತು ಮಾತಾಡು ಚಿನ್ನೋಬಯ್ಯ. ಮುಂದೆ ಬಂದರೆ ಒಳ್ಳೇದಾಗಲಿಕಿಲ್ಲ.'

—ತೋಳು ಸವರಿಕೊಳ್ಳುತ್ತಾ ಹೇಳಿದ ರಾಘಣ್ಣ.

ಆದರೆ ಚಿನ್ನೋಬಯ್ಯ ಅವನ ಮಾತೇ ಕಿವಿಗೆ ಬೀಳದವನಂತೆ ಮುಂದೆ ಮುಂದೆ ನಡೆದ. ಅದನ್ನು ಕಂಡು ರಾಘಣ್ಣನಿಗೆ ತಾಳ್ಮೆ ತಪ್ಪಿ—

'ಇದು ನಿಮ್ಮಪ್ಪನ ಮನೆ ಅಲ್ಲ, ಹೋಗೋ ಬೋ....ಮಗನೇ.'

—ಎಂದು ಚಿನ್ನೋಬಯ್ಯನನ್ನು ಝಾಡಿಸಿ ತಳ್ಳಿದ.

ನೆಲಕ್ಕೆ ಬಿದ್ದ ಚಿನ್ನೋಬಯ್ಯ, ಪೆಟ್ಟು ತಿಂದ ಹಾವಿನಂತೆ ಸಿಡಿದು ರಾಘಣ್ಣನ ಮೇಲೆ ನುಗ್ಗಿದ. ಇಬ್ಬರಿಗೂ ಕೈ ಕೈ ಮಿಲಾಯಿಸಿತು.

ಆ ಗದ್ದಲವನ್ನು ಕೇಳಿ ಒಳಗಿದ್ದ ಕಮಲಮ್ಮ, ಲಕ್ಷ್ಮಣರಾಯ ಇಬ್ಬರೂ ಹೊರಗೆ ಬಂದರು. ರಾಘಣ್ಣನೊಂದಿಗೆ ಸೆಣಸುತ್ತಿದ್ದ ಚಿನ್ನೋಬಯ್ಯನನ್ನು ಕಂಡು, ಲಕ್ಷ್ಮಣರಾಯನಲ್ಲಿ ಕ್ರೋಧ ಕೆದರಿ—

'ಅಲ್ಲಿ ನನಗೆ ಅಪಮಾನ ಮಾಡಿದ್ದು ಸಾಲ್ದೆ, ಇಲ್ಲೂ ಬಂದ್ನಾ ಈ ಚಂಡಾಲ'

—ಎಂದು ಕೂಗುತ್ತಲೇ, ನೆಲದ ಮೇಲೆ ಬಿದ್ದಿದ್ದ, ಚಿನ್ನೋಬಯ್ಯ ತಂದಿದ್ದ ದೊಣ್ಣೆಯನ್ನು ತೆಗೆದುಕೊಂಡು ಚಿನ್ನೋಬಯ್ಯನ ತಲೆಗೆ ಅಪ್ಪಳಿಸಿದ. ಆ ಪೆಟ್ಟು ತಿಂದ ಚಿನ್ನೋಬಯ್ಯನ ತಲೆ ಬಿರಿದು ನೆತ್ತರು ಚಿಮ್ಮಿ 'ಅಯ್ಯೋ' ಎಂದು ಚೀರಿ ಉರುಳಿದ.

* * * *

ಚಿನ್ನೋಬಯ್ಯ ಒಳಕ್ಕೆ ತಳ್ಳಿದ ರತ್ನಮ್ಮ ಒಂದುಗಳಿಗೆ ಹಾಗೇ ಮಗನ ಹೆಸರನ್ನು ಕರೆಯುತ್ತಾ ಕೂತಿದ್ದಳು. ಮರುಗಳಿಗೆಯೇ ಏನೋ ಭಯ ಕವಿದು ತಾನೂ ಮನೆಯನ್ನು ಬಿಟ್ಟು ರಾಘಣ್ಣನ ಮನೆಯತ್ತ ಓಡಿದಳು.

ಅವಳು ರಾಘಣ್ಣನ ಮನೆಯ ಬಳಿಗೆ ಬರುವ ವೇಳೆಗೆ, ರಾಘಣ್ಣನ ಮನೆಯ ಮುಂದೆ ಹಳ್ಳಿಯ ಜನದ ಜಾತ್ರೆಯೇ ನೆರೆದಿತ್ತು. ಅಲ್ಲಿಗೆ ವೇಗವಾಗಿ ಬಂದ ರತ್ನಮ್ಮನನ್ನು ಕಂಡು ಜನ ಗುಸುಪಿಸು ಮಾತನಾಡಲಾರಂಭಿಸಿದರು. ಯಾರೋ ಒಬ್ಬರು—

'ಅಂತು ಈ ಮಾತಾಯಿ ಚಿನ್ನೋಬಣ್ಣನ ಬಲಿ ತಗೊಂಬಿಟ್ಲು'

—ಅಂದರು.

ಆ ಮಾತು ಕೇಳುತ್ತಿದ್ದ ಹಾಗೇ ರತ್ನಮ್ಮನ ಹೃದಯದಲ್ಲೇನೋ ಹುಚ್ಚು ಭೀತಿ ಕವಿದು, ಅಡ್ಡವಾಗಿದ್ದ ಗುಂಪನ್ನು ತಳ್ಳಿಕೊಂಡು, ಗುಂಪಿನ ಮಧ್ಯೆ ನುಗ್ಗಿ ನೆಲದಮೇಲೆ ನೆತ್ತರುಗಾರುತ್ತಾ ಉರುಳಿದ್ದ ಚಿನ್ನೋಬಯ್ಯನನ್ನು ಕಂಡು—

'ಚಿನ್ನೋಬಣ್ಣಾ'

—ಎಂದು ಚೀರಿ, ಅವನ ಬಳಗೆ ಹಾರಿದಳು.

ಸುತ್ತಾ ನೆರೆದಿದ್ದ ಜನ, ರಾಘಣ್ಣ, ಕಮಲಮ್ಮ, ತನ್ನ ತಂದೆ ಯಾರೂ ಅವಳ ಕಣ್ಣಿಗೆ ಕಾಣಲಿಲ್ಲ–ಕಂಡದ್ದು ನೆಲದ ಮೇಲೆ ಒರಗಿದ್ದ ಚಿನ್ನೋಬಯ್ಯ ಒಬ್ಬನೇ.

ಅವನ ಬಳಿಗೆ ಹಾರಿ, ಅವನನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು, ಅವನ ತಲೆಯಿಂದ ಹರಿಯುತ್ತಿದ್ದ ರಕ್ತವನ್ನು ಸೆರಗಿನಿಂದ ಒರಸಿ—

'ಅಣ್ಣಾ....ಅಣ್ಣಾ....ಚಿನ್ನೋಬಣ್ಣಾ....'

—ಎಂದು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು.

ಅವಳ ಅಳುವನ್ನು ಕೇಳಿ ಗುಂಪಿನಲ್ಲಿದ್ದವರು ಯಾರೋ ಕೀಚು ಧ್ವನಿಯಲ್ಲಿ ನಕ್ಕು—

‘ ಅಣ್ಣಾ ಅಂತೆ ಅಣ್ಣಾ....ಆಹಾಹೆ....ಸೋಗಲಾಡಿ....

—ಎಂದರು.

ಆ ಮಾತನ್ನು ಕೇಳಿ ರಾಘಣ್ಣಾ—

‘ ರತ್ನಕ್ಕ ನೀನಿಲ್ಲಿಂದ ಹೊರಟು ಹೋಗು.’

—ಎಂದು ಕೂಗಿದ.

ಆ ಮಾತಿಗೆ ರತ್ನಮ್ಮ, ಒಮ್ಮೆ ಅವನತ್ತ ತಾತ್ಸಾರವಾಗಿ ನೋಡಿ, ತಲೆ ತಗ್ಗಿಸಿದಳು. ಆ ನೋಟ ರಾಘಣ್ಣನ ಮೇಲೆ ಸಿಡಿಲಿನಂತೆ ಬಿತ್ತು. ರತ್ನಮ್ಮ ಪಕ್ಕದಲ್ಲಿದ್ದವನನ್ನು ನೋಡಿ—

‘ಅಣ್ಣಾ .... ಚಿನ್ನೋಬಣ್ಣನ್ನ ನನ್ನ ಮನೇಗೆ ಎತ್ತಿಕೊಂಡು ಬರ್ತೀಯಾ ? ಬೀದೀಲಿರೋದು ಬೇಡ’

— ಎಂದು ಬೇಡಿದಳು.

ಅವಳ ಮಾತಿಗೆ ಯಾರೂ ಉತ್ತರ ಕೊಡಲಿಲ್ಲ. ಯಾರೋ ಕಿಸಕಿಸ ನಕ್ಕರು. ರತ್ನಕ್ಕ ಸುಮ್ಮನೆ ಗುಂಪನ್ನು ನೋಡಿದಳು. ಆ ವೇಳೆಗೆ ಮಗನಿಗೆ ಪೆಟ್ಟು ಬಿದ್ದ ಸುದ್ದಿಯನ್ನು ಕೇಳಿದ ಚಿನ್ನೋಬಯ್ಯನ ತಾಯಿ ‘ ಅಯ್ಯೋ ಮಗನೇ, ಸತ್ತೇನೊ’ ಎಂದು ಚೀರುತ್ತಾ ಓಡಿ ಬಂದವಳು, ಚಿನ್ನೋಬಯ್ಯ ನನ್ನು ತೊಡೆಯ ಮೇಲೆ ಮಲಗಿಸಿಕೊಂಡಿದ್ದ ರತ್ನಮ್ಮನನ್ನು ನೋಡಿ—

‘ ಸತ್ರೂ ನನ್ನ ಮಗನ್ನ ಬಿಡಲಿಲ್ವಾ, ಥೂ ಹಾದರಗಿತ್ತಿ’

—ಎಂದು ರತ್ನಮ್ಮನ ಮುಖದ ಮೇಲೆ, ಉಗಿದು—

‘ ಹೋಗು....ಹೋಗು....ಹಾಳಾಗಿ ಹೋಗು....’

—ಎಂದು ಅವಳನ್ನು ತಳ್ಳಿ, ಅವಳ ಮೇಲೆ ಬಿದ್ದಳು.

ಅದನ್ನು ಕಂಡ ರಾಘಣ್ಣ, ಕಮಲಮ್ಮ ರತ್ನಮ್ಮನನ್ನು ಬಿಡಿಸಿ ಕೊಳ್ಳಲು ಬಂದರು. ರತ್ನಮ್ಮ ತನ್ನನ್ನು ಬಿಡಿಸಿಕೊಂಡ ರಾಘಣ್ಣನತ್ತ ಒಮ್ಮೆ ಕರ್ಕಶವಾಗಿ ನೋಡಿ ಯಾರನ್ನೂ ನೋಡದೆ ತಲೆತಗ್ಗಿಸಿಕೊಂಡು, ಗುಂಪಿನಲ್ಲಿ ನುಗ್ಗಿಕೊಂಡು ಮನೆಯತ್ತ ಹೊರಟಳು.

ರಾಘಣ್ಣ ಅವಳನ್ನು ಹಿಂಬಾಲಿಸಿ ಬಂದು—

'ರತ್ನಕ್ಕ........

—ಎಂದು ಕೂಗಿದ.

ರತ್ನಮ್ಮ, ಅವನ ಕೂಗು ಕೇಳದವಳಂತೆ ವೇಗವಾಗಿ ಮುಂದೆ ಹೋಗುತ್ತಿದ್ದಳು.

'ರತ್ನಕ್ಕಾ....ರತ್ನಕ್ಕಾ........

—ಎಂದು ಕೂಗುತ್ತಲೇ ಅವಳನ್ನು ಹಿಂಬಾಲಿಸಿದ ರಾಘಣ್ಣ. ತನ್ನನ್ನು ಹಿಂಬಾಲಿಸಿ ಬರುತ್ತಿದ್ದ ರಾಘಣ್ಣನ ಕೂಗನ್ನು ಕೇಳಿ ರತ್ನಮ್ಮ ತಟಕ್ಕನೆ ನಿಂತು-

'ಅವನ್ನ ಮುಗಿಸಿದೆಯಲ್ಲಾ. ಇನ್ನೇನಾಗಬೇಕು ನಿನಗೆ. ಇನ್ನು ಈ ರಾಜ್ಯ ನಿನ್ನದೆ. ಹಾಯಾಗಿ ಆಳು.'

—ಎಂದು ಘಟ್ಟಿಸಿ ಹೇಳಿ, ಬಿರುಗಾಳಿಯಂತೆ ನಡೆದು, ತನ್ನ ಮನೆಯನ್ನು ಸೇರಿ, ಬಾಗಿಲನ್ನು ಹಾಕಿಕೊಂಡಳು. ಬಾಗಿಲಿನ ಲಾಳಮುಂಡಿಗೆಯನ್ನು ಸರುಗಿಸಿದ ಸದ್ದನ್ನು ಕೇಳಿದ ರಾಘಣ್ಣ—

'ರತ್ನಕ್ಕಾ....ರತ್ನಕ್ಕಾ....ರತ್ನಕ್ಕಾ........'

—ಎಂದು ಕೂಗುತ್ತಾ ಬಾಗಿಲನ್ನು ಬಡಬಡ ಬಡಿದ.

ಅದರೆ ಯಾರೂ ಅವನ ಕೂಗಿಗೆ ಉತ್ತರ ಕೊಡಲಿಲ್ಲ. ಬಿಗಿದ ಬಾಗಿಲು ಸರಿಯಲಿಲ್ಲ.

ಗಳಿಗೆ ಗಳಿಗೆಗೆ ಏಕೋ ರಾಘಣ್ಣನ ಎದೆಯಲ್ಲಿ ದಿಗಿಲು ತುಂಬುತ್ತಿತ್ತು. ಹುಚ್ಚನಂತೆ ರತ್ನಮ್ಮನ ಹೆಸರು ಹಿಡಿದು ಕೂಗಿದ. ಕೈಯ ಚರ್ಮಕಿತ್ತು ರಕ್ತ ಬರುವಂತೆ ಬಾಗಿಲನ್ನು ತಟ್ಟಿದ.

ಆದರೆ ಉತ್ತರ ಬರಲಿಲ್ಲ, ಬಾಗಿಲು ಸರಿಯಲಿಲ್ಲ.

ಅವನ ಕೂಗನ್ನು ಕೇಳಿದ ಕೆಲವು ಜನ ಅಲ್ಲಿಗೆ ಓಡಿಬಂದು—

'ಏನಾಯಿತು ರಾಘಣ್ಣ ?'

—ಎಂದು ಕೇಳಿದರು.

'ಮುರಿಯಿರಿ....ಈ ಬಾಗಿಲು ಮುರಿಯಿರಿ....

—ಎಂದು ಚೀರಿದ ರಾಘಣ್ಣ.

ಜನಕ್ಕೆ ಅವನ ಭಯ ಅರ್ಥವಾಯಿತು. ಕೆಲವರು ಅವನೊಂದಿಗೆ ಸೇರಿ ಬಾಗಿಲು ಮುರಿಯಲು ಯತ್ನಿಸಿದರು. ಕೆಲವರು ಹಿತ್ತಿಲ ಬಾಗಿಲ

ಕಡೆ ನುಗ್ಗಿದರು, ಮತ್ತೆ ಕೆಲವರು, ಗವಾಕ್ಷಿಯಿಂದ ಕೆಳಗಿಳಿಯಲು ಮನೆಯ ಮಾಳಿಗೆಯನ್ನೇರಿದರು.

ಹತ್ತಾರು ಜನರ ನೂಕಾಟಕ್ಕೆ ಸಿಕ್ಕ ಬಾಗಿಲು ಮುರಿದು ಬಿತ್ತು.

ಹುಚ್ಚನಂತೆ ರಾಘಣ್ಣ ಒಳಗೆ ನುಗ್ಗಿ— 'ರತ್ನಕ್ಕಾ' ಎಂದು ಕೂಗುತ್ತಾ ಮನೆಯೊಳಗೆಲ್ಲಾ ಸುತ್ತಿ, ಎಲ್ಲೂ ರತ್ನಕ್ಕನನ್ನು ಕಾಣದೆ, ದೇವರ ಮನೆಗೆ ಬಂದು ನೋಡಿ—

'ರತ್ನಕ್ಕಾ....'

—ಎಂದು ಚಿಟಾರನೆ ಚೀರಿ ಉರುಳಿದ.

ಅವನ ರತ್ನಕ್ಕ ದೇವರ ಮುಂದಿನ ಜಂತೆಯಿಂದ ಜೋತುಬಿದ್ದ ಹಗ್ಗದ ತುದಿಯಲ್ಲಿ ಜೋಲಾಡುತ್ತಿದ್ದಳು. ಅವಳ ಬಿಗಿದ ಬಾಯಿಕೊನೆಯಿಂದ ಹರಿದು ಬಂದು ನಿಂತ ರಕ್ತದ ಬಿಂದುವೊಂದು ಇನ್ನೂ ಕೆಂಪಾಗಿ ಹೊಳೆಯುತ್ತಿತ್ತು. ಹಗ್ಗದ ಕುಣಿಕೆಗೆ ಸರಿಯಾಗಿ ಹತ್ತಲು ಇಟ್ಟುಕೊಂಡು, ಬಳಿಕ ತಳ್ಳಿದ ಡಬ್ಬ ದೇವರ ಮಂಟಪದ ಬಳಿ ಉರುಳಿತ್ತು.

ಯಾರಿಗೂ ಆ ದೃಶ್ಯವನ್ನು ನೋಡುವುದಾಗಲಿಲ್ಲ. ಕಡೆದ ವಿಗ್ರಹಗಳಂತೆ ನಿಂತಿದ್ದರು ಬಾಗಿಲ ಬಳಿ ನೆರೆದ ಜನ.

'ಎಲ್ಲಿ, ಎಲ್ಲಿ, ಎಲ್ಲಿ, ರತ್ನಕ್ಕ ಎಲ್ಲಿ.... '

— ಎಂದು ತೂರಾಡುತ್ತಾ ಚಿನ್ನೋಬಯ್ಯ ನುಗ್ಗಿದಾಗಲೇ ಜನಕ್ಕೆ ಎಚ್ಚರವಾದದ್ದು. ರತ್ನಮ್ಮನನ್ನು ನೋಡಿ ರಕ್ತಸ್ರಾವದಿಂದ ಮೊದಲೇ ನಿತ್ರಾಣವಾಗಿದ್ದ ಚಿನ್ನೋಬಯ್ಯನಿಗೆ ಬವಳಿ ಬಂದು, ತನ್ನನ್ನು ಹಿಡಿದವನ ತೋಳಲ್ಲಿ ಜಾರಿ ಬಿದ್ದ.

* * * *

ಅವನಿಗೆ ಎಚ್ಚರವಾದಾಗ, ಅವನು ತನ್ನ ಮನೆಯಲ್ಲಿ ಮಲಗಿದ್ದ.

ಗರಬಡಿದಂತೆ ಅವನ ಹಾಸಿಗೆಯ ಪಕ್ಕದಲ್ಲೇ ಕುಳಿತಿದ್ದ ರಾಘಣ್ಣ. ಅವನನ್ನು ನೋಡಿ ಚಿನ್ನೋಬಯ್ಯ—

'ಅಕ್ಕ ಹೆಂಗಿದಾಳೆ.'

—ಎಂದು ಕೇಳಿದ.

ಅವನ ಪ್ರಶ್ನೆಗೆ ರಾಘಣ್ಣ ಉತ್ತರ ಕೊಡಲಿಲ್ಲ. ಅವನ ಅಳುವೇ ಉತ್ತರವಾಯಿತು.

‘ ಕಡೆಗೂ....ಕಡೆಗೂ....ಅಕ್ಕನ್ನ ತಿಂಪುಕೊಂಡೇ ಬಿಟ್ಯಾ ರಾಘಣ್ಣಾ ....ಆ ನನ್ನ ಹಡೆದಪ್ಪ ನಿನಗೇನು ಅಪರಾಧ ಮಾಡಿದ್ಲು....ಯಾರಿಗೇನು ಅಪರಾಧ ಮಾಡಿದ್ಲು....ಸುಳ್ಳು ಮಾತಾಡಿ ಕೊಂದು ಬಿಟ್ಯಾ....ನಾನು ಪಾಪಿ....ನನ್ನ ಅಣ್ಣ ಅಂದದ್ದಕ್ಕೆ ಆಕೇಗೆ ಹಿಂಗಾಯ್ತು. ’

—ಎಂದು ನೆಲಕ್ಕೆ ಹಣೆಯನ್ನು ಘಟ್ಟಿಸಿಕೊಳ್ಳುತ್ತಾ ಹೇಳಿದ ಚಿನ್ನೋಬಯ್ಯ.

‘ ಚಿನ್ನೋಬಣ್ಣಾ.........

—ಚಿನ್ನೋಬಯ್ಯನನ್ನು ಬಲವಾಗಿ ಹಿಡಿದು ಕೇಳಿದ ರಾಘಣ್ಣ.

‘ ಏನು ? ’

‘ ಇವತ್ತು ನೀನು ನಿಜ ಹೇಳಬೇಕು ಚಿನ್ನೋಬಣ್ಣಾ.’

—ಉಕ್ಕಿನಂತೆ ಬಿರುಸಾದ ಧ್ವನಿಯಲ್ಲಿ ಕೇಳಿದ ರಾಘಣ್ಣ.

‘ ಏನು ? ’

‘ ನಿಜ ಹೇಳಬೇಕು.’

‘ ಹೂ.’

‘ ರತ್ನಕ್ಕನ್ನ ನೀನು ಕೆಡಸಿದ್ದೆಯಾ ? ’

‘ ಥೂ. ಆ ಮಾತು ಆಡೋಕೆ ನಾಚಿಕೆ ಆಗೋಕಿಲ್ವಾ ? ರತ್ನಕ್ಕ ನನ್ನ ತಾಯಿ....ನನ್ನ ತಾಯೀನ ಕೊಂದ ನೀಚ ನೀನು. ಆಕೇನ ತಿಂದದ್ದೂ ಸಾಲ್ದೆ, ಇನ್ನೂ ಮಾತಾಡ್ತೀಯ. ಇನ್ನೊಂದ್ಸಲ ಹಂಗದ್ರೆ ನಾನು ಸತ್ತರೂ ಸರಿಯೆ ನಿನ್ನ ಉಳಿಸಾಕಿಲ್ಲ.’

—ಎಂದ ಚಿನ್ನೋಬಯ್ಯ ಉದ್ರಿಕ್ತನಾಗಿ.

‘ ಅದೆಲ್ಲಾ ಇರಲಿ. ರತ್ನಕ್ಕನ ವಿಷಯದಲ್ಲಿ ನಿನ್ನ ಮಾತು ನಂಬಲೇ?’

—ಕಠೋರವಾಗಿ ಕೇಳಿದ ರಾಘಣ್ಣ.

‘ ನನ್ನ ಹಡೆದಮ್ಮನ ಪಾದದಾಣೆ, ರತ್ನಕ್ಕ ನನ್ನ ತಾಯಿ ಸಮಾನ. ನಾನು ಪಾಪಿ ರಾಘಣ್ಣಾ. ಆದ್ರೆ ನನ್ನ ಕಣ್ಣು ತೆರೆಸಿ, ಬುದ್ಧಿ ಕೊಟ್ಲು ಆ ತಾಯಿ. ನನ್ನ ಕಣ್ಣು ತೆರೆಸಿ ಅಕ್ಕ, ತಾನು ಕಣ್ಣು ಮುಚ್ಚಿಕೊಂಡು ಬಿಟ್ಟಳು.’

—ಎಂದ ಚಿನ್ನೋಬಯ್ಯ ರತ್ನಮ್ಮನನ್ನು ನೆನೆಸಿಕೊಂಡು ಅಳುತ್ತಾ.

ಆ ಮಾತು ಕೇಳಿ ರಾಘಣ್ಣ ಒಂದು ಗಳಿಗೆ ಚಿನ್ನೋಬಯ್ಯನ ಕಂಬನಿ

ತುಂಬಿದ ಕಣ್ಣುಗಳನ್ನೇ ದುರುಗುಟ್ಟಿನೋಡಿ, ಬಳಿಕ, ತನ್ನ ಷರಟಿನ ಷುರೆಯಲ್ಲಿಟ್ಟುಕೊಂಡಿದ್ದ ಕುಡುಗೋಲನ್ನು ತೆಗೆದು, ಅದನ್ನೇ ನೋಡುತ್ತಾ--

' ಈಗೆರಡು ದಿನದಿಂದ ನಿನಗೆ ಪ್ರಜ್ಞೆ ಬರಲಿ ಅಂತ ಕಾದಿದ್ದೆ ಚಿನ್ನೋಬಣ್ಣ—ಈ ಪ್ರಶ್ನೆ ನಿನ್ನ ಕೇಳಬೇಕು ಅಂತ. ನೀನು ಆಕೇನ ಕೆಡಸಿದ್ದು ನಿಜವಾಗಿದ್ದರೆ ಇವತ್ತು ನಿನ್ನ ತೀರಿಸಿಬಿಡಬೇಕು ಅಂತ ಬಂದಿದ್ದೆ. '

—ಎಂದ.

' ಈಗೇನಾಯ್ತು ತೀರಿಸಿಬಿಡು. ಅಂಥ ಅಕ್ಕನ್ನ ಕಳಕೊಂಡು ಬದುಕೋ ಆಸೆ ನಂಗೂ ಇಲ್ಲ. '

—ಎಂದ ಚಿನ್ನೋಬಯ್ಯ, ಅವನ ಮುಂದೆ ಕತ್ತು ಚಾಚಿ.

'ಊಹೂ. ನೀನು ಹೇಳಿದ್ದು ನಿಜ ರತ್ನಕ್ಕ ತಾನು ಕಣ್ಣು ಮುಚ್ಚಿ ನಮ್ಮ ಕಣ್ಣು ತೆರೆಸಿದಳು. ನನ್ನದೇ ತಪ್ಪು, ನಾನು ಬರ್ತೀನಿ, ಚಿನ್ನೋಬಣ್ಣ'

—ಎಂದ ರಾಘಣ್ಣ ನೀರಸವಾದ ಧ್ವನಿಯಲ್ಲಿ.

ಚಿನ್ನೋಬಯ್ಯ ಹೋಗಲಿದ್ದ ರಾಘಣ್ಣನನ್ನು ತೋಳು ಹಿಡಿದು ತಡೆದು, ಅವನ ಕೈಯಲ್ಲಿದ್ದ ಕುಡುಗೋಲು ಕಸಿದು ಕೊಂಡು—

' ಹೋಗೊದಾದ್ರೆ ಹೋಗು ರಾಘಣ್ಣ. ಆದ್ರೆ ತಪ್ಪು ನಿನ್ದು ಅಂತ ನೀನು ಸತ್ರೆ, ನನ್ದೂ ತಪ್ಪೈತೆ. ನಾನೂ ಉಳಿಯಾಕಿಲ್ಲ. ನನ್ನೂ ಜೊತೇಲೇ ಕರಕೊಂಡ್ಹೋಗು. ಇಬ್ರೂ ಸೇರಿ ಆಕೇನ ಕೊಂದ್ವಿ. ಇಬ್ರೂ ಸೇರೇ ಸತ್ಹೋಗೋಣ '

—ಎಂದ.

' ನಾನು ಸಾಯೋಲ್ಲ ಚಿನ್ನೋಬಣ್ಣ, ನಾರಾಯಣ ಇದಾನೆ. ಅವನ್ನ ಸಾಕೋ ಭಾರ ನನ್ನದು.'

—ಎಂದ ರಾಘಣ್ಣ.

' ಹಾಗಾದ್ರೆ ಅದ್ರಲ್ಲಿ ನನಗೂ ಪಾಲು ಇರಲಿ. ಹಂಗಾರ ಅಕ್ಕನ ಸೇವೆ ಮಾಡ್ತೀನಿ'

—ಎಂದ ಚಿನ್ನೋಬಯ್ಯ ಕಣ್ಣಲ್ಲಿ ನೀರು ತುಂಬಿ.

ಆ ಮಾತು ಕೇಳಿ ರಾಘಣ್ಣನ ಕಣ್ಣಲ್ಲೂ ನೀರು ತುಂಬಿತು.

' ಹೂ. ಆಗ ಇಬ್ಬರೂ ಒಂದಾಗಲಿಲ್ಲ. ಈಗಲಾದರೂ ಒಂದಾಗೊಣ'

—ಎಂದ ರಾಘಣ್ಣ ನಿಟ್ಟುಸಿರುಬಿಟ್ಟು.